# ಹಂಪಿ ಪರಿಸರದ ವಿರೂಪಾಕ್ಷ: ಸಾಂಸ್ಕೃತಿಕ ಅಧ್ಯಯನ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಪ್ರಬಂಧ


ಸಂಶೋಧಕಿ
ಕುಮಾರಿ ಜಲಜಾ ಪಾಟೀಲ

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ
ಪ್ರವಾಚಕರು ಮತ್ತು ಮುಖ್ಯಸ್ಥರು





ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬


೨೦೦೭-೨೦೦೮

# ಹಂಪಿ ಪರಿಸರದ ವಿರೂಪಾಕ್ಷ : ಸಾಂಸ್ಕೃತಿಕ ಅಧ್ಯಯನ

[ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಸಂಪ್ರಬಂಧ]



ಸಂಶೋಧಕಿ
ಕುಮಾರಿ ಶಾರದಾ ಪಾಟೀಲ್.

ಮಾರ್ಗದರ್ಶಕರು
ಡಾ. ವಾಸುದೇವ ಬಡಿಗೇರ.
ಪ್ರವಾಚಕರು ಮತ್ತು ಮುಖ್ಯಸ್ಥರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬.




ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ ೫೮೩ ೨೭೬.

೨೦೦೭–೦೮

# ಸಂಶೋಧಕರ ಪ್ರಮಾಣ ಪತ್ರ

**ಹಂಪಿ ಪರಿಸರದ ವಿರೂಪಾಕ್ಷ : ಸಾಂಸ್ಕೃತಿಕ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ವಾಸುದೇವ ಬಡಿಗೇರ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ ಎಂ.ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

SPatil

ಸ್ಥಳ : ಕ.ವಿ.ವಿ. ಹಂಪಿ-ವಿದ್ಯಾರಣ್ಯ

ದಿನಾಂಕ : 30/10/08.

**ಕುಮಾರಿ ಶಾರದಾ ಪಾಟೀಲ್**
ಸಂಶೋಧಕಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬.

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಪರಿಸರದ ವಿರೂಪಾಕ್ಷ : ಸಾಂಸ್ಕೃತಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದಿಂದ ಎಂ.ಫಿಲ್. ಪದವಿಗಾಗಿ ಕುಮಾರಿ ಶಾರದಾ ಪಾಟೀಲ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಕ.ವಿ.ವಿ. ಹಂಪಿ–ವಿದ್ಯಾರಣ್ಯ
ದಿನಾಂಕ : 30/10/2008

(ಡಾ. ವಾಸುದೇವ ಬಡಿಗೇರ)
ಮುಖ್ಯಸ್ಥರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ – ೫೮೩ ೨೭೬.

# ಪರಿವಿಡಿ

# ಅಧ್ಯಾಯ ೧

೧. ಪ್ರಸ್ತಾವನೆ.

೧.೧ ಅಧ್ಯಯನದ ಮಹತ್ವ, ಸ್ವರೂಪ, ವ್ಯಾಪ್ತಿ ಮತ್ತು ಅಧ್ಯಯನದ ಕ್ರಮಗಳು

# ಅಧ್ಯಾಯ ೧

## ೧. ಪ್ರಸ್ತಾವನೆ :

ಹಂಪಿಯ ಅಧಿದೇವತೆಯಾದ ಹಂಪಾದೇವಿ ಅಥವಾ ಪಂಪಾದೇವಿಯ ಹೆಸರೇ ಊರಿಗೆ ಬಂದಿದೆ. ಹಂಪಿಯನ್ನು ಪಂಪಾಪೂರವೆಂದು ಕರೆಯಲಾಗುತ್ತಿತ್ತು. ಇಲ್ಲಿ ಹರಿಯುವ ತುಂಗಭದ್ರಾ ನದಿಯನ್ನು ಸಹ ಪಂಪಾನದಿಯೆಂದು ಕರೆಯಲಾಗಿದೆ. ಪಂಪಾಪುರವು ಪಂಪಾ ನದಿಯ ದಕ್ಷಿಣ ದಂಡೆಯ ಮೇಲಿರುವುದೆಂದು ಪಂಪಾ ಮಹಾತ್ಮೆ ತಿಳಿಸುತ್ತದೆ. ಪಾರ್ವತಿಯ ಅವತಾರವಾದ ಪಂಪಾದೇವಿಯು ಹಂಪೆಯ ಹತ್ತಿರವಿರುವ ಪಂಪಾ ಸರಸ್ಸಿನ ದಡದಲ್ಲಿ ಕಠಿಣವಾದ ತಪಸ್ಸನ್ನು ಆಚರಿಸಿ ಶಿವನ ಅವತಾರವಾದ ವಿರೂಪಾಕ್ಷನನ್ನು ವರಿಸಿದಳು. ಆದುದರಿಂದ ವಿರೂಪಾಕ್ಷನು ಪಂಪಾ-ವಿರೂಪಾಕ್ಷ ಅಥವಾ ಪಂಪಾಪತಿ ಎಂಬ ಹೆಸರುಗಳನ್ನು ಪಡೆದ.

ಐತಿಹಾಸಿಕ ಹಂಪಿಯ ಪ್ರಾಚೀನ ಕ್ರಿ.ಶ. ೭ ನೇ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆಯಾದರೂ, ಪಂಪಾಪುರದ ಅಧಿದೇವತೆಯಾದ ವಿರೂಪಾಕ್ಷನ ಉಲ್ಲೇಖ ಸಿಗುವುದು ೧೧ ನೇ ಶತಮಾನದ ಶಾಸನದಲ್ಲಿ. ಕಳಚೂರಿ ಅರಸ ಬಿಜ್ಜಳನ ಕ್ರಿ.ಶ. ೧೧೬೩ ರ ಶಾಸನದಲ್ಲಿ ಹಂಪಿ ವಿರೂಪಾಕ್ಷ ಎಂಬ ಪ್ರಥಮ ಉಲ್ಲೇಖ ದೊರೆಯುತ್ತದೆ. ಇದರನ್ವಯ ಕ್ರಿ.ಶ. ೧೨ ನೇ ಶತಮಾನದ ಹೊತ್ತಿಗೆ ಹಂಪಿಯು ಪ್ರಮುಖ ಧಾರ್ಮಿಕ ಕೇಂದ್ರವಾಗಿ ಬೆಳೆದಿತ್ತೆಂದು, ವಿರೂಪಾಕ್ಷನು ಹಂಪಿಯ ಅಧಿದೇವತೆಯಾಗಿದ್ದನೆಂದು ಗ್ರಹಿಸಬಹುದು. ಈ ಹಿನ್ನೆಲೆಯಲ್ಲಿ ವಿರೂಪಾಕ್ಷನ ಆರಾಧನೆ ಅತ್ಯಂತ ಜನಪ್ರೀಯವಾಗಿದ್ದುದನ್ನು ಸಮಕಾಲೀನ ಶಾಸನ, ಸಾಹಿತ್ಯ, ಐತಿಹ್ಯ ಮುಂತಾದವುಗಳಿಂದ ತಿಳಿಯಬಹುದು. ಕನ್ನಡದ ಪ್ರಸಿದ್ಧ ಕವಿ ಹರಿಹರ ವಿರೂಪಾಕ್ಷನನ್ನು ಗಮನದಲ್ಲಿಟ್ಟುಕೊಂಡೇ 'ಗಿರಿಜಾ ಕಲ್ಯಾಣ' ರಚಿಸಿದ್ದಾನೆ. ಇವನ 'ಪಂಪಾ ಶತಕ' ದಲ್ಲಿ ವಿರೂಪಾಕ್ಷನನ್ನು ಹಂಪಿಯರಸ ಎಂದೇ ಸಂಭೋದಿಸಲಾಗಿದೆ. ರಾಘವಾಂಕನು ಕೂಡ ತನ್ನ 'ಹರಿಶ್ಚಂದ್ರ ಕಾವ್ಯ' ದಲ್ಲಿ ಪಂಪಾ-ವಿರೂಪಾಕ್ಷ ಮತ್ತು ಪಂಪಾಂಬಿಕೆಯರ ಸ್ತುತಿಯನ್ನು ಮಾಡಿದ್ದಾನೆ.

೧೪ ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯೊಂದಿಗೆ ವಿರೂಪಾಕ್ಷನ ಮಹತ್ವ ಇನ್ನೂ ಅಧಿಕವಾಯಿತು. ಅವನು ವಿಜಯನಗರ ಪಟ್ಟಣದ ರಕ್ಷಕ ಮತ್ತು ವಿಜಯನಗರ ಅರಸರ ಆರಾಧ್ಯ ದೈವವಾದ, ವಿಜಯನಗರದ ಸಂಗಮ ದೊರೆಗಳಿಂದ ಅರವೀಡು ದೊರೆಗಳವರೆಗೆ ಎಲ್ಲರೂ ವಿರೂಪಾಕ್ಷನಿಗೆ ಅಪಾರ ದಾನ-ದತ್ತಿಗಳನ್ನು ಮಾಡಿ, ವಿರೂಪಾಕ್ಷನ ಅನುಗ್ರಹ ಪಡೆಯಲು ಪ್ರಯತ್ನಿಸಿದ ಸಂಗತಿಗಳು ಶಾಸನಗಳಲ್ಲಿ ಕಂಡುಬರುತ್ತವೆ. ವಿಜಯನಗರದ ಅನೇಕ ಶಾಸನಗಳ ಕೊನೆಯಲ್ಲಿ 'ಶ್ರೀ ವಿರೂಪಾಕ್ಷ' ಎಂಬ ಹಸ್ತಾಕ್ಷರ ವಿರೂಪಾಕ್ಷನೇ ನಿಜವಾದ ವಿಜಯನಗರದ ದೊರೆಯೆಂಬ ಅರಸರ ಭಾವನೆಗೆ ಸಾಕ್ಷಿಯಾಗಿದೆ.

ಜನ ಸಾಮಾನ್ಯರಲ್ಲೂ ವಿರೂಪಾಕ್ಷನ ಪ್ರಭಾವ ದಟ್ಟವಾಗಿರುವುದನ್ನು ಗಮನಿಸಬಹುದು. ಹಂಪಿಯಿಂದ ಬಹುದೂರದ ಊರುಗಳಲ್ಲಿ ದಾನ ಕೊಡುವ ಸಂದರ್ಭದಲ್ಲಿಯೂ ವಿರೂಪಾಕ್ಷನ ಸನ್ನಿಧಿಯಲ್ಲಿ ದಾನ ನೀಡಿದ ಸಂಗತಿಗಳು ಶಾಸನದಲ್ಲಿ ಕಂಡುಬರುತ್ತಿದ್ದು, ವಿರೂಪಾಕ್ಷನ ದೈವೀ ಪ್ರಭಾವಕ್ಕೆ ಸಾಕ್ಷಿಯಾಗಿವೆ.

ಹೀಗೆ ವಿರೂಪಾಕ್ಷ ದೇವರ ಆರಾಧನೆ ನಾಡಿನಲ್ಲಿ ಪ್ರಾಚೀನ ಹಿನ್ನೆಲೆಯನ್ನು ಹೊಂದಿದ್ದು, ಕಾಲ-ಕಾಲಕ್ಕೆ ಆಳರಸರ ಮತ್ತು ಜನ-ಸಮುದಾಯದ ಮೇಲೆ ಪ್ರಭಾವ ಬೀರುತ್ತ ಬಂದಿರುವುದನ್ನು ಸಮಕಾಲೀನ ಸಾಹಿತ್ಯ, ಕೃತಿಗಳು, ಶಾಸನಗಳು, ದೇವಾಲಯ ವಾಸ್ತು ಶಿಲ್ಪಗಳು, ಧಾರ್ಮಿಕ ಆಚರಣೆ, ಜನಪದ ನಂಬಿಕೆಗಳಿಂದ ಗ್ರಹಿಸಬಹುದಾಗಿದೆ. ವಿರೂಪಾಕ್ಷ ಕೇವಲ ಹಂಪಿಗೆ ಸೀಮಿತವಾಗದೆ ಸುತ್ತಮುತ್ತಲಿನ ಪರಿಸರದಲ್ಲಿ ವ್ಯಾಪಿಸಿ, ಆಳವಾದ ಪ್ರಭಾವ ಬೀರಿರುವುದು ಇದರಿಂದ ವೇದ್ಯವಾಗುತ್ತದೆ. ಅಂತೆಯೇ ಹಂಪಿಯನ್ನು ಹೊರತುಪಡಿಸಿ ಸುಮಾರು ಹತ್ತಕ್ಕೂ ಅಧಿಕವಾದ ವಿರೂಪಾಕ್ಷ ದೇವಾಲಯಗಳನ್ನು ಈ ಪರಿಸರದಲ್ಲಿ ಕಾಣಬಹುದು. ಅಲ್ಲೆಲ್ಲಾ ಧಾರ್ಮಿಕ ಪೂಜೆ, ಪುನಸ್ಕಾರಗಳು, ಜಾತ್ರ-ಉತ್ಸವಗಳು, ಅಲ್ಪಸ್ವಲ್ಪ ಸ್ಥಳೀಯ ಭಿನ್ನತೆಯೊಂದಿಗೆ ಹಂಪಿ ವಿರೂಪಾಕ್ಷ ದೇವಾಲಯದ ಆಚರಣೆಗಳನ್ನು ಹೋಲುತ್ತವೆ.

ಹೀಗೆ ವಿರೂಪಾಕ್ಷನ ಆರಾಧನೆ ಧಾರ್ಮಿಕ ಮತ್ತು ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಹೊಂದಿ ಒಂದು ಪಂಥೋಪಾದಿಯಲ್ಲಿ ಬೆಳೆದಿರುವುದನ್ನು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಹಂಪಿ ಪರಿಸರದ ವಿರೂಪಾಕ್ಷ ಅಧ್ಯಯನದ ಒಂದು ವಸ್ತುವಾಗಿ ಗೋಚರಿಸುತ್ತದೆ. ಅದರ ಫಲವೇ ಪ್ರಸ್ತುತ ಅಧ್ಯಯನ.

**೧.೧ ಅಧ್ಯಯನದ ಮಹತ್ವ, ಸ್ವರೂಪ, ವ್ಯಾಪ್ತಿ :**

ಹಂಪಿಯ ವಿರೂಪಾಕ್ಷ ಈ ಸಾಂಸ್ಕೃತಿಕ ಅಧ್ಯಯನವು ಹಲವು ದೃಷ್ಟಿಯಿಂದ ಮಹತ್ವನ್ನು ಪಡೆದುಕೊಂಡಿದೆ. ಮುಖ್ಯವಾಗಿ ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಮಹತ್ವಗಳನ್ನು ಇಲ್ಲಿ ಗುರುತಿಸಬಹುದು. ವಿರೂಪಾಕ್ಷ ಪರಿಕಲ್ಪನೆ ವೈದಿಕ ಸಾಹಿತ್ಯದಷ್ಟು ಪ್ರಾಚೀನತೆಯನ್ನು ಪಡೆದುಕೊಂಡಿದ್ದರೂ ಅದು ಒಂದು ನಿಶ್ಚಿತ ರೂಪವನ್ನು ಪಡೆದುಕೊಂಡು ದೇವಾಲಯ ನಿರ್ಮಾಣಕ್ಕೆ ಕಾರಣವಾದದ್ದು ಕ್ರಿ.ಶ. ೭ ನೆಯ ಶತಮಾನದಲ್ಲಿ ಅಂದರೆ ಬಾದಾಮಿ ಚಾಲುಕ್ಯರ ಕಾಲದಲ್ಲಿ ಮೊಟ್ಟ ಮೊದಲಿಗೆ ಹಂಪಿಯಲ್ಲಿ ವಿರೂಪಾಕ್ಷ ದೇವಾಲಯ ರೂಪುಗೊಂಡದ್ದು, ವಾಸ್ತುಶಿಲ್ಪ ಆಧಾರಗಳಿಂದ ತಿಳಿಯಬಹುದಾಗಿದೆ. ತದನಂತರ ಹಂಪಿ ಒಂದು ಕ್ಷೇತ್ರವಾಗಿ ಬೆಳೆಯುತ್ತಾ ಬಂದದ್ದು ವಿರೂಪಾಕ್ಷ ಆರಾಧನೆಯ ಮಹತ್ವ ಹೆಚ್ಚುತ್ತಾ ನಡೆಯಿತು.

ಕಲ್ಯಾಣ ಚಾಲುಕ್ಯರ ಕಾಲದಲ್ಲೂ ವಿರೂಪಾಕ್ಷನ ಪ್ರಭಾವಕ್ಕೆ ಒಳಗಾದ ಸಾಮ್ರಾಟರು ತಮ್ಮ ಸಾಮ್ರಾಜ್ಯದಲ್ಲಿ ಅಲ್ಲಲ್ಲಿ ಪ್ರತ್ಯೇಕ ವಿರೂಪಾಕ್ಷ ದೇವಾಲಯಗಳನ್ನು ನಿರ್ಮಿಸಿದರು. ೧೩ ನೆಯ ಶತಮಾನದಲ್ಲಿ ಆಳಿದ ಕುಮ್ಮಟದ ಅರಸರೂ ಕೂಡ ಇದಕ್ಕೆ ಹೊರತಾಗಿರಲಿಲ್ಲ. ಹಂಪಿ ಸನಿಹದ ಅಂಜನಹಳ್ಳಿಯಲ್ಲಿ ಪಂಪಾಪತಿ ದೇವಾಲಯವೊಂದನ್ನು ನಿರ್ಮಿಸಿರುತ್ತಾರೆ.

ವಿರೂಪಾಕ್ಷ ಆರಾಧನೆ ಲೋಕಪ್ರಿಯವಾದದ್ದು ವಿಜಯನಗರ ಕಾಲದಲ್ಲಿ. ವಿರೂಪಾಕ್ಷನ ಪರಮಭಕ್ತರಾಗಿದ್ದ ವಿಜಯನಗರದ ಸಾಮ್ರಾಟರು ವಿರೂಪಾಕ್ಷನೇ ನಿಜವಾದ ದೊರೆ ತಾವು ಆತನ ಪ್ರತಿನಿಧಿಗಳು ಎಂದು ಭಾವಿಸಿ ತಮ್ಮ ಶಾಸನಗಳ ಕೊನೆಯಲ್ಲಿ 'ಶ್ರೀ ವಿರೂಪಾಕ್ಷ' ಎಂಬ ಅಂಕಿತವನ್ನು ಹಾಕುತ್ತಿದ್ದರು. ಈ ಕಾಲದಲ್ಲಿ ವಿರೂಪಾಕ್ಷನ ಪೂಜೆಗಳು ವಿಸ್ತೃತಗೊಂಡವು. ಜಾತ್ರೆ ಉತ್ಸವಗಳು ವಿಜೃಂಭಣೆಗೊಂಡವು. ಅಷ್ಟೇ ಅಲ್ಲ ಹಂಪಿಯ ಸುತ್ತಮುತ್ತಲ ಪ್ರದೇಶಗಳಲ್ಲಿ ಅರಸರು ಅವರ ಸಾಮಂತರು ಗಣ್ಯಮಾನ್ಯರು ಅನೇಕ ವಿರೂಪಾಕ್ಷ ದೇವಾಲಯಗಳನ್ನು ಕಟ್ಟಿದರು.

ಹೀಗೆ ರಾಜಕೀಯ ಏಳು-ಬೀಳುಗಳಿಗೆ ವಿರೂಪಾಕ್ಷ ದೇವರು ಸಾಕ್ಷಿಯಾಗಿರುವುದನ್ನು ಚರಿತ್ರೆಯುದ್ದಕ್ಕೂ ಗಮನಿಸಬಹುದು. ವಿರೂಪಾಕ್ಷನ ಮೂಲಕ ರಾಜಕೀಯ ಚರಿತ್ರೆಯನ್ನು ಹೊಸ ದೃಷ್ಟಿಕೋನದೊಂದಿಗೆ ಗ್ರಹಿಸಬಹುದಾದ ಸಾಧ್ಯತೆಗಳು ಹೆಚ್ಚಾಗಿ ಕಂಡು ಬರುತ್ತವೆ.

ವಿರೂಪಾಕ್ಷ ಆರಾಧನೆ ಕೇವಲ ರಾಜಕೀಯ ಪೋಷಣೆಯಲ್ಲಿ ಧಾರ್ಮಿಕ ಆಚರಣೆಯಾಗಿ ಮಾತ್ರ ಬೆಳೆದು ಬಂದಿಲ್ಲ. ಅಲ್ಲಿಯ ಪ್ರತಿನಿತ್ಯದ, ಸಾಪ್ತಾಹಿಕ, ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ ಮತ್ತು ವಾರ್ಷಿಕವಾಗಿ ಆಚರಿಸಲ್ಪಡುವ ವಿಸ್ತೃತವಾದ ಪೂಜಾ ಪದ್ಧತಿಗಳು, ಧಾರ್ಮಿಕ ಆಚರಣೆಗಳು, ಸಾಂಸ್ಕೃತಿಕ ಮಹತ್ವವನ್ನು ಪಡೆದುಕೊಂಡಿವೆ. ಅಂತೆಯೇ ದೇವರ ಕುರಿತಾದ ನಂಬಿಕೆ-ಸಂಪ್ರದಾಯಗಳು, ಐತಿಹ್ಯಗಳು, ಜಾತ್ರೆ-ಉತ್ಸವಗಳು ಎಲ್ಲವೂ ಸಂಸ್ಕೃತಿಯ ಅಧ್ಯಯನಕ್ಕೆ ಉತ್ತಮ ಆಕರಗಳಾಗಿವೆ. ಇಂಥವುಗಳನ್ನೆಲ್ಲ ಅಧ್ಯಯನಕ್ಕೆ ಒಳಪಡಿಸುವುದೆಂದರೆ, ಇಡೀ ಸಮುದಾಯದ ಬಗೆಗಿನ ಸೂಕ್ಷ್ಮತರವಾದ ತಿಳುವಳಿಕೆಗೆ ಆಸ್ಪದವಾಗುತ್ತವೆ. ಹಾಗಾಗಿ ಸಮುದಾಯದ ನಂಬಿಕೆ, ಆಚಾರ-ವಿಚಾರ ಎಲ್ಲವುಗಳನ್ನು ಅವುಗಳ ಅರ್ಥ ಆಶಯಗಳನ್ನು ಸ್ಪಷ್ಟವಾಗಿ ಅರಿತುಕೊಳ್ಳಲು ಅವಕಾಶವಾಗುತ್ತದೆ. ಇಂತಹ ತಿಳುವಳಿಕೆ ಪ್ರಸ್ತುತ ಆಧುನಿಕ ಸಂದರ್ಭದಲ್ಲಿ ಉಪೇಕ್ಷೆಗೆ ಒಳಗಾಗಿರುವ ಧಾರ್ಮಿಕ ಆಚರಣೆಗಳ ಹಿನ್ನೆಲೆ, ಅರ್ಥ, ಆಶಯಗಳನ್ನು ಬಿಂಬಿಸಿ ಅವುಗಳ ಬಗೆಗೆ ತಿಳುವಳಿಕೆ ಮೂಡಿಸಬಹುದಾಗಿದೆ. ಇಂತಹ ತಿಳುವಳಿಕೆಗಳು ಮಾತ್ರ ಧಾರ್ಮಿಕ ಸಂಕುಚಿತತೆಯನ್ನು ತೊಡೆದುಹಾಕಿ, ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯ ಬಗೆಗೆ ಅಭಿಮಾನವನ್ನು ಮೂಡಿಸುತ್ತವೆಂದೆ ಹೇಳಬಹುದು. ಅಂತಹ ಆಶಯವನ್ನು ಪ್ರಸ್ತುತ ಅಧ್ಯಯನದಲ್ಲಿ ಹೊಂದಲಾಗಿದೆ.

**ಸ್ವರೂಪ :**

'ಹಂಪಿಯ ವಿರೂಪಾಕ್ಷ ಸಾಂಸ್ಕೃತಿಕ ಅಧ್ಯಯನ' ಈ ಶೀರ್ಷಿಕೆ ಸೂಚಿಸುವಂತೆ ಪ್ರಸ್ತುತ ಅಧ್ಯಯನವು ಸಾಂಸ್ಕೃತಿಕ ಸ್ವರೂಪದ್ದಾಗಿದೆ. ಅಂದರೆ ವಿರೂಪಾಕ್ಷ ದೈವದ ಮೂಲ ಪರಿಕಲ್ಪನೆ ಆರಾಧನೆಯ ಪ್ರಸರಣ ಮತ್ತು ಪ್ರಭಾವವನ್ನು ಸಮಕಾಲೀನ ದೇವಾಲಯ, ಮೂರ್ತಿಶಿಲ್ಪ, ಶಾಸನ, ಸಾಹಿತ್ಯ ಮತ್ತು ಐತಿಹ್ಯಗಳ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ. ಹಂಪಿ ಪರಿಸರದಲ್ಲಿ ಪ್ರಚಲಿತವಾಗಿರುವ ವಿರೂಪಾಕ್ಷ ಆರಾಧನೆಯ ನೆಲೆ ಹಿನ್ನೆಲೆಯನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಅಂತೆಯೇ ಪರಿಸರದ ಭೌಗೋಳಿಕ ಪರಿಸರದ ಅವಲೋಕನ, ಪ್ರಾಗಿತಹಾಸ ಕಾಲ ಸಂಸ್ಕೃತಿಯ ಮತ್ತು ಚಾರಿತ್ರಿಕ ಪರಂಪರೆಯ ಅವಲೋಕನವನ್ನು ಮಾಡಲಾಗಿದೆ. ಇವುಗಳಿಂದ ಹಂಪಿ ಪರಿಸರ ನದಿ, ಬೆಟ್ಟಗಳಿಂದ ಕೂಡಿ ಒಂದು ಪ್ರತ್ಯೇಕ ಭೌಗೋಳಿಕ ಸ್ಥಾನಮಾನ ಹೊಂದಿರುವದನ್ನು ಗುರುತಿಸಬಹುದು. ಈ ಭೌಗೋಳಿಕ ಪರಿಸರದ ಪ್ರಭಾವವನ್ನು ಈ ಪ್ರದೇಶದ ರಾಜಕೀಯ & ಸಾಂಸ್ಕೃತಿಕ ಚರಿತ್ರೆಯಲ್ಲಿ ಗುರುತಿಸಬಹುದಾಗಿದೆ. ಅಂತೆಯೇ ಇಲ್ಲಿಯ ವಿಫುಲವಾದ ಜಲಸಂಪತ್ತು, ಸಸ್ಯ ಸಂಪತ್ತು, ಪ್ರಾಣಿ ಸಂಪತ್ತು ಮತ್ತು ವಾಸಕ್ಕೆ ಯೋಗ್ಯವಾದ ಗವಿ ಕಂದರಗಳು ಶಿಲಾಯುಗದುದ್ದಕ್ಕೂ ಮಾನವ ಜೀವನ ಸಂಸ್ಕೃತಿಯ ಪೋಷಣೆಗೆ ಕಾರಣವಾಗಿರುವುದನ್ನು ಗುರುತಿಸಬಹುದು. ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ, ನೂತನ ಶಿಲಾಯುಗದ ಹಲವಾರು ಸಾಂಸ್ಕೃತಿಕ ನೆಲೆಗಳು ಈ ಪರಿಸರದಲ್ಲಿ ಕಂಡುಬಂದಿರುವುದು ಇದಕ್ಕೆಲ್ಲಾ ಸಾಕ್ಷಿಯಾಗಿದೆ. ಹೀಗೆ ಪ್ರಾಚೀನ ಸಂಸ್ಕೃತಿಯ ತಳಹದಿಯ ಮೇಲೆ ಇಲ್ಲಿ

ಚರಿತ್ರೆಯು ಕಾಲದುದ್ದಕ್ಕೂ ಹಲವಾರು ಸ್ಥಿತ್ಯಂತರಗಳನ್ನು ಹೊಂದುತ್ತಾ ಬಂದಿದೆ. ಹಾಗಾಗಿ ಹಲವಾರು ರಾಜಮನೆತನಗಳು ಅಸ್ತಿತ್ವಕ್ಕೆ ಬಂದು ಪತನಹೊಂದಿವೆ. ರಾಜಕೀಯ ಶಕ್ತಿ ಹೀಗೆ ಸ್ಥಿತ್ಯಂತರಗಳನ್ನು ಹೊಂದುತ್ತಾ ಇದ್ದರೂ ದೈವಿ ಶಕ್ತಿಯಾದ ವಿರೂಪಾಕ್ಷ ಯಾವುದೇ ಸ್ಥಿತ್ಯಂತರಕ್ಕೆ ಒಳಗಾಗದೇ ನಿರಂತರ ಪ್ರಭಾವವನ್ನು ಉಳಿಸಿಕೊಂಡು ಬಂದಿರುವುದು ಆ ದೈವದ ಪ್ರಭಾವಕ್ಕೆ ಸಾಕ್ಷಿಯಾಗಿದೆ.

ವಿರೂಪಾಕ್ಷ ಆರಾಧನೆಯ ಮೂಲ ಮತ್ತು ವೈವಿಧ್ಯತೆಯ ಕುರಿತಾಗಿಯೂ ಕೂಡ ಪ್ರಸ್ತುತ ಅಧ್ಯಯನದಲ್ಲಿ ವಿವೇಚಿಸಲಾಗಿದೆ. ಅಂತೆಯೇ ಕಾಲಕ್ರಮೇಣ ರೂಢಿಗೊಂಡ ವಿಸ್ತೃತ ಪೂಜಾ ಪದ್ಧತಿಗಳು, ಧಾರ್ಮಿಕ ಆಚರಣೆಗಳು ಮತ್ತು ವಿರೂಪಾಕ್ಷ ಸಂಬಂಧಿ ಬೆಳೆದುಬಂದ ಐತಿಹ್ಯಗಳನ್ನು ಸಂಗ್ರಹಿಸಿ ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಜೊತೆಗೆ ಹಂಪಿ ಪರಿಸರದ ಎಲ್ಲಾ ವಿರೂಪಾಕ್ಷ ದೇವಾಲಯಗಳ ವಾಸ್ತು ಶಿಲ್ಪ ಮೂರ್ತಿಶಿಲ್ಪ ಮತ್ತು ವರ್ಣಚಿತ್ರ ಕಲೆಯ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ. ಇದರಿಂದ ವಿರೂಪಾಕ್ಷ ಆರಾಧನೆಯ ಪ್ರಸರಣ ಮತ್ತು ಪ್ರಭಾವವನ್ನು ಅರಿತುಕೊಳ್ಳಲು ಆಸ್ಪದವಾಗುತ್ತದೆ.

ಅಂತೆಯೇ ವಿರೂಪಾಕ್ಷನ ಕುರಿತಾದ ಜನಸಾಮಾನ್ಯರಲ್ಲಿನ ನಂಬಿಕೆ ಸಂಪ್ರದಾಯಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿ ಅವುಗಳ ಮಹತ್ವವನ್ನು ಅರಿಯುವ ಆಶಯವನ್ನು ಹೊಂದಲಾಗಿದೆ. ಎಲ್ಲ ವಿರೂಪಾಕ್ಷ ದೇವಾಲಯಗಳಲ್ಲಿ ಜಾತ್ರೆ ಉತ್ಸವಗಳ ಆಚರಣೆಯ ವಿಧಿ-ವಿಧಾನಗಳನ್ನು ಸಂಗ್ರಹಿಸಲಾಗಿದ್ದು, ಅವುಗಳನ್ನು ಚರ್ಚಿಸಲಾಗಿದ್ದು ಆ ಮೂಲಕ ಅವುಗಳ ಸಾಂಸ್ಕೃತಿಕ ಮಹತ್ವವನ್ನು ವಿಷದಪಡಿಸುವ ಪ್ರಯತ್ನ ಇಲ್ಲಿದೆ. ಹೀಗೆ ಇಡೀ ಅಧ್ಯಯನದ ಸ್ವರೂಪವು ವಿರೂಪಾಕ್ಷ ದೈವೀ ಕೇಂದ್ರಿತವಾದ ಪರಂಪರೆಯ ಅವಲೋಕನದ ಆಶಯವನ್ನು ಹೊಂದಿದೆ ಎಂದು ಹೇಳಬಹುದು.

**ವ್ಯಾಪ್ತಿ :**

ಪ್ರಸ್ತುತ ಅಧ್ಯಯನವು ತನ್ನದೇ ಆದ ಇತಿ-ಮಿತಿಗಳನ್ನು ಹೊಂದಿದೆ. ಅವುಗಳನ್ನು ಮುಖ್ಯವಾಗಿ ವಿಷಯವ್ಯಾಪ್ತಿ ಹಾಗೂ ಕ್ಷೇತ್ರವ್ಯಾಪ್ತಿ ಎಂದು ಗುರುತಿಸಲಾಗಿದೆ. ವಿಷಯವು ಸಾಂಸ್ಕೃತಿಕ ಸ್ವರೂಪದ್ದಾಗಿದ್ದರೂ ಮುಖ್ಯವಾಗಿ ವಿರೂಪಾಕ್ಷ ದೈವದ ಮೂಲ, ಪ್ರಾಚೀನತೆ, ವಿರೂಪಾಕ್ಷ ದೇವಾಲಯಗಳ ವಾಸ್ತುಶಿಲ್ಪ, ಮೂರ್ತಿ ಶಿಲ್ಪಗಳ ಅವಲೋಕನ, ಆರಾಧನೆಯ ವಿಧಿವಿಧಾನಗಳು, ನಂಬಿಕೆ-ಸಂಪ್ರದಾಯ, ಜಾತ್ರೆ-ಉತ್ಸವಗಳಿಗೆ ಮಾತ್ರ ಸೀಮಿತವಾಗಿದೆ. ಅದರಲ್ಲೂ ಹಂಪಿ ವಿರೂಪಾಕ್ಷ ದೇವಾಲಯ ಹೊರತುಪಡಿಸಿ ಉಳಿದ ದೇವಾಲಯಗಳು ಅಂತ ಮಹತ್ವದ ದೇವಾಲಯಗಳು ಆಗಿಲ್ಲದಿರುವುದರಿಂದ ಅಲ್ಲೆಲ್ಲ ವಿಸ್ತೃತವಾದ ಧಾರ್ಮಿಕ-ಆಚರಣೆಗಳು ರೂಢಿಗೊಂಡಿಲ್ಲವಾಗಿರುವುದರಿಂದ ಪ್ರಧಾನವಾಗಿ ಹಂಪಿಯ ವಿರೂಪಾಕ್ಷ ದೇವಾಲಯದ ಆಚರಣೆಗಳನ್ನು ಕುರಿತಾಗಿ ಗಮನಿಸಲಾಗಿದೆ. ಪ್ರಾಸಂಗಿಕವಾಗಿ ಇತರ ದೇವಾಲಯಗಳಲ್ಲಿ ಆಚರಣೆಯಲ್ಲಿರುವ ಕೆಲವೊಂದು ಜಾತ್ರೆ-ಉತ್ಸವಗಳ ಬಗೆಗೂ ಇಲ್ಲಿ ಚರ್ಚಿಸಲಾಗಿದೆ.

ಕ್ಷೇತ್ರವ್ಯಾಪ್ತಿಯು ಶೀರ್ಷಿಕೆ ಸೂಚಿಸುವಂತೆ ಹಂಪಿ ಪರಿಸರಕ್ಕೆ ಸೀಮಿತವಾಗಿದೆ. ಅಂದರೆ ಹಂಪಿ ಕೇಂದ್ರ ನೆಲೆಯನ್ನಾಗಿಸಿಕೊಂಡು ಸುತ್ತಲಿನ ಸು. ೨೦ ಕಿ.ಮೀ. ವ್ಯಾಪ್ತಿಯ ವಿರೂಪಾಕ್ಷ ದೇವಾಲಯಗಳನ್ನು ಇಲ್ಲಿ ಅಧ್ಯನಕ್ಕೆ ಒಳಪಡಿಸಲಾಗಿದೆ. ಈ ವ್ಯಾಪ್ತಿಯಲ್ಲಿಯೇ ಹೆಚ್ಚು ವಿರೂಪಾಕ್ಷ

ದೇವಾಲಯಗಳಿರುವುದು ವಿಶೇಷವಾಗಿದೆ. ಅಂತೆಯೇ ಅಧ್ಯಯನಕ್ಕೆ ಪೂರಕವಾಗಿರಲೆಂಬ ಉದ್ದೇಶದಿಂದ ಹಂಪಿ ಪರಿಸರದಿಂದ ಸ್ವಲ್ಪ ದೂರದಲ್ಲಿರುವ ರಾಣೆಬೆನ್ನೂರು ಸನಿಹದ ಇಟಗಿಯ ವಿರೂಪಾಕ್ಷ ದೇವಾಲಯವನ್ನು ಇಲ್ಲಿ ಪರಿಗಣಿಸಲಾಗಿದೆ.

ಒಟ್ಟಿನಲ್ಲಿ ಪ್ರಸ್ತುತ ಹಂಪಿಯ ನೆರೆ ಹೊರೆ ಅಂದರೆ ಬಳ್ಳಾರಿ ಹಾಗೂ ಕೊಪ್ಪಳ ಜಿಲ್ಲೆಗಳ ಪ್ರದೇಶ ವ್ಯಾಪ್ತಿಯನ್ನು ಈ ಅಧ್ಯಯನ ಒಳಗೊಂಡಿದೆ.

**ಅಧ್ಯಯನದ ಕ್ರಮಗಳು :**

ಪ್ರಸ್ತುತ ಅಧ್ಯಯನವು ಧಾರ್ಮಿಕ ವಿಷಯಕ್ಕೆ ಸಂಬಂಧಿಸಿ ಸಾಂಸ್ಕೃತಿಕ ಸ್ವರೂಪದ್ದಾಗಿರುವುದರಿಂದ ಧಾರ್ಮಿಕ ಪರಂಪರೆ ಮತ್ತು ಸಾಂಸ್ಕೃತಿಕ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸಬೇಕಾದ ಅವಶ್ಯಕತೆಯನ್ನು ಹೊಂದಿದೆ. ಹಾಗಾಗಿ ಪ್ರಸ್ತುತ ಅಧ್ಯಯನವನ್ನು ಪ್ರಧಾನವಾಗಿ ಕ್ಷೇತ್ರ ಕಾರ್ಯದ ಹಿನ್ನೆಲೆಯಲ್ಲಿ ಮಾಡಲಾಗಿದೆ. ಅಂದರೆ ಇಡೀ ಪರಿಸರದ ವಿರೂಪಾಕ್ಷ ದೇವಾಲಯಗಳ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪಗಳ ವಿವರಗಳನ್ನು ಅಲ್ಲಿಯ ಧಾರ್ಮಿಕ ಆಚರಣೆಗಳನ್ನು, ಪರಂಪರೆ ನಂಬಿಕೆಗಳನ್ನು, ಜಾತ್ರೆ ಉತ್ಸವಗಳನ್ನು ನೇರವಾಗಿ ಕ್ಷೇತ್ರಕಾರ್ಯ ಕೈಗೊಂಡು, ಮಾಹಿತಿಯನ್ನು ಸಂಗ್ರಹಿಸಿ ಇಲ್ಲಿ ವಿಷದಪಡಿಸಲಾಗಿದೆ. ಜೊತೆಗೆ ಪೂರಕವಾದ ಸಾಹಿತ್ಯಿಕ, ಶಾಸನ, ಪರಾಮರ್ಶನದ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿದ್ದು, ಅವೆಲ್ಲವುಗಳ ವಿಶ್ಲೇಷಣೆ, ಸಂಯೋಜನೆ ನಡೆಸಿ ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಸಾಕಷ್ಟು ಛಾಯಾಚಿತ್ರಗಳನ್ನು ಕೂಡ ಪಡೆದುಕೊಂಡು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹೀಗೆ, ಸಾಧ್ಯವಾದಷ್ಟು ವಸ್ತುನಿಷ್ಠವಾದ ಹಿನ್ನೆಲೆಯಲ್ಲಿ ಅಧ್ಯಯವನ್ನು ಕೈಗೊಂಡು ವಿಷಯದ ಸಮರ್ಪಕ ಮತ್ತು ಸ್ಪಷ್ಟವಾದ ನಿರೂಪಣೆಯ ಮೂಲಕ ವಿರೂಪಾಕ್ಷ ಆರಾಧನೆಯ ಮಹತ್ವವನ್ನು ಬಿಂಬಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

# ಅಧ್ಯಾಯ ೨

೨. ಭೌಗೋಳಿಕ ಪರಿಸರ ಮತ್ತು ಪ್ರಾಗಿತಿಹಾಸ

೨.೧ ಭೌಗೋಳಿಕ ಪರಿಸರ

೨.೨ ಪ್ರಾಗಿತಿಹಾಸ

## ಅಧ್ಯಾಯ ೨

### ೨.೧ ಭೌಗೋಳಿಕ ಪರಿಸರ :

ಸಶಕ್ತವಾದ ದಖಿನ್ ಪ್ರಸ್ಥಭೂಮಿಯಲ್ಲಿರುವ ಕರ್ನಾಟಕ ರಾಜ್ಯದ ಪಶ್ಚಿಮ ಬಯಲು ಪ್ರದೇಶದಲ್ಲಿ ಹಂಪಿ ಪರಿಸರವು ಸಮಾವೇಶವಾಗುತ್ತದೆ. ಹಂಪಿಯನ್ನು ಕೇಂದ್ರ ನೆಲೆಯನ್ನಾಗಿ ಇರಿಸಿಕೊಂಡು ತುಂಗಭದ್ರಾ ನದಿಯ ಬಲ ಮತ್ತು ಎಡ ಬದಿಯ ಸುತ್ತಲಿನ ಸ್ಥಳವನ್ನು ಹಂಪಿ ಪರಿಸರವೆಂದು ಗುರುತಿಸಬಹುದು. ತುಂಗಭದ್ರಾ ನದಿಯ ಈ ಪ್ರದೇಶ ಪ್ರಮುಖ ನೆಲೆಯಾಗಿದ್ದು, ಈ ನದಿಯ ಬಯಲಿನಲ್ಲಿ ಬಹು ಪ್ರಾಚೀನ ಕಾಲದಿಂದಲೂ ಮಾನವ ಜೀವನ ಸಂಸ್ಕೃತಿ ವಿಕಾಸವಾಗುತ್ತಾ ಬಂದಿದೆ. ಭೂ ವೈಜ್ಞಾನಿಕವಾಗಿ ಹಂಪಿ ಪರಿಸರವನ್ನು ಒಳಗೊಂಡಂತೆ ದಕ್ಷಿಣ ಭಾರತದ ಪ್ರಸ್ಥಭೂಮಿಯನ್ನು ಅತ್ಯಂತ ಪ್ರಾಚೀನ ನಿರ್ಮಾಣವೆಂದೂ, ಆದಿಕಲ್ಪ ಯುಗಕ್ಕೆ ಸೇರಿದುದೆಂದೂ ಸುಮಾರು ನೂರು ಕೋಟಿ ವರ್ಷ ಹಿರಿಯದೆಂದೂ ಭೂ ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಸಾಗರದ ಭಾಗವಾಗಿದ್ದ ಈ ಪ್ರದೇಶ ಮೇಲೆದ್ದು ಕಾಲಾಂತರದಲ್ಲಿ ಹಲವಾರು ಮಾರ್ಪಾಡು ಹೊಂದಿ, ಸಸ್ಯ ಹಾಗೂ ಪ್ರಾಣಿಗಳ ವಸತಿಗೆ ತಕ್ಕುದಾಗಿ ಇಂದಿನ ಸ್ಥಿತಿಗೆ ಬಂದಿದೆ. ಈ ಭೂ ಭಾಗವು ಸಮುದ್ರ ಪಾತಳಿಯಿಂದ (MSL) ೨೩೫೯ ಅಡಿ ಎತ್ತರದಲ್ಲಿದೆ.[೧] ಈ ಪ್ರದೇಶವು ಆಯಕಟ್ಟಿನದಾಗಿದ್ದು, ಬೆಟ್ಟ - ಗುಡ್ಡಗಳು, ಫಲವತ್ತಾದ ನೆಲ, ಸಮೃದ್ಧ ಜಲ, ವೈವಿಧ್ಯ ವೃಕ್ಷರಾಶಿ, ಪ್ರಾಣಿ ಸಂಪತ್ತಿನಿಂದ ಕೂಡಿದ್ದಾಗಿದೆ.

ದಕ್ಷಿಣ ಭಾರತದ ಇತಿಹಾಸದಲ್ಲಿ ತನ್ನ ಸಾಂಸ್ಕೃತಿಕ ವೈಭವದ ಉತ್ತುಂಗ ಶಿಖರವನ್ನೇರಿ ಮೆರೆದ ವಿಜಯನಗರ ಸಾಮ್ರಾಜ್ಯ ಮೂಲತಃ ಹುಟ್ಟಿ ಬೆಳೆದು ಬಾಳಿದ್ದು ಈ ಹಂಪಿ ನೆಲದಲ್ಲಿ. ಬೃಹತ್ ಏಕಶಿಲಾ ಬೆಟ್ಟಗಳು, ದೊಡ್ಡ ಗ್ರಾನೈಟ್ ಕಲ್ಲು ಗುಂಡುಗಳ ರಾಶಿಯನ್ನು ಹೊದ್ದುಕೊಂಡಿರುವ ಬೆಟ್ಟ - ಸಾಲುಗಳ ಪ್ರದೇಶ ಇದಾಗಿದೆ. ನಿಸರ್ಗ ನಿರ್ಮಿತವಾದ ಬೃಹತ್ ಗವಿಗಳು, ಕಂದರಗಳು, ಏಕಶಿಲಾ ಬೆಟ್ಟಗಳು. ಬಂಡೆಗಳ ಕಡಿದಾದ ಇಳಿಜಾರುಗಳು, ಇಲ್ಲಿನ ನಿಸರ್ಗ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿವೆ. ಹೀಗೆ ಈ ಎಲ್ಲಾ ವೈವಿಧ್ಯಮಯವಾದ ಭೌಗೋಳಿಕ ಪರಿಸರ ಈ ಪ್ರದೇಶದ ಚರಿತ್ರೆಯನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ.

#### ೨.೧.೧ ಬೆಟ್ಟ - ಗುಡ್ಡಗಳು :

ಹಂಪಿ ಪರಿಸರದಲ್ಲಿ ತುಂಗಭದ್ರಾ ನದಿಯು ಪ್ರಮುಖ ಭೌಗೋಳಿಕ ಗುರುತಾಗಿದ್ದು, ಅದರ ಬಲಬದಿಯ ಬಳ್ಳಾರಿ ಪ್ರದೇಶವು ದಕ್ಷಿಣದಿಂದ ಉತ್ತರಕ್ಕೆ ಇಳಿಜಾರಾಗಿದ್ದು, ನದಿಯ ತೀರದಿಂದ ಬೆಟ್ಟದ ಸಾಲುಗಳಿವೆ. ಸಂಡೂರು, ಕೂಡ್ಲಿಗಿ, ಹರಪನಹಳ್ಳಿ, ಗುಡೇಕೋಟೆ, ಹೊಸಪೇಟೆ, ಕಂಪ್ಲಿ, ದರೋಜಿ. ಕುರುಗೋಡು, ಬಳ್ಳಾರಿ, ಮುಂತಾದ ಸ್ಥಳಗಳಲ್ಲಿ ದೊಡ್ಡ ದೊಡ್ಡ ಬೆಟ್ಟಗಳಿವೆ. ಸಂಡೂರು ಕುಮಾರ ಸ್ವಾಮಿಯ ಬೆಟ್ಟ (೨.೩೬ ಮೀ), ರಾಮನಮಲೈ ಬೆಟ್ಟ (೯೯೨ ಮೀ), ಜಂಬುನಾಥ ಗುಡ್ಡ (೯೦೮ ಮೀ) ಎತ್ತರದ ಶಿಖರಗಳನ್ನು ಹೊಂದಿವೆ. ಕೂಡ್ಲಿಗಿ ಬೆಟ್ಟಗಳು ಎರಡು ಸಾಲಿನಲ್ಲಿವೆ. ಅವುಗಳಲ್ಲಿ ಒಂದು ಶ್ರೇಣಿ ಆನೇಕಲ್ಲು ದುರ್ಗ ( ೭೨೪ ಮೀ) ಇನ್ನೊಂದು ಜರಿಮಲೆ ಗುಡ್ಡ (೮೩೮ ಮೀ) ಎತ್ತರದ ಶಿಖರಗಳನ್ನು ಹೊಂದಿವೆ.[೨] ಹಾಗೆಯೇ ಇಲ್ಲಿ ದರಮರಗುಡ್ಡ, ಹಂಪಿ, ಬುಕ್ಕಸಾಗರ, ರಾಮಸಾಗರ ಬೆಟ್ಟಗಳು ಪ್ರಮುಖವಾಗಿವೆ. ಈ ಸಾಲಿನಲ್ಲಿ ತಿಮ್ಮಾಪುರ ಬೆಟ್ಟವು (೨೧೩೩ ಫೀಟ್) ಅತೀ ಎತ್ತರದ್ದಾಗಿದೆ.

ಹಾಗೇ ತುಂಗಭದ್ರಾ ನದಿಯ ಎಡಭಾಗದಲ್ಲಿ ಗಂಗಾವತಿ ತಾಲೂಕು ಇದ್ದು, ಅಲ್ಲಿ ಪೂರ್ವ-ಪಶ್ಚಿಮಾಭಿಮುಖವಾಗಿ ಹಬ್ಬಿರುವ ಬೆಟ್ಟ ಸಾಲುಗಳಿದ್ದು, ಇವುಗಳಿಗೆ ಏಳು ಗುಡ್ಡಗಳೆಂದು ಹೆಸರು.[೩] ದರಮರಗುಡ್ಡ, ಹಂಪಿ, ಬುಕ್ಕಸಾಗರ, ರಾಮಸಾಗರ ಬೆಟ್ಟಗಳು ಪ್ರಮುಖವಾಗಿವೆ. ಈ ಸಾಲಿನಲ್ಲಿ ತಿಮ್ಮಾಪುರ ಬೆಟ್ಟವು (೨,೧೩೩ ಫೀಟ್) ಅತೀ ಎತ್ತರದ್ದಾಗಿದೆ.[೪]

**೨.೧.೨ ನದಿಗಳು :**

**ತುಂಗಭದ್ರಾ ನದಿ :**

ಕೃಷ್ಣಾ ನದಿಯ ಉಪನದಿಯಾದ ತುಂಗಭದ್ರ ನದಿಯು ಹಂಪಿ ಪರಿಸರದ ಏಕೈಕ ಪ್ರಧಾನ ನದಿಯಾಗಿದೆ. ಪಶ್ಚಿಮ ಘಟ್ಟದ ವರಾಹ ಪರ್ವತದ ಗಂಗಾಮೂಲದಲ್ಲಿ ಹುಟ್ಟುವ ಈ ನದಿಯು ತುಂಗ ಮತ್ತು ಭದ್ರಾ ಎಂಬೆರಡು ಶಾಖೆಗಳ ಸಂಗಮವಾಗಿದೆ. ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದೇ ಕರೆಯಲಾಗುತ್ತದೆ.[೪]

**೨.೧.೩ ಉಪನದಿ / ಹಳ್ಳಗಳು :**

ಈ ಪ್ರದೇಶದಲ್ಲಿ ತುಂಗಭದ್ರಾ ನದಿಗೆ ಬಂದು ಸೇರುವ ಹಗರಿ, ಚಿಕ್ಕಹಗರಿ, ಚಿನ್ನಹಗರಿಯನ್ನೊಳಗೊಂಡಂತೆ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ತುಂಗಭದ್ರಾ ನದಿಯ ಜಾಲವಾಗಿ ಅನೇಕ ಹಳ್ಳಗಳು ಈ ಪ್ರದೇಶದಲ್ಲಿ ಹರಿದಿವೆ. ಈ ಪ್ರದೇಶದಲ್ಲಿ ಪರಗನೂರು ಹಳ್ಳ, ಹಂಪಸಾಗರ ಹಳ್ಳ, ಗೌರಿಪುರ ಹಳ್ಳ, ನಾರಿಹಳ್ಳ (ಇದನ್ನು ಕ್ರಿ.ಶ. ೧೫೪೧ ರ ಶಾಸನ 'ನಾರಾಯಣಿ' ಎಂದು ಕರೆದಿದೆ.) ಹರಿವನಮ ಹಳ್ಳ (ಕಾಜ್ರವಂಕ), ಮಾದಿಹಳ್ಳ, ತೆಲಗಿಹಳ್ಳ, ಇಟಗಿಹಳ್ಳ, ಮಾರಹಳ್ಳ (ಹರಪನಹಳ್ಳಿ), ತಿಪ್ಪಾಪುರ ಹಳ್ಳ, ಹಿರೇಹಳ್ಳ (ಹಡಗಲಿ) ಮೊದಲಾದವು ಪ್ರಮುಖವಾದವು.[೫]

ಹಾಗೇ ಈ ನದಿಯ ಎಡಬದಿಗೆ ಗಂಗಾವತಿ ತಾಲೂಕಿನಲ್ಲಿ ಅನೇಕ ಹಳ್ಳಗಳು ಹರಿದಿದ್ದು, ಅವುಗಳಲ್ಲಿ ಚಿಕ್ಕಬೆಣಕಲ್ ಹಳ್ಳ, ಎಮ್ಮಿಗುಡ್ಡ ಹಳ್ಳ, ಗಡ್ಡಿ ಹಳ್ಳ, ಅಗೋಲಿ ಹಳ್ಳ, ಮರಳಿ ಹಳ್ಳ ಮತ್ತು ಸಿದ್ದಾಪುರ ಹಳ್ಳ ಮುಖ್ಯವಾಗಿವೆ.[೬] ಈ ಹಂಪಿ ಪರಿಸರದಲ್ಲಿ ಅನೇಕ ನೈಸರ್ಗಿಕ ಮತ್ತು ಕೃತಕ ಕೆರೆಗಳನ್ನು ಕಾಣಬಹುದು.

**೨.೧.೪ ಭೂ ರಚನೆ:**

ಹಂಪಿ ಪ್ರದೇಶವು ಬೆಟ್ಟ, ಖನಿಜಗಳಿಂದ ಮತ್ತು ಗ್ರಾನೈಟ್ ಶಿಲೆಗಳಿಂದ ಕಂಗೊಳಿಸುತ್ತಿದೆ. ಸಾಮಾನ್ಯವಾಗಿ ಕ್ರಿಸ್ಟಲ್ ಲೈನ್ ಸಿಸ್ಟ್ಸ್ (ಸ್ಫಟಿಕಾತ್ಮಕ ಪದರು ಶಿಲೆ) ಎಪಿಡಿಯೋರಾಯಿಟ್ಸ್ ಗ್ರಾನೈಟ್ (ಕಣಶಿಲೆ) ಮತ್ತು ಲೇಟರ್ ಗ್ರಾನಾಯಿಟ್ಸ್ ಶಿಲಾ ಪದರುಗಳಿಂದ ಕೂಡಿದೆ. ಅಲ್ಲಲ್ಲಿ ಡೈಕ್ ಶಿಲೆ ಕಂಡು ಬರುತ್ತವೆ. ಕ್ರಿಸ್ಟಲ್ ಲೈನ್ ಸಿಸ್ಟ್, ಎಪಿಡಿಯೋರಾಯಿಟ್ಸ್, ಗ್ರಾನಾಯಿಟ್, ಧಾರವಾಡ ಪ್ರದೇಶದಲ್ಲಿರುವಂತೆ ಹಳೇ ಮಾದರಿಯದೆಂದು ಗುರುತಿಸಲಾಗಿದೆ.[೭] ಈ ಪ್ರದೇಶದಲ್ಲಿ ಶಿಲೆಗಳು ಜಗತ್ತಿನ ಅತೀ ಪುರಾತನವಾದ ಶಿಲೆಗಳಲ್ಲಿ ಪರಿಗಣಿಸಲ್ಪಡುತ್ತವೆ.

ಹಂಪಿಯ ಹತ್ತಿರ ಉತ್ತಮ ಮತ್ತು ಮಧ್ಯಮ ಗುಣಮಟ್ಟದ ಬೂದಿ ಬಣ್ಣದ ಕಣಶಿಲೆಗಳನ್ನು (Grey Granites) ಆನೆಗುಂದಿ ಸಮೀಪದಲ್ಲಿ ಕೋರಂಡಂ ರೂಬಿ ಶಿಲೆಗಳನ್ನು ಕಾಣಬಹುದು.[೮] ಬಳ್ಳಾರಿ-ಹೊಸಪೇಟೆ ನಡುವಣ ಗುಡ್ಡಗಳಲ್ಲಿಯ ನಿಕ್ಷೇಪಗಳು ಪ್ರಪಂಚದಲ್ಲಿಯೇ ಅತ್ಯುತ್ತಮವಾದಂತವು.[೯]

**೨.೧.೫ ಖನಿಜ ಸಂಪತ್ತು :**

ಖನಿಜಗಳಲ್ಲೆಲ್ಲಾ ಅತೀ ಮುಖ್ಯವಾದುದೆಂದರೆ ಕಬ್ಬಿಣದ ಅದಿರು. ಪ್ರಾಚೀನ ಕಾಲದಿಂದಲೂ ಇದರ ಉಪಯೋಗದಿಂದ ಮಾನವನು ನಗರೀಕೃತ ಸಂಸ್ಕೃತಿಯೆಡೆಗೆ ಹೆಜ್ಜೆ ಹಾಕಿದನು. ಈ ಪ್ರದೇಶದಲ್ಲಿ. ಕಬ್ಬಿಣದ ಅದಿರು, ಮ್ಯಾಂಗನೀಸ್, ತಾಮ್ರ, ಸತು, ಮ್ಯಾಗಸೈಟ್, ಬಂಗಾರ, ಜಿಪ್ಸಮ್, ಸುಣ್ಣಕಲ್ಲು, ಬಳಪದ ಕಲ್ಲು, ಹಳದಿ ಓಕರ್, ರೆಡ್ ಓಕರ್, ಬೆಣಚುಕಲ್ಲು, ವಜ್ರ, ಬಸಾಲ್ಟ್, ಗ್ರಾನೈಟ್ ಮೊದಲಾದ ಖನಿಜ ಸಂಪತ್ತು ಈ ಪರಿಸರದಲ್ಲಿವೆ.[೧೦]

**೨.೧.೬ ಮಣ್ಣು :**

ಈ ಪ್ರದೇಶದಲ್ಲಿ ಎರೆ (ಕಪ್ಪು), ಕೆಂಪು ಮಸಾರಿ ಕೆಲವು ಕಡೆ ಸವುಳು ಭೂಮಿ ಹಾಗೂ ಜೇಡಿಮಣ್ಣಿನಿಂದ ಕೂಡಿದ ಕ್ಷಾರ ಲವಣಗಳನ್ನೊಳಗೊಂಡ ಫಲವತ್ತಾದ ಭೂಮಿ ಇದೆ. ತುಂಗಭದ್ರಾ ನದಿಯ ತೀರ ಪ್ರದೇಶದಲ್ಲಿ ಮರಳು ಮಿಶ್ರಿತ ಕೆಂಪು ಜೇಡಿ (ಕೆಸರು ಮಣ್ಣು) ಮಣ್ಣನ್ನು ಕಾಣಬಹುದು.[೧೧]

**೨.೧.೭ ಅರಣ್ಯ ಸಂಪತ್ತು :**

ಹಂಪಿ ಪರಿಸರದಲ್ಲಿ ಬಳ್ಳಾರಿ ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ – ೯.೫೬.೨೨೦ ಹೆಕ್ಟೇರುಗಳು. ಅದರಲ್ಲಿ ಅರಣ್ಯ ಪ್ರದೇಶ – ೧.೧೯.೨೪೭ ಹೆಕ್ಟೇರುಗಳಾಗಿವೆ. ಇಲ್ಲಿಯ ಒಟ್ಟು ತಾಲೂಕುಗಳಲ್ಲಿ ಶೇ. ೪೦ ರಷ್ಟು ಅರಣ್ಯ ಬೆಳೆಸಲಾಗಿದೆ. ಇವುಗಳಲ್ಲಿ ಹೆಚ್ಚಿನ ಪ್ರಮಣ ಅಂದರೆ ೧,೦೪,೯೭೯ ಹೆಕ್ಟೇರ್ ಅರಣ್ಯ ಪ್ರದೇಶ ಹೊಸಪೇಟೆ, ಸಂಡೂರು, ಕೂಡ್ಲಿಗಿ ತಾಲೂಕುಗಳಲ್ಲಿವೆ.[೧೨]

ನದಿಯ ಎಡಭಾಗದ ಪ್ರದೇಶದಲ್ಲಿ ಕೊಪ್ಪಳ ಬ್ಲಾಕ್ ಒಂದು (೧೧,೧೭೩ ಹೆಕ್ಟೇರ್), ಆಗೋಲಿ-ಹಿರೇಬೆಣಕಲ್ (೬,೬೪೭ ಹೆಕ್ಟೇರ್) ಮಾದಿನಾಳ (೪೦೫.೫ ಹೆಕ್ಟೇರ್) ಕಾಯ್ದಿಟ್ಟ ಅರಣ್ಯಗಳಿವೆ.[೧೩] ಈ ಅರಣ್ಯಗಳಲ್ಲಿ ಪ್ರಧಾನವಾಗಿ ಜಾಲಾರಿ, ಹೊನ್ನೆ, ಮತ್ತಿ, ಅಳಲೆ, ಬಾಗಿ, ಮರಡಿ, ಬೇವು, ಜಾಲಿ, ಕಕ್ಕೆ, ಹುಣಸೆ, ಸೀತಾಫಲ, ಮತ್ತಿತರ ಗಿಡಗಳನ್ನು ಕಾಣಬಹುದು.

**೨.೧.೮ ಪ್ರಾಣಿ-ಪಕ್ಷಿಗಳು :**

ಪ್ರಮುಖವಾಗಿ ಈ ಪ್ರದೇಶದ ಕಾಡು ಹಾಗೂ ಬೆಟ್ಟ-ಗುಡ್ಡಗಳಲ್ಲಿ ಕರಡಿ, ಚಿರತೆ, ನರಿ, ತೋಳ, ಕಪ್ಪು-ಕೆಂಪು ಮುಖದ ಮಂಗಗಳು, ಮೊಲ, ಚಿಗರಿ, ಮುಳ್ಳುಹಂದಿ, ಕತ್ತೆಕಿರುಬ ಮತ್ತು ಪ್ಯಾಂಗೋಲಿನ್ ಕಂಡುಬರುತ್ತವೆ. ಹಾವುಗಳಲ್ಲಿ ಹೆಬ್ಬಾವು, ನಾಗರಹಾವು, ಕೆರೆಹಾವು ಪ್ರಮುಖವಾಗಿವೆ. ಪಕ್ಷಿಗಳಲ್ಲಿ ನವಿಲುಗಳು ಮತ್ತು ಹಸಿರು ಗಿಳಿಗಳು ಸಾಮಾನ್ಯವಾಗಿವೆ. ತುಂಗಭದ್ರಾ ತೀರ ಪ್ರದೇಶದಲ್ಲಿ ಕಾಡುಕೋಳಿಗಳಿವೆ. ದರೋಜಿ ಕರಡಿ ಧಾಮದಲ್ಲಿ ಅಧಿಕ ಸಂಖ್ಯೆಯಲ್ಲಿ ಕರಡಿಗಳಿವೆ.

**೨.೧.೯ ವಾಯುಗುಣ :**

ಹಂಪಿ ಪರಿಸರದ ಪ್ರದೇಶವು ಸಮುದ್ರ ಸಪಾಟಿಯಿಂದ ಎತ್ತರದಲ್ಲಿರುವುದರಿಂದಲೂ ಹಾಗೂ ಪರ್ಜನ್ಯಛಾಯಾ ಪ್ರದೇಶದಲ್ಲಿರುವುದರಿಂದಲೂ ಇಲ್ಲಿಯ ಹವಾಗುಣ ಸಾಮಾನ್ಯವಾಗಿ ತಂಪಾಗಿರದೇ ಒಣಹವೆ, ಬಿಸಿಲು ಮತ್ತು ಸೆಕೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಅತೀ ಉಷ್ಣ ಹಾಗೂ ಚಳಿಗಾಲದಲ್ಲಿ ಅತೀ ಚಳಿ ಇಲ್ಲಿಯ ವೈಶಿಷ್ಟ. ಈ ಪ್ರದೇಶದಲ್ಲಿ ಶಾಖದ ಸರಾಸರಿ ೧೬.೭ ಸೆ. ದಿಂದ ೪೩.೯ ಸೆ. ವರೆಗ

ಇರುತ್ತದೆ. ಕೆಲವು ಸಲ ಇದು ೪೫° ಸೆ. ವರೆಗೆ ಏರುತ್ತದೆ. ಅಂತೆಯೇ ಮಳೆ ಪ್ರಮಾಣ ವಿರಳವಾಗಿದ್ದು, ಇಲ್ಲಿಯ ವಾಡಿಕೆ. ಮಳೆ ಪ್ರಮಾಣ ೬೯೯ ಮಿ.ಮೀ. ವಾಸ್ತವಿಕ ಸರಾಸರಿ ಮಳೆ ೫೭೪.೯ ಮಿ.ಮೀ.[೧೪] (ಹಂಪಿ ವಲಯ) ದಾಖಲಾಗಿದೆ.

ಹೀಗೆ ಈ ಹಂಪಿ ಪರಿಸರದ ನದಿ, ಬೆಟ್ಟ, ಖನಿಜ, ಸಸ್ಯ-ಪ್ರಾಣಿ ಸಂಕುಲ ಮುಂತಾದ ಭೌಗೋಳಿಕ ಸನ್ನಿವೇಶವು / ಪರಿಸರವು ಬಹು ಪ್ರಾಚೀನ ಕಾಲದಿಂದಲೂ ಇಲ್ಲಿಯ ಮಾನವ ಜೀವನ ಸಂಸ್ಕೃತಿಯ ಮೇಲೆ ಪ್ರಭಾವ ಬೀರುತ್ತಾ ಪೋಷಿಸುತ್ತಾ ಬಂದಿದ್ದು, ಪರಿಣಾಮವಾಗಿ ಇಲ್ಲಿ ಬಹುಮುಖಿ ಜೀವನ ಸಂಸ್ಕೃತಿ ರೂಪಗೊಂಡಿದೆ.

**೨.೨ ಪ್ರಾಗಿತಿಹಾಸ :**

ಪ್ರಾಗಿತಿಹಾಸ ಕಾಲದ ಮಾನವನ ಜೀವನ ಅವನು ಬಳಸಿದ್ದ ಪ್ರಾಚ್ಯ ಅವಶೇಷಗಳಿಂದ ಕಂಡುಕೊಳ್ಳಬಹುದು. ಮುಖ್ಯವಾಗಿ ಹಂಪಿ ಪರಿಸರದಲ್ಲಿ ಕಂಡುಬಂದಿರುವ ಪ್ರಾಗಿತಿಹಾಸ ಕಾಲದ ಅವಶೇಷಗಳು ಮತ್ತು ಕೆಲವು ನೆಲೆಗಳಲ್ಲಿ ಕೈಗೊಂಡ ಉತ್ಖನನಗಳಿಂದಾಗಿ ಪ್ರಾಚೀನ ಸಂಸ್ಕೃತಿಗಳನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಲು ಅವಕಾಶವಾಗಿದೆ.

ಈ ಪ್ರದೇಶವು ಭೌಗೋಳಿಕವಾಗಿ ನದಿ, ಬೆಟ್ಟ, ಸಸ್ಯ-ಪ್ರಾಣಿ ಸಂಕುಲಗಳಿಂದ ಸಮೃದ್ಧವಾಗಿರುವುದರಿಂದ ಬಹು ಪ್ರಾಚೀನ ಕಾಲದಿಂದಲೂ ಮಾನವನ ವಾಸ್ತವ್ಯದ ತಾಣವಾಗಿದೆ. ಇಲ್ಲಿ ನಡೆಸಿದ ಕ್ಷೇತ್ರ ಸಂಶೋಧನೆಗಳಿಂದ ಆದಿ ಶಿಲಾಯುಗ, ಮಧ್ಯ ಶಿಲಾಯುಗ, ನವಶಿಲಾಯುಗ. ತಾಮ್ರಯುಗ, ಕಬ್ಬಿಣಯುಗ / ಬೃಹತ್ ಶಿಲಾಯುಗ ಮತ್ತು ಆದಿ ಚಾರಿತ್ರಿಕ ಕಾಲದ ಸಂಸ್ಕೃತಿಗಳು ತಿಳಿದು ಬಂದಿವೆ.[೧೫]

**೨.೨.೧ ಕಾಲಘಟ್ಟಗಳು :**

**ಹಳೇಶಿಲಾಯುಗ :**

ಕರ್ನಾಟಕದಲ್ಲಿ ಆದಿ ಹಳೇಶಿಲಾಯುಗ ಕಾಲದಿಂದಲೂ ಮಾನವನ ಚಟುವಟಿಕೆಗಳನ್ನು ಗುರುತಿಸಲಾಗಿದೆ. ಹಂಪಿ ಪರಿಸರದ ಬಳ್ಳಾರಿ ಜಿಲ್ಲೆಯ ಗಾದಿನೂರು, ಕುರಿಕುಪ್ಪಿ ಬೆಟ್ಟಗಳಲ್ಲಿ ಹಳೇ ಶಿಲಾಯುಗಕ್ಕೆ ಸಂಬಂಧಿಸಿದ ಶಿಲಾಯುಧ ಅವಶೇಷಗಳು ಪತ್ತೆಯಾಗಿವೆ. ಈ ಪ್ರದೇಶದ ಜೇಡರ ಬೆಳಗಲ್ಲು, ದರೋಜಿ, ಬದನಹಟ್ಟಿ ಬೆಟ್ಟ, ಜೋಗ, ಹಾಲಕುಂಡಿ ಹಳ್ಳಿಯ ಸಮೀಪ ಮತ್ತು ಬಳ್ಳಾರಿಯ ದಕ್ಷಿಣಕ್ಕಿರುವ ತಾಮ್ರ ಪರ್ವತದ ತಪ್ಪಲಲ್ಲಿ ಹಳೇ ಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳನ್ನು ಬೆಳಕಿಗೆ ತರಲಾಗಿದೆ. ಹೊಸಪೇಟೆ ತಾಲೂಕಿನ ಕಮಲಾಪುರದ ಕೆರೆಗೆ ಹರಿದು ಬರುವ ಹಳ್ಳದಲ್ಲಿ ಹಳೇ ಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳನ್ನು ಗುರುತಿಸಲಾಗಿದೆ.[೧೬] ಅಂತೆಯೇ ಈ ಪರಿಸರದ ತುಂಗಭದ್ರಾ ನದಿಯ ಬಲ ತೀರದಲ್ಲಿರುವ ನಿಟ್ಟೂರು ಒಂದು ಮಹತ್ವದ ನೆಲೆಯಾಗಿದೆ. ಆದಿ ಹಳೇ ಶಿಲಾಯುಗದ ಈ ಸಂಸ್ಕೃತಿಯ ನೆಲೆ ದೊರೆತದ್ದು ದಕ್ಷಿಣ ಭಾರತದಲ್ಲೇ ಪ್ರಥಮವಾಗಿದೆ.[೧೭]

ಈ ಹಂತದ ಮಾನವನ ದೈನಂದಿನ ಕಾರ್ಯಚಟುವಟಿಕೆಗಳನ್ನು ಆಹಾರ ಸಂಗ್ರಹಣೆ ಮತ್ತು ಬೇಟೆಗಾರಿಕೆ ಸಂಸ್ಕೃತಿಯೆಂದು ಕರೆಯಲಾಗಿದೆ. ಅಲ್ಲದೇ ಈ ಉಪಕರಣಗಳನ್ನು ಯಾವ ಉದ್ದೇಶಕ್ಕಾಗಿ ಬಳಸಲಾಗುತ್ತಿದ್ದೆಂಬುವುದು ನಿಗೂಢವಾಗಿಯೇ ಇದೆ. ಅವುಗಳ ಆಕಾರವನ್ನು ಗಮನಿಸಿ ಪ್ರಾಣಿ ಬೇಟೆ.

ಅವುಗಳ ಚರ್ಮವನ್ನು ಬೇರ್ಪಡಿಸುವುದು, ಮಾಂಸವನ್ನು ತುಂಡು ಮಾಡುವುದು, ಗಡ್ಡೆ ಗೆಣಸು ಕಂಟಿಗಳನ್ನು ಅಗಿದು ತೆಗೆಯುವುದಕ್ಕೆ, ಮುಂತಾದ ಉದ್ದೇಶಗಳಿಗಾಗಿ ಬಳಸಿರಬೇಕೆಂದು ತರ್ಕಿಸಲಾಗಿದೆ. ಆದಿ ಶಿಲಾಯುಗದಲ್ಲಿ ಮಧ್ಯ ಹಳೇಶಿಲಾಯುಗ ಮತ್ತು ಅಂತ್ಯ ಹಳೇ ಶಿಲಾಯುಗಗಳನ್ನು ಆಯುಧಗಳ ರಚನೆ ಮತ್ತು ಬದಲಾವಣೆಗಳಿಗನುಗುಣವಾಗಿ ಎರಡು ವರ್ಗಗಳನ್ನು ಗುರುತಿಸಲಾಗಿದೆ. ಈ ಎರಡೂ ಹಂತಗಳಿಗೆ ಸಂಬಂಧಿಸಿದ ಉಪಕರಣಗಳನ್ನು ಈ ಪ್ರದೇಶದಲ್ಲಿ ಹೆಚ್ಚಿನ ಶೋಧನೆಯಿಂದ ಕಂಡುಕೊಳ್ಳಬೇಕಾಗಿದೆ.[೧೮]

**೨.೨.೨ ಮಧ್ಯ (ಸೂಕ್ಷ್ಮ) ಶಿಲಾಯುಗ :**

ಹಳೇಯ ಶಿಲಾಯುಗ ಮತ್ತು ನೂತನ ಶಿಲಾಯುಗದ ನಡುವಿನ ಸಾಂಸ್ಕೃತಿಕ ಹಂತವನ್ನು ಮಧ್ಯ / ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಈ ಕಾಲದ ಮುಖ್ಯ ಲಕ್ಷಣವೆಂದರೆ, ಆದಿ ಮಾನವ ಒರಟಾದ ದೊಡ್ಡ ದೊಡ್ಡ ಶಿಲಾಯುಧಗಳ ಬಳಕೆ ಕೈಬಿಟ್ಟು, ಅತೀ ಸೂಕ್ಷ್ಮವಾದ ಚಿಕ್ಕದಾದ ಆಯುಧಗಳನ್ನು ಬಳಸಿರುವುದು.

ಹಂಪಿ ಪರಿಸರದ ಸುತ್ತಮುತ್ತಲು ಸೂಕ್ಷ್ಮ ಶಿಲಾಯುಧಗಳು ಕಂಡುಬಂದಿದ್ದು ಮುಖ್ಯವಾಗಿ ಹಂಪಿಯ ಶೃಂಗಾರದ ಹಬ್ಬಾಗಿಲಿನ ಹತ್ತಿರದ ಬೆಟ್ಟದ ತಪ್ಪಲಿನಲ್ಲಿ ಸೂಕ್ಷ್ಮ ಶಿಲಾಯುಧಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ. ವಿಠಲ ದೇವಾಲಯದ ಸಮೀಪದಲ್ಲಿರುವ ಮೊಸಳಯ್ಯನ ಗುಡ್ಡದಲ್ಲೂ ಮತ್ತು ಕುರೆಕುಪ್ಪ ಬೆಟ್ಟದ ನೆಲೆಯಲ್ಲಿಯೂ ಸೂಕ್ಷ್ಮ ಶಿಲಾಯುಗದ ಅವಶೇಷಗಳು ದೊರೆತಿವೆ.[೧೯]

ಮುಖ್ಯವಾಗಿ ಈ ಭಾಗದ ಕುಡತಿನಿ, ಸಂಗನಕಲ್ಲು, ಕುರೇಕುಪ್ಪ, ತೋರಣಗಲ್ಲು, ಮಲ್ಲಾಪುರ, ತಿಮ್ಮಲಾಪುರ, ಭವನಹಳ್ಳಿ ಮುಂತಾದ ಸ್ಥಳಗಳಲ್ಲಿ ಈ ಹಂತದ ನೆಲೆಗಳಿವೆ. ಅಂತೆಯೇ ಈ ಬಗೆಯ ಶಿಲಾಯುಗದ ಅವಶೇಷಗಳು ಈ ಪರಿಸರದ ತುಂಗಭದ್ರಾ ನದಿ ಎಡ ತೀರದ ಗಂಗಾವತಿ ತಾಲೂಕಿನ ಏಳುಗುಡ್ಡ ಪರಿಸರದ ಸಂಗಾಪುರ, ಚಿಕ್ಕಬೆಣಕಲ್, ಇಂದರಗಿ ಮುಂತಾದ ಬೆಟ್ಟಗಳಲ್ಲಿ ಈ ಸಂಸ್ಕೃತಿಯ ಅವಶೇಷಗಳು ದೊರೆತಿವೆ.[೨೦]

**೨.೨.೩ ನೂತನ ಶಿಲಾಯುಗ :**

ಈ ಕಾಲದಲ್ಲಿ ಆದಿಮಾನವ ಅಲೆದಾಟವನ್ನು ಬಿಟ್ಟು, ಫಲವತ್ತಾದ ಭೂಮಿಯಲ್ಲಿ ನೆಲೆಸಿ ವ್ಯವಸಾಯ ಪ್ರಾರಂಭಿಸಿದ. ಸಾಕು ಪ್ರಾಣಿಗಳನ್ನು ಸಾಕಿಕೊಂಡ. ಸುಟ್ಟ ಮಣ್ಣಿನ ಪಾತ್ರೆಗಳ ಉಪಯೋಗ. ಬಿಸಿಲಿನಲ್ಲಿ ಒಣಗಿಸಿದ ಬೂದು ಬಣ್ಣದ ಮೃತ್ಪಾತ್ರೆಗಳನ್ನು ಮಾಡುವುದು, ಹೀಗೆ ನವೀನ ಬದುಕಿಗೆ ಎಡೆಯಾದ ಈ ಸಂಸ್ಕೃತಿಗೆ ನವ / ನೂತನ ಶಿಲಾಯುಗ ಸಂಸ್ಕೃತಿಯೆಂದು ಕರೆಯಲಾಗಿದೆ.

ಮುಖ್ಯವಾಗಿ ಹಂಪಿ ಪರಿಸರದ ಕುಡತಿನಿ, ಕಪಗಲ್ಲು, ಸಂಗನಕಲ್ಲು, ಕತ್ತಳಿ, ತೆಕ್ಕಲಕೋಟೆ, ಸಿಟ್ಟೂರು, ದರೋಜಿ, ಕುರಗೋಡು, ಕಾಕುಬಾಳ, ತಿಮ್ಮಾಪುರ, ಬೆಳಗಟ್ಟಿ, ಮೊದಲಾದ ನೆಲೆಗಳಲ್ಲಿ ಉಜ್ಜಿ ನಯಗೊಳಿದ ಶಿಲಾ ಉಪಕರಣಗಳು ಕಂಡುಬಂದಿವೆ. ಸಂಗನಕಲ್ಲು ಹಾಗೂ ಕಾಕುಬಾಳಗಳಲ್ಲಿ ಇವುಗಳೊಂದಿಗೆ ಬೂದು ವರ್ಣದ ಮಡಿಕೆಗಳು, ಬೆಳಗಟ್ಟಿಯಲ್ಲಿ ಅರೆಯುವ ಕಲ್ಲು, ಹೆರೆಚಕ್ಕೆ ಶಂಖದ ಆಭರಣಗಳು ದೊರೆತಿವೆ. ಈ ಭಾಗದ ತಾವರೆಗೆರೆ, ಮಸ್ಕಿ, ಪಿಕ್ಲಿಹಾಳ್ ಮತ್ತು ವಟಗಲ್ (ರಾಯಚೂರು

ಜಿ.) ಈ ಸಂಸ್ಕೃತಿಯ ಮಹತ್ವದ ನೆಲೆಗಳಾಗಿವೆ.[೨೧] ಹಂಪಿ ಪ್ರದೇಶದ ಗಂಗಾವತಿ ತಾಲೂಕಿನಲ್ಲಿ ಅ.ಸುಂದರ ರವರು ನೂತನ ಶಿಲಾಯುಗ ಸಂಸ್ಕೃತಿಯ ಇನ್ನಷ್ಟು ನೆಲೆಗಳನ್ನು ಶೋಧಿಸಿದ್ದಾರೆ.[೨೨]

**೨.೨.೪ ಶಿಲಾ – ತಾಮ್ರಯುಗ :**

ನೂತನ ಶಿಲಾಯುಗದ ಒಂದು ಘಟ್ಟದಿಂದ ತಾಮ್ರದ ಬಳಕೆ ಆರಂಭವಾಯಿತು. ತಾಮ್ರದ ಅದಿರಿನಿಂದ ಲೋಹವನ್ನು ತಯಾರಿಸಿ, ಅದರಿಂದ ಅಭರಣ, ಗೊಂಬೆ, ಆಯುಧ ಮೊದಲಾದವುಗಳನ್ನು ಮಾಡಲಾಗುತ್ತಿತ್ತು. ಈ ಹಂತದ ಜನಜೀವನದಲ್ಲಿ ಕಾಣುವ ಖಚಿತ ಬೆಳವಣಿಗೆಯೆಂದರೆ ಶಿಲಾಯುಧಗಳ ಜೊತೆಗೆ ತಾಮ್ರ ಅಥವಾ ಕಂಚಿನ ಉಪಕರಣಗಳ ನಿರ್ಮಾಣ. ಆದ್ದರಿಂದ ಈ ಸಂಸ್ಕೃತಿಯನ್ನು ಶಿಲಾ ತಾಮ್ರಯುಗವೆಂದು ಕರೆಯಲಾಯಿತು.

ವಿಶೇಷವಾಗಿ ಈ ಹಂಪಿ ಪರಿಸರದ ಕುಡತಿನಿ, ಕಪಗಲ್ಲು ನೆಲೆಗಳಲ್ಲಿ ಸೂಕ್ಷ್ಮ ಶಿಲೋಪಕರಣಗಳು, ಚಕ್ಕೆ ಕಲ್ಲಿನ ಮೂಲ ಶಿಲಾಗಟ್ಟಿಗಳು ಮತ್ತು ಇವುಗಳೊಂದಿಗೆ ಮಸುಕಾದ ಕೆಂಪುವರ್ಣದ ಮಡಿಕೆ ಅವಶೇಷಗಳು ಅಲ್ಲಿಪುರದಲ್ಲಿ ಕಂಡುಬಂದಿವೆ. ಇದಕ್ಕೆ ಹತ್ತಿರದಲ್ಲಿ ಅಂದರೆ ಚಿಕ್ಕರಾಂಪುರದಲ್ಲಿ ಕೆಂಪುವರ್ಣದ ಮಡಿಕೆಗಳು ಅಬ್ರಕ ಮಿಶ್ರಣಗೊಂಡಿವೆ. ಹೊಸಕೇರಿಯಲ್ಲಿ ಕಂದುವರ್ಣದ ಮಡಿಕೆಗಳೊಂದಿಗೆ ನೀಳಚಕ್ಕೆ, ಹಿರೇಬೆಣಕಲ್‌ನಲ್ಲಿ ಕಂದು ಚಿತ್ರಿತ ಕೆಂಪು ಮಡಿಕೆ ಭಾಗ ಮತ್ತು ನೀಳ ಚಕ್ಕೆ, ಗೆರೆಗಳುಳ್ಳ ಮೂಲ ಶಿಲಾಗಟ್ಟಿಗಳು ದೊರೆತಿವೆ. ಅತೀ ಕಡಿಮೆ ಪ್ರಮಾಣದಲ್ಲಿ ಕಂಡುಬಂದಿರುವ ಈ ಆಯುಧಗಳಲ್ಲಿ ತಾಮ್ರ ಇಲ್ಲವೇ ಕಂಚಿನ ಚಪ್ಪಟೆ ಕೊಡಲಿ, ತಂತಿ, ನೀರಿನಗಾಳ ಮತ್ತು ತೆಳ್ಳನೆ ಬಾಯುಳ್ಳ ಲಗಿನ ಉಪಕರಣಗಳು ಕೃಷ್ಣಾ ನದಿ ತೀರದ ಕೆಲವು ನೆಲೆಗಳಲ್ಲಿ ದೊರೆತಿವೆ. ದಕ್ಷಿಣ ಭಾರತದ ಅತ್ಯಂತ ಗಮನಾರ್ಹವಾದ ಉಪಕರಣವೆಂದರೆ, ರಾಯಚೂರು ಹತ್ತಿರ ಕಲ್ಲೂರು ಗ್ರಾಮದಲ್ಲಿ ಶಿಲಾ ತಾಮ್ರಯುಗದ ನೆಲೆಯಲ್ಲಿ ದೊರೆತ ಉದ್ದನೆಯ ಖಡ್ಗಗಳು ಪ್ರಮುಖವಾದವು. ಇದೇ ರೀತಿ ಸಣ್ಣ ಮಾದರಿಯ ಕಠಾರಿಯಂತಹ ಉಪಕರಣ ಭೀಮಾ ನದಿ ಉಗಮ ಪ್ರದೇಶದ ಚಂದೋಳಿ ಗ್ರಾಮದಲ್ಲಿ ಮತ್ತು ಬ್ರಹ್ಮಗಿರಿಯಲ್ಲಿ ಒಂದು ಚಿಕ್ಕ ಚಾಕು ದೊರೆತಿದೆ.[೨೩]

ಹಾಗೇ ಈ ಪ್ರದೇಶದ ಸಂಗನಕಲ್ಲು, ತೆಕ್ಕಲಕೋಟೆ ನೆಲೆಗಳಲ್ಲಿ ತೆಳುವಾದ ಎರಡೂ ಕಡೆ ಅರವೃತ್ತದ ಅಲಗುಳ್ಳ ಕೊಡಲಿ, ಚಪ್ಪಟೆ ಕೊಡಲಿ, ಉಳಿ, ಮೀನು ಹಿಡಿಯುವ ಗಾಳ, ಮುಂತಾದ ತಾಮ್ರದ ವಸ್ತುಗಳು ದೊರೆತಿವೆ.[೨೪]

**೨.೨.೫ ಬೂದಿ ದಿಬ್ಬಗಳು :**

ನೂತನ ಶಿಲಾಯುಗ, ಶಿಲಾ ತಾಮ್ರಯುಗ, ಕಬ್ಬಿಣ ಬೃಹತ್ ಶಿಲಾಯುಗಕ್ಕೆ ಸೇರಿದ ಪ್ರಮುಖ ಬೆಳವಣಿಗೆಯಲ್ಲಿ ಕಂಡುಬರುವ ಅವಶೇಷಗಳೆಂದರೆ, ಬೂದಿ ದಿಬ್ಬಗಳು. ಹಂಪಿ ಪರಿಸರದ ಕಪಗಲ್ಲು, ಉತ್ತನೂರು, ಸಂಗನಕಲ್ಲು, ಹಳೇನೆಲ್ಲುಡಿ, ಇಂಗಳಗಿ, ಕುರಕುಪ್ಪ, ಕುಡತಿನಿ, ಕುಕಬಾಳು, ಗಾಡಿನೂರು, ನಿಂಬಾಪುರ ಹಾಗೇ ತುಂಗಭದ್ರಾ ಎಡತೀರದ ಪ್ರದೇಶಗಳಾದ ಇಂದರಗಿ, ಮುಸಲಾಪುರ, ವೆಂಕಟಾಪುರ ಮೊದಲಾದ ನೆಲೆಗಳಲ್ಲಿ ಕಾಣಸಿಗುತ್ತವೆ.[೨೫]

**೨.೨.೬ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿ :**

ವಿಶಿಷ್ಟ ಬಗೆಯ ಸಂಪ್ರದಾಯದಿಂದ ಕೂಡಿದ ಈ ಹಂತ ದಕ್ಷಿಣ ಭಾರತದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಸತ್ತವರಿಗಾಗಿ ದೊಡ್ಡ ದೊಡ್ಡ ಕಲ್ಲುಗಳನ್ನು ನಿಲ್ಲಿಸಿ ಗೋರಿಗಳ ನಿರ್ಮಾಣ ಕಾರ್ಯ ನೆಡೆದಿದ್ದರಿಂದ ಇದನ್ನು ಬೃಹತ್ ಶಿಲಾಯುಗವೆಂದು ಕರೆಯಲಾಯಿತು. ಶವ ಸಂಸ್ಕಾರ ವಿವಿಧ ಸ್ಥಳಗಳಲ್ಲಿ ಕಂಡುಬಂದಿರುವ ನೂರಾರು ಕಲ್ಗೋರಿಗಳು ಈ ಸಂಸ್ಕೃತಿಯ ವೈಶಿಷ್ಟವನ್ನು ತಿಳಿಸುತ್ತವೆ. ಅಲ್ಲದೇ ಅವುಗಳ ಶೋಧ, ಉತ್ಖನನಗಳಿಂದ ವಿವಿಧ ಪ್ರಕಾರದ ಗೋರಿಗಳನ್ನು ಗುರುತಿಸಲಾಗಿದೆ. ಇವುಗಳಲ್ಲಿ ದಾರಿ/ಹಾದಿಕೋಣೆ, ಕಂಡಿಕೋಣೆ, ಕೊರೆದು ತಯಾರಿಸಿದ ಶವ ಕುಣಿಗಳು, ಮಡಿಕೆಯ ಶವ ಪೆಟ್ಟಿಗೆಗಳುಳ್ಳ ದುಂಡು ವೃತ್ತಗಳು, ನಿಲುಸುಗಲ್ಲುಗಳು, ಕಲ್ಲುಗುಂಡೆಗಳು, ಮೊದಲಾದ ಪ್ರಕಾರಗಳು ಈ ಪರಿಸರದಲ್ಲಿ ಕಂಡುಬಂದಿವೆ. ವಿಶೇಷವಾಗಿ ಈ ಪ್ರದೇಶದ ಅಯ್ಯಪ್ಪನಹಳ್ಳಿ, ಕುಮತಿ, ಕಳಸ, ಹುಲಿಕುಂಟೆ, ಕಪಗಲ್ಲು, ಸಂಗನಕಲ್ಲು, ನಿಟ್ಟೂರು, ಮಲ್ಲಾಪುರ, ಹಂಪಸಾಗರ, ಹೂವಿನ ಹಡಗಲಿ, ನವಲಿ, ಮುಂತಾದವು ಬೃಹತ್ ಶಿಲಾಯುಗದ ನೆಲೆಗಳಾಗಿದ್ದು, ಸಂಗನಕಲ್ಲು, ಮೈಲಾರ, ಮಾಗಳದಲ್ಲಿ ಈ ಹಂತದ ವಾಸ್ತವ್ಯದ ನೆಲೆಗಳನ್ನು ಗುರುತಿಸಲಾಗಿದೆ. ಹೂವಿನ ಹಡಗಲಿಯಲ್ಲಿ ಕಂಡುಬಂದ ಕಲ್ಗೋರಿಗ 'ಗ' ಆಕಾರದ ಕಿಡಿಕಿ ಇದೆ.[೨೬] ನವಲಿಯಲ್ಲಿ ಕಲ್ಮನೆ ಮಾದರಿಯ ಗೋರಿಗಳು, ಹಂಪಸಾಗರದಲ್ಲಿ ಸುಟ್ಟ ಮಣ್ಣಿನ ಶವ ಪೆಟ್ಟಿಗೆಗೆ ೪ ಕಾಲುಗಳಿವೆ.[೨೭] ಮಲ್ಲಾಪುರ, ಕಳಸ ಗ್ರಾಮಗಳಲ್ಲಿ ಕಂಡಿಕೋಣೆ ಮಾದರಿ, ನಿಟ್ಟೂರಿನಲ್ಲಿ ಶವಕುಣಿಗಳು, ಕಪ್ಪಗಲ್ಲಿನಲ್ಲಿ ಶಿಲಾವೃತ್ತಗಳು ಕಂಡುಬಂದಿವೆ. ಹಾಗೇ ಈ ಪ್ರದೇಶದ ಮಸ್ಕಿ ಮತ್ತು ಹಿರೇಬೆಣಕಲ್ ಪ್ರಮುಖ ನೆಲೆಗಳಾಗಿದ್ದು, ಇವುಗಳಷ್ಟೇ ಅಲ್ಲದೇ ಅದರ ಸುತ್ತಮುತ್ತಲಿನ ಪ್ರದೇಶದಲ್ಲಿ ಸುಂದರರವರು ಇನ್ನಷ್ಟು ನೆಲೆಗಳನ್ನು ಶೋಧಿಸಿದ್ದಾರೆ.[೨೮] ಈ ಕಲ್ಗೋರಿಗಳಲ್ಲಿ ಅಲ್ಲೊಂದು ಇಲ್ಲೊಂದು ಅಪರೂಪವಾಗಿ ಬೃಹದಾಕಾರದ ಕಲ್ಲಿನ ಗೊಂಬೆಗಳಿವೆ. ಚಪ್ಪಟೆ ಕಲ್ಲಿನಲ್ಲಿ ಮನುಷ್ಯಾಕೃತಿಯನ್ನು ಹೋಲುವ ಗೊಂಬೆಗಳನ್ನು ಬಿಡಿಸಲಾಗಿದೆ. ಇಂಥ ಗೊಂಬೆಗಳು ಕರ್ನಾಟಕ, ತಮಿಳುನಾಡು, ಆಂಧ್ರ ಪ್ರದೇಶಗಳಲ್ಲಿ ಸುಮಾರು ೧೬ ಕ್ಕಿಂತಲೂ ಹೆಚ್ಚಿನ ಸ್ಥಳಗಳಲ್ಲಿವೆ.[೨೯]

ಹಿರೇಬೆಣಕಲ್, ಕುಮತಿ[೩೦], ಹುಲಿಕುಂಟೆ, ಕೊಟ್ನೆಕಲ್[೩೧] ಹಾಗೆ ಗಂಗಾವತಿ ತಾಲೂಕಿನ ಕಲ್ಲಪ್ಪನ ಕ್ಯಾಂಪ್ ಮತ್ತು ಆಗೋಲಿಗಳಲ್ಲಿ ಕಲ್ಗೊಂಬೆಗಳನ್ನು ಡಾ. ಶರಣಬಸಪ್ಪ ಕೋಲ್ಕಾರ ಶೋಧಿಸಿದ್ದಾರೆ.[೩೨]

**ಕಬ್ಬಿಣದ ಬಳಕೆ :**

ಬೃಹತ್ ಶಿಲಾಯುಗ ಹಂತದಿಂದ ಮಾನವನ ಪ್ರಮುಖ ಬೆಳವಣಿಗೆಯಲ್ಲಿ ಕಬ್ಬಿಣ ತಯಾರಿಕೆಯೂ ಒಂದು. ಈ ಪ್ರದೇಶದ ಹೊಸಪೇಟೆ, ಬಳ್ಳಾರಿ, ಸಂಡೂರು ಬೆಟ್ಟಗಳು ಹೇರಳವಾಗಿ ಕಬ್ಬಿಣದ ಅದಿರನ್ನು ಹೊಂದಿವೆ. ಬೃಹತ್ ಶಿಲಾಯುಗದ ಹಂತದಿಂದಲೇ ಇಲ್ಲಿ ಕಬ್ಬಿಣದ ಬಳಕೆ ಆರಂಭವಾದಂತೆ ತೋರುತ್ತದೆ. ಹಿರೇಬೆಣಕಲ್ಲಿನ ಕಲ್ಗೋರಿಗಳಲ್ಲಿ ಕಂಡುಬಂದ ಕಬ್ಬಿಣದ ಉಪಕರಣ ಮತ್ತು ಆನೆಗುಂದಿಯಲ್ಲಿ ದೊರೆತ ಕಬ್ಬಿಣದ ಕಿಟ್ಟ ಇದಕ್ಕೆ ಪುಷ್ಟಿ ನೀಡುತ್ತದೆ. ಹಿರೇಬೆಣಕಲ್ಲಿನ ಉಪಕರಣವನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಿದಾಗ ಅದು ಸಂಡೂರು ಅದಿರಿನಿಂದ ಕ್ರಿ.ಪೂ. ೧೧೦೦ ರಲ್ಲಿ ತಯಾರಾದುದೆಂದು ತಿಳಿದು ಬಂದಿದೆ.[೩೩]

೨.೨.೭ ಆದಿ ಇತಿಹಾಸ ಕಾಲ :

ನಿರಂತರವಾಗಿ ಮುಂದುವರೆದ ಮಾನವನ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಆದಿ ಇತಿಹಾಸ ಕಾಲದ ಅವಶೇಷಗಳು ಮತ್ತು ಶಾಸನಗಳು ಈ ಪ್ರದೇಶದಲ್ಲಿ ಕಂಡು ಬರುತ್ತವೆ. ಈ ಸಂಸ್ಕೃತಿಗೆ ಪೂರಕವಾಗಿ ಇಲ್ಲಿಯ ಕಾರ್ತಿಕೇಯನ ಕ್ಷೇತ್ರ, ಜೋಗಿಕೊಳ್ಳ, ಬಾಗಳಿಗಳಲ್ಲಿ ಮನೆ ಇಲ್ಲವೆ ದೇವಾಲಯವನ್ನು ಕಟ್ಟಲು ಬಳಸಿದ ಇಟ್ಟಿಗೆ, ಕೋಗಳಿ ಗ್ರಾಮದ ಹೊರವಲಯದ ಹಾಳು ಪ್ರದೇಶದಲ್ಲಿ ಬಿದಿ ಇಟ್ಟಿಗೆಗಳು ಕಂಡುಬಂದಿವೆ. ಸಂಗನಕಲ್ಲು, ತೋರಣಗಲ್ಲು, ಗಾದಿಗನೂರು ಮೊದಲಾದ ನೆಲೆಗಳಲ್ಲಿ ಕ್ರಿ.ಶ. ೧-೨ ನೇ ಶತಮಾನದ ಕಪ್ಪು-ಕೆಂಪು ವರ್ಣ ಪಾತ್ರಾವಶೇಷಗಳು, ಮುಖ್ಯವಾಗಿ ಹಂಪಿಯಲ್ಲಿ ಬೌದ್ಧ ಶಿಲಾಫಲಕ ಮತ್ತು ಗ್ರೀಕೋ-ರೋಮನ್ ಮಾದರಿಯ ಸ್ಟಕ್ಕೊ ಶಿಲ್ಪಗಳು, ಹಾಗೆ ಉದಯಗೊಳಂ, ನಿಟ್ಟೂರು, ಕೊಪ್ಪಳಗಳಲ್ಲಿ ಅಶೋಕನ ಕಾಲದ ಶಾಸನಗಳು ಶೋಧವಾಗಿವೆ.[೩೪]

೨.೨.೮ ಪ್ರಾಗಿತಿಹಾಸ ಕಾಲದ ಕಲೆ :

ಮಾನವನು ಆಹಾರ ಸಂಗ್ರಹಣೆ ಹಂತದಲ್ಲಿ ಗವಿ-ಬಂಡೆಗಳ ಆಶ್ರಯದಲ್ಲಿ ವಾಸಮಾಡುವ ಕಾಲಕ್ಕಾಗಲೇ ಕಲಾಭಿರುಚಿ ಬೆಳೆಸಿಕೊಂಡನು. ತನ್ನ ನಿರಂತರ ಜೀವನದಲ್ಲಿ ನಡೆಯುವ ಘಟನೆಗಳನ್ನಾಧರಿಸಿ ಪ್ರಚಲಿತವಿದ್ದ ಪ್ರಾಣಿ, ಪಕ್ಷಿ, ಪ್ರಾಣಿಬೇಟೆ, ನೃತ್ಯಭಂಗಿ ಮೊದಲಾದ ಅಂಶಗಳನ್ನು ಬಣ್ಣದಲ್ಲಿ ಇಲ್ಲವೆ ಗೀರುಚಿತ್ರಗಳ ಮೂಲಕ ಅಭಿವ್ಯಕ್ತಪಡಿಸುತ್ತ ಬಂದನು.

ವಿಶೇಷವಾಗಿ ಇಂತಹ ಚಿತ್ರಗಳು ಹಂಪಿ-ಕೊಪ್ಪಳ ಪರಿಸರದಲ್ಲಿ ಹೆಚ್ಚಾಗಿ ಕಂಡುಬರುತ್ತಿದ್ದು, ಮುಖ್ಯವಾಗಿ ಕುರುಗೋಡು, ತೆಕ್ಕಲಕೋಟೆ, ಕಪಗಲ್ಲು, ಭೈರನಾಯಕನ ಹಳ್ಳಿ, ರಾಜಾಪುರ, ಬೆಳಗಲ್ಲು, ಹಳಕುಂಡಿ, ಅಯ್ಯಪ್ಪನಹಳ್ಳಿ, ಹಿರೇಬೆಣಕಲ್ಲು, ಅಂಜನಹಳ್ಳಿ, ಇಂದರ್ಗಿ, ಮಲ್ಲಾಪುರ, ಹರಳಾಪುರ, ಹೊಸಕೇರಿ, ಬೆಳೆಬಾವಿ, ಹಂಪಿ, ಆನೆಗುಂದಿ, ವೆಂಕಟಾಪುರ, ಸಂಗಾಪುರ, ಹಂಪಸದುರ್ಗ, ಆಗೋಲಿ, ತೆಂಬಾ, ಬಂಡಿಹರ್ಲಾಪುರ, ತಿರುಮಲಾಪುರ, ಎಮ್ಮಿಗುಡ್ಡ, ಗಡ್ಡಿ, ಚಿಕ್ಕಬೆಣಕಲ್, ನಾಗೇನಹಳ್ಳಿ, ಬಸಾಪಟ್ಟಣ, ಗೂಗಿಬಂಡಿ- ಮೊದಲಾದ ಹಲವಾರು ಸ್ಥಳದನೆಲೆಗಳಲ್ಲಿ ಸೂಕ್ಷ್ಮ ಶಿಲಾಯುಗದಿಂದ ಆದಿ-ಇತಿಹಾಸ ಕಾಲದವರೆಗಿನ ಚಿತ್ರಗಳು ಕಂಡು ಬರುತ್ತವೆ.[೩೫]

ಈ ಪ್ರಾಕ್ಚಾರಿತ್ರಿಕ ಕಾಲದ ಗವಿವರ್ಣ ಹಾಗೂ ಬಯಲು ಬಂಡೆ ಚಿತ್ರಗಳಿಂದ ಪ್ರಾಚೀನ ಮಾನವನ ಬದುಕಿನ ಹಲವಾರು ಸಂಗತಿಗಳನ್ನು ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳಲು ಆಸ್ಪದವಾಗಿದೆ. ಪಶುಪಾಲನೆ, ಬೇಟೆಗಾರಿಕೆ, ಮಾಂತ್ರಿಕ ಆರಾಧನೆ, ಸಮೂಹ ಕುಣಿತ ಮುಂತಾದ ಸಾಮಾಜಿಕ ಸಂಗತಿಗಳು ಚಿತ್ರಗಳ ಮೂಲಕ ಅನಾವರಣಗೊಂಡಿವೆ.[೩೬]

**ಅಡಿಟಿಪ್ಪಣಿ :**


೧. ಚಂದ್ರಶೇಖರ್ ಎಚ್. ೧೯೯೩. ರಾಯಚೂರು ನೈಸರ್ಗಿಕ ಸಂಪನ್ಮೂಲಗಳು ಮತ್ತು ಅವುಗಳ ಬಳಕೆಯ ಸ್ಥಿತಿಗತಿ ಮತ್ತು ಮುನ್ನೋಟ. ತಿರುಳ್ಗನ್ನಡ. ಪು-೩೭.

೨. ನಾಯಕ ಹಾ.ಮಾ. (ಸಂ) ; ಕನ್ನಡ ವಿಷಯ ವಿಶ್ವಕೋಶ ಪು-೯೭-೯೮.

೩. ಶರಣಬಸಪ್ಪ ಕೋಲ್ಕಾರ ೨೦೦೨. ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ ಪಿ.ಎಚ್.ಡಿ. ಮಹಾಪ್ರಬಂಧ ಕ.ವಿ.ವಿ. ಹಂಪಿ.

೪. ಅಭಿಶಂಕರ್ ಕೆ (ಸಂ) ೧೯೭೨. ಬಳ್ಳಾರಿ ಜಿಲ್ಲಾ ಗ್ಯಾಸೆಟಿಯರ್. ಪು-೧೩.

೫. ವಿ.ಎಸ್. ಬಡಿಗೇರ. ೨೦೦೨. ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ಇತಿಹಾಸ ಪಿ.ಎಚ್.ಡಿ ಪ್ರೌಢಪ್ರಬಂಧ. ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ.

೬. ಶರಣಬಸಪ್ಪ ಕೋಲ್ಕಾರ (ಸಂ) ೨೦೦೨. ಅಕ್ಷಯ ಸ್ಮರಣ ಸಂಚಿಕೆ.

೭. ಅಭಿಶಂಕರ್ ಕೆ (ಸಂ) ರಾಯಚೂರು ಜಿಲ್ಲಾ ಗ್ಯಾಸೆಟಿಯರ್

೮. ಪ್ರಕಾಶ ಹುಣಸಗಿ ೧೯೮೭. ಗಂಗಾವತಿ ತಾಲೂಕು ದರ್ಶನ.

೯. ರಾಧಾಕೃಷ್ಣ ಬಿ.ಪಿ. ೧೯೮೫. ಕರ್ನಾಟಕದ ಖನಿಜ ಸಂಪತ್ತು.

೧೦. ಚಂದ್ರಶೇಖರ್ ಟಿ.ಆರ್. ಬಳ್ಳಾರಿ ಜಿಲ್ಲೆ ನಿಸರ್ಗ ಸಂಪತ್ತು ಪು-೪೭-೪೮

೧೧. ಬಂಗಾರಿ ವಿ.ಎಸ್. ೧೯೭೬. ಕೊಪ್ಪಳ ನಾಡಿನ ಭೌಗೋಳಿಕ ದರ್ಶನ. ಗವಿದೀಪ್ತಿ ಪು- ೨೩೫-೨೪೨.

೧೨. ಚಂದ್ರಶೇಖರ್ ಟಿ. ಆರ್ ಬಳ್ಳಾರಿ ಜಿಲ್ಲೆ ನಿಸರ್ಗ ಸಂಪತ್ತು

೧೩. ಶರಣಬಸಪ್ಪ ಕೋಲ್ಕಾರ; ಪೂರ್ವೋಕ್ತ

೧೪. ಅಭಿಶಂಕರ್. ಕೆ (ಸಂ); ಪೂರ್ವೋಕ್ತ

೧೫. ಬಡಿಗೇರ. ವಿ.ಎಸ್. ೨೦೦೨ ; ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ. ಪಿ.ಎಚ್.ಡಿ ಮಹಾಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೧೬. ಐ.ಎ.ಆರ್. ೧೯೭೬-೭೭. ಪು. ೨೪.

೧೭. ಅನ್ಸಾರಿ ಝಡ್.ಡಿ., ಇಂಡಿಯನ್ ಎಂಟಿಕ್ವರಿ, ಥರ್ಡ್ ಸೀರೀಸ್.

೧೮. ಫೂಟ್ ಆರ್.ಬಿ. ೧೯೧೬ ; ದಿ ಫೂಟ್ ಕಲೆಕ್ಷನ್ ಅಫ್ ದಿ ಇಂಡಿಯನ್ ಪ್ರಿ ಹಿಸ್ಟಾರಿಕ್ ಆ್ಯಂಡ್ ಪ್ರೊಟೋ ಹಿಸ್ಟಾರಿಕ್ ಆ್ಯಂಟಿ ಕ್ವಿಟೀಸ್ ೧೯೦೬. ಮದ್ರಾಸ್ ಪು.೭೭.

೧೯. ಮಹದೇವ. ಸಿ. ಮಾಧವ ಪೆರಾಜೆ. ಸುಬ್ಬಣ್ಣರೈ. ೨೦೦೨. ಹೊಸಪೇಟೆ ತಾಲೂಕು ದರ್ಶನ. ಪ್ರಸಾರಾಂಗ. ಕ.ವಿ.ವಿ. ಹಂಪಿ.

೨೦. ಶರಣಬಸಪ್ಪ ಕೋಲ್ಕಾರ (ಸಂ) ೨೦೦೨ ಅಕ್ಷಯ ಸವಿ ಸಂಚಿಕೆ.

೨೧. ಶರಣಬಸಪ್ಪ, ಕೋಲ್ಕಾರ, ೨೦೦೨, ಕೊಪ್ಪಳ-ಹಂಪಿ ಪ್ರದೇಶದ ಪ್ರಾಗಿತಿಹಾಸಕಾಲದ ಕಲೆ. ಪಿ.ಎಚ್.ಡಿ ಮಹಾಪ್ರಬಂಧ ಕ.ವಿ.ವಿ. ಹಂಪಿ ಪು-೫೭-೫೮.

೨೨. ಸುಂದರ, ಅ. ೧೯೭೩, ಗಂಗಾವತಿ ತಾಲೂಕಿನ ಪ್ರಾಚ್ಯವಸ್ತುಗಳು, ಕ.ಭಾ-೬೨. ಪು. ೬೪-೭೫.

೨೩. ಸುಂದರ, ಅ. (ಸಂ), ಕರ್ನಾಟಕ ಚರಿತ್ರೆ ಸಂ. ೧ ಪು-೧೫೮.

೨೪. ಮಹದೇವ, ಸಿ. ಮತ್ತು ಇತರರು; ಪೂರ್ವೋಕ್ತ

೨೫. ಬಡಿಗೇರ, ವಿ.ಎಸ್; ೨೦೦೨; ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ. ಪಿ.ಎಚ್.ಡಿ ಮಹಾ ಪ್ರಬಂಧ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೨೬. ಇತಿಹಾಸ ದರ್ಶನ – ಸಂ.೧೩. ೧೯೯೮. ಪು. ೧೫-೧೬.

೨೭. ಘೂಟ್ ಆರ್.ಬಿ., ಇಂಡಿಯನ್ ಪ್ರೀ-ಪ್ರೋಟೋ ಎಂಟಿಕ್ವೆರಿ. ಪು.೧೫-೧೬.

೨೮. ಸುಂದರ ಅ. ೧೯೭೩; ಪೂರ್ವೋಕ್ತ

೨೯. ಸುಂದರ ಅ (ಸಂ) ಕರ್ನಾಟಕ ಚರಿತ್ರೆ ಸಂ. ೧ ; ಪು-೨೪೦-೨೪೨.

೩೦. ಇತಿಹಾಸ ದರ್ಶನ; ಸಂ.೧೩. ೧೯೯೮. ಪು. ೧೯-೨೨.

೩೧. ಬಡಿಗೇರ, ವಿ.ಎಸ್; ಪೂರ್ವೋಕ್ತ

೩೨. ಶರಣಬಸಪ್ಪ ಕೋಲ್ಕಾರ(ಸಂ) ೨೦೦೨ ; ಪೂರ್ವೋಕ್ತ

೩೩. ಮುಧೋಳ ಎಂ.ಎಸ್.; ಎ ಟೆಕ್ನಿಕಲ್ ಸ್ಟಡಿ ಆಫ್ ಮಾಟ ಆಬ್ಜೆಕ್ಟ್ಸ್ ಫ್ರಮ್ ಸೌತ್ ಇಂಡಿಯನ್ ಮೆಗಾಲಿತ್ಸ್ (ಪಿ.ಎಚ್‌ಡಿ. ಪ್ರಬಂಧ).

೩೪. ಬಡಿಗೇರ, ವಿ.ಎಸ್; ಪೂರ್ವೋಕ್ತ

೩೫. ಸುಂದರ ಅ. ಕರ್ನಾಟಕದ ಪ್ರಾಗಿತಿಹಾಸಕಾಲದ ಕಲೆ.
ಡಾ. ಶರಣಬಸಪ್ಪ ಕೋಲ್ಕಾರ; ಪೂರ್ವೋಕ್ತ

# ಅಧ್ಯಾಯ ೩.

೩. ಐತಿಹಾಸಿಕ ಹಿನ್ನೆಲೆ

೩.೧ ಸ್ಥಳನಾಮ

೩.೨ ಪೌರಾಣಿಕ ಹಿನ್ನೆಲೆ

೩.೩ ಚಾರಿತ್ರಿಕ ಹಿನ್ನೆಲೆ

# ಅಧ್ಯಾಯ ೩

## ೩.೧ ಹಂಪಿ : ಸ್ಥಳನಾಮ ವಿವೇಚನೆ :-

ಪೂರ್ವಕಾಲದಿಂದಲೂ ಮಾನವನ ವಾಸದ ನೆಲೆಯಾಗಿರುವ ಹಂಪಿ ಒಂದು ಪ್ರಮುಖ ಧಾರ್ಮಿಕ ಕೇಂದ್ರ. ಹಂಪಾದೇವಿ ಅಥವಾ ಪಂಪಾದೇವಿ ಹಂಪಿಯ ಅತಿ ಪ್ರಾಚೀನ ದೇವತೆಯಾಗಿದ್ದು, ದೇವಿಯ ಹೆಸರೇ ಊರಿಗೆ ಬಂದಿದೆ. ಹಂಪಿಯನ್ನು ಪಂಪಾಪುರವೆಂದು, ಇಲ್ಲಿ ಹರಿಯುವ ತುಂಗಭದ್ರಾ ನದಿಯನ್ನು ಸಹ ಪಂಪಾನದಿಯೆಂದು ಕರೆಯಲಾಗಿದೆ. ಈ ಹಂಪಿ ಪರಿಸರದಲ್ಲಿ ಪಂಪಾಂಬಿಕೆಯನ್ನು ಹಂಪಮ್ಮ ಎಂತಲೂ ಮತ್ತು ತುಂಗಭದ್ರಾ ನದಿಯನ್ನು 'ಹಂಪಿಹೊಳಿ' ಎಂದೇ ಜನಪದರಲ್ಲಿ ಜನಜನಿತವಾಗಿರುವುದನ್ನು ಗುರುತಿಸಬಹುದು.[೧]

ಕ್ರಿ.ಶ. ೬೮೯ ರ ವಿನಯಾದಿತ್ಯನ ಕಾಲದ ಶಾಸನದಲ್ಲಿ 'ಪಂಪಾತೀರ್ಥ'ದ ಉಲ್ಲೇಖವಿದೆ.[೨] ಇದರಿಂದ ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ಇಲ್ಲಿಯ ಮುಖ್ಯ ದೇವತೆ ವಿರೂಪಾಕ್ಷನ ದೇವಾಲಯದ ನಿರ್ಮಾಣವಾಗಿರಬೇಕು. ಇದಕ್ಕೂ ಮುಂಚೆಯೇ ಇಲ್ಲಿ ವಿರೂಪಾಕ್ಷನ ಪ್ರಚಾರ ಊಹಿಸಬಹುದಾಗಿದೆ. ಕಲ್ಯಾಣ ಚಾಲುಕ್ಯರ ಸಾಮಂತನಾದ ಇರಿವನೊಳಂಬಾದಿ ರಾಜನ ಕ್ರಿ.ಶ. ೧೦೧೪ ರ ಗೋನಾಳಿನ ಶಾಸನವು ಹಂಪಿಯನ್ನು 'ಪಂಪಾತೀರ್ಥ' ಎಂದು ತಿಳಿಸುತ್ತದೆ.[೩] ಬಾಗಳಿಯ ಕ್ರಿ.ಶ. ೧೦೧೭ ರ ಶಾಸನದಲ್ಲಿ ಪಂಪಾಪುರವೆಂದಿರುವುದು[೪] ನಂತರ ಕ್ರಿ.ಶ. ೧೧೮೯ ರ ಶಾಸನದಲ್ಲಿ ಇದನ್ನು ಹಂಪಾತೀರ್ಥ ಮತ್ತು ವಿರೂಪಾಕ್ಷ ತೀರ್ಥವೆಂದು ಕರೆದಿದ್ದು,[೫] ಇದನ್ನು ರಕ್ಷಿಸಲು ಕುರುಗೋಡು ಸಿಂಧರ ದೊರೆ ಕಲಿದೇವರಸನು ತನ್ನ ಸಾಮಂತನಾದ ಮಾದೆಯನಾಯಕನನ್ನು ನೆಯಮಿಸಿ, ಅವನು ಮಾತಗಂಪರ್ವತದಿಂದ ಆಳುತ್ತಾನೆ ಎನ್ನಲಾಗಿದೆ. ಹಾಗೆ ಹೊಯ್ಸಳ ಸೋಮೇಶ್ವರ ಕಾಲದ ಶಾಸನವೊಂದು ವಿರೂಪಾಕ್ಷ ದೇಗುಲಕ್ಕೆ ದಾನ ಮಾಡಿದುದನ್ನು ತಿಳಿಸುವುದು.[೬]

ಹಾಗೆಯೇ ನಂತರ ಬಂದ ಹೊಯ್ಸಳ ವೀರಬಲ್ಲಾಳನು ಕ್ರಿ.ಶ. ೧೩೩೯ ರಲ್ಲಿ ವೀರ ವಿಜಯ ವಿರೂಪಾಕ್ಷಪುರಕ್ಕೆ ಭೇಟಿನೀಡಿ ತನ್ನ ಮಗ ವಿರೂಪಾಕ್ಷ ಬಲ್ಲಾಳನನ್ನು ಹಂಪಿಯ ಒಡೆಯನನ್ನಾಗಿ ನೇಮಿಸಿ ಹಂಪಿಯನ್ನು ವಿರೂಪಾಕ್ಷ ಹೊಸಪಟ್ಟಣವೆಂದು ಕರೆದನು.[೭] ಅಂತೆಯೇ ವಿಜಯನಗರದ ಶಾಸನಗಳು ಭಾಸ್ಕರಕ್ಷೇತ್ರ, ವಿದ್ಯಾನಗರ, ವಿಜಯನಗರ ಎಂದು ಉಲ್ಲೇಖಿಸುತ್ತವೆ. ಸ್ಥಳಪುರಾಣದಲ್ಲಿ ಪಂಪಾಕ್ಷೇತ್ರವೆಂದು, ಪಂಪಾಪುರವೆಂದು ಕರೆಯಲಾಗಿದೆ.[೮] ಹಾಗೆಯೇ ಸ್ಕಂದ ಪುರಾಣವು ಪಂಪಾದೇವಿಯ ನಿವಾಸವಾಗಿದ್ದು ಪಂಪಾಕ್ಷೇತ್ರವನ್ನು ಒಂದು ಶಕ್ತಿಪೀಠವೆಂದು ಕರೆದಿದೆ. ಪರಮೇಶ್ವರಾಗಮವು ಯಾವಳಿಂದ ವಿರೂಪಾಕ್ಷನು ಶಕ್ತನಾದನೋ ಆ ಶಕ್ತಿಯು ಸರ್ವತೋಮುಖಿ ಆದಿ ಅಂತ್ಯಗಳಿಲ್ಲದವಳು, ಜ್ಞಾನಾಧಾರಕಳೂ ಆಗಿದ್ದಾಳೆ. ತಂತ್ರ ನಿರ್ವಾಹರೂಪಿಣಿಯೂ, ಷಟ್ಚಕ್ರ ವಿಲಾಸಿನಿಯೂ ಆದ ಆ ದೇವಿಯನ್ನು ದುರ್ಗೆ, ಗೌರಿ, ಮಾತೃಲಲಿತಾ, ಆರ್ಯೆ ಎಂದೂ ಮಹರ್ಷಿಗಳು ಕರೆದಿದ್ದು, ಯಾವ ಯಾವ ಪೀಠಗಳೂ ಆದಿಶಕ್ತಿಯಿಂದ ಪಾಲಿಸಲ್ಪಡುವುವೋ ಆ ಪೀಠಗಳಲ್ಲಿ ಒಂದಾದ ಇಲ್ಲಿ 'ಪಂಪಾ' ಎಂಬ ಹೆಸರಿನಿಂದ ಪರಮೇಶ್ವರಿಯು ನೆಲೆಸಿದ್ದಾಳೆ. ಈ ದೇವಿಯ ಸಾನಿಧ್ಯದಿಂದ ಐಶ್ವರ್ಯ, ಪ್ರಭಾವ, ಮಹಾತ್ಮ್ಯಗಳು ಸದಾ ಸಿದ್ಧಿಸುತ್ತವೆ ಎಂದು ಹೊಗಳಿದೆ.[೯] ಒಟ್ಟಿನಲ್ಲಿ ಈ ಪರಿಸರದ

ಐತಿಹ್ಯ, ಶಾಸನಾಧಾರ, ಸ್ಥಳಪುರಾಣಗಳನ್ನು ಗಮನಿಸಲಾಗಿ ದೇವಿ ಪಂಪಾಂಬಿಕೆಯಿಂದಲೇ 'ಹಂಪಿ' ಎಂಬ ಹೆಸರು ಅನಾವರಣಗೊಂಡಿರುವುದು ಸ್ಪಷ್ಟವಾಗುತ್ತದೆ.

**ಹಂಪಿ : ಪೌರಾಣಿಕ ಹಿನ್ನೆಲೆ :-**

**ಪಂಪಾಕ್ಷೇತ್ರ :**

ಹಂಪೆ ಪುರಾಣ ಕಾಲದಲ್ಲಿ 'ಪಂಪಾಕ್ಷೇತ್ರ'ವೆಂದು ಪ್ರಸಿದ್ಧಿ ಪಡೆದಿದೆ. 'ಪಂಪಾ' ಎನ್ನುವುದು ತುಂಗಭದ್ರೆಯ ಇನ್ನೊಂದು ಹೆಸರು. ಈ 'ಪಂಪಾ' (ಪಂ-ಪ-ಅ) 'ಪಂ' ಎಂದರೆ - ಮೋಕ್ಷವನ್ನು ಕೊಡುವವಳು, 'ಪ' ಎಂದರೆ- ಆಶ್ರಿತರನ್ನು ಕಾಪಾಡುವವಳೆಂದೂ, 'ಅ' ಎಂದರೆ- ಸಂಪದ್ಭರಿತಳೆಂದು ಶಾಬ್ದಿಕ ಅರ್ಥದಲ್ಲಿ ವಿಶ್ಲೇಷಣೆ ಮಾಡಿರುವುದನ್ನು ನಾವು ಕಾಣುತ್ತೇವೆ. ಆದಿ ಮಾನವ ಜೀವನದ ಚಲನೆಗೆ ಸ್ಥಿರರೂಪ ಬಂದಿರುವುದು ನದೀ ತೀರದಲ್ಲಿ ಎಂಬುದನ್ನು ಅರಿಯುತ್ತೇವೆ. ಮಾನವನ ಸುಖ-ಸಂತೋಷ ಲಭ್ಯವಿರುವುದೇ ನದಿ ತೀರದಲ್ಲಿ ವಾಸ್ತವ್ಯಮಾಡಲು ತೊಡಗಿದಾಗಿನಿಂದ ಅಲೆಮಾರಿತನದ ಜೀವನಕ್ಕೆ ಕೊನೆಕಂಡಿರುವುದು ಈ ನದಿ ತೀರದಲ್ಲಿಯೇ ಎಂದಾಗ ನದಿ ಜೀವನಕ್ಕೆ ಸೃಷ್ಟಿಯ ಮೂಲಕ ಚೇತನವನ್ನು ನೀಡಿರುತ್ತದೆ.

ಭೌಗೋಳಿಕವಾಗಿ ಸುತ್ತಲೂ ಪರ್ವತಶ್ರೇಣಿ, ದಟ್ಟ ಅರಣ್ಯಗಳ ಮಧ್ಯ ಮೈದುಂಬಿ ಹರಿಯುವ ನದಿ ಋಷಿ-ಮುನಿಗಳಿಗೆ ತಪೋನಿರತರಾಗಲು ಯೋಗ್ಯವಾದ ಸ್ಥಳ ಈ ಕ್ಷೇತ್ರವಾದ್ದರಿಂದ ಋಷಿ-ಮಿನಿಗಳಿಗೆ ಆಕರ್ಷಣೀಯ ಧಾಮವಾಗಿ ಪಂಪಾ-ಆಶ್ರಿತವಾಗಿದ್ದಾಳೆ.

ಈ ಪಂಪಾಕ್ಷೇತ್ರದಲ್ಲಿ ವಿರೂಪಾಕ್ಷನು ನೆಲೆಯಾಗಿ ನಿಂತು ಮುನ್ನೂರು ಕೃತಯುಗಗಳು ಕಳೆದವೆಂಬ ಅಂಶವನ್ನು ಸ್ಕಂದ ಪುರಾಣದ ಪಂಪಾ ಮಹಾತ್ಮೆಯಲ್ಲಿ ಉಲ್ಲೇಖಿಸಲಾಗಿದೆ. ತ್ರೇತಾಯುಗದಲ್ಲಿ 'ಕಿಷ್ಕಿಂದ ಪಟ್ಟಣ' ಎಂಬ ಹೆಸರಿನಿಂದ ಈ ಕ್ಷೇತ್ರ ಪ್ರಸಿದ್ಧಿ ಹೊಂದಿರುವುದನ್ನು ಶ್ರೀ ವಾಲ್ಮೀಕಿ ವಿರಚಿತ ರಾಮಾಯಣದ 'ಕಿಷ್ಕಿಂದಾ ಖಂಡ'ದಲ್ಲಿ ವರ್ಣನೆ ಕಾಣಬಹುದು.[೧೦] ದ್ವಾಪರಯುಗದಲ್ಲಿ ಅನೇಕ ಋಷಿ, ಮುನಿ, ಯಕ್ಷ-ಕಿನ್ನರರು, ಗಂಧರ್ವ, ಸಪ್ತಮಾತೃಕೆಯರು ತಪಸ್ಸು ಆಚರಿಸಿದ ಪಂಪಾಕ್ಷೇತ್ರದಲ್ಲಿ, ಪಾಂಡವರು ತಮ್ಮ ಅಜ್ಞಾತವಾಸದಲ್ಲಿ 'ದಂಡಕಾರಣ್ಯ'ವಾಗಿದ್ದ ಈ ಕ್ಷೇತ್ರದಲ್ಲಿ ಕಳೆದರೆಂಬ ಪ್ರತೀತಿ ಇದೆ. ಶ್ರೀ ಪಂಪಾವಿರೂಪಾಕ್ಷ-ಪಂಪಾಂಬಿಕೆಯರನ್ನು ಆರಾಧಿಸಿದ ಬಗ್ಗೆ ಉಲ್ಲೇಖವಿದೆ.

ಒಟ್ಟಾರೆ ಪುರಾಣಗಳ ಹಿನ್ನೆಲೆಯಾಗಿ ಈ ಪಂಪಾಕ್ಷೇತ್ರದ ಆರಾಧ್ಯ ದೈವನಾದ ವಿರೂಪಾಕ್ಷನನ್ನು ವರಿಸಲು ಬ್ರಹ್ಮನ ಮಾನಸ ಪುತ್ರಿಯಾದ ಪಂಪಾ (ಪಾರ್ವತಿ) ಘೋರವಾದ ತಪಸ್ಸು ಆಚರಿಸಿ ಶಿವನನ್ನು ಒಲಿಸಿಕೊಂಡು ಕಲ್ಯಾಣೋತ್ಸವ ನಡೆದ ಸ್ಥಳ ಇದಾಗಿದೆ. ದೇವಾನುದೇವತೆಗಳು, ಸಪ್ತಋಷಿಗಳು, ಸಪ್ತ ಮಾತ್ರಿಕೆಯರು, ಅಷ್ಟ ದಿಕ್ಪಾಲಕರು ಕ್ಷೇತ್ರ ಪಾಲಕರು ಇತ್ಯಾದಿ ಪುರಾಣ ಪುರುಷರ ತಾಣ ಇದಾಗಿದೆ. ಇನ್ನೊಂದು ಪ್ರಚಲಿತ ಪುರಾಣ ಹಿನ್ನೆಲೆಯಾಗಿ ಮಾತಂಗ ಋಷಿಯು ಶಿವನನ್ನು ಕುರಿತು ಉಗ್ರ ತಪಸ್ಸು ಆಚರಿಸಿ ಶಿವನನ್ನು ಸಾಕ್ಷಾತ್ಕರಿಸಿಕೊಂಡು ಒಬ್ಬ ಮಗನನ್ನು ದಯಪಾಲಿಸಲು ಕೋರಿದಾಗ ಶಿವನು ಮೂಢನಾದ ಮಗನೊಬ್ಬನು ಹುಟ್ಟಲೆಂದು ಆಶೀರ್ವದಿಸಲು ಅದಕ್ಕೆ ಒಪ್ಪದೆ ಪಾರ್ವತಿಯ ಅಂಶವಿರುವ ಸುಂದರಳಾದ ಮಗಳೊಬ್ಬಳನ್ನು ಕೇಳಿ ಆಕೆಗೆ ನೀನೆ ವರನಾಗಬೇಕೆಂದು ಭಿನ್ನವಿಸಲು ಶಿವನು ಅದಕ್ಕೆ

ಒಪ್ಪಿ ಮಾತಂಗ ಋಷಿಯ ಕೋರಿಕೆಯಲ್ಲಿ ಈ ಕ್ಷೇತ್ರದಲ್ಲಿ ಕನ್ನೇಶ್ವರನಾಗಿ ಅವತರಿಸಿ ಪಾರ್ವತಿಯನ್ನು ವರಿಸುತ್ತಾರೆಂಬ ಐತಿಹ್ಯವಿದೆ.

ಪುರಾಣ ಉಲ್ಲೇಖಿಸಿದಂತೆ ಮಾತಂಗ, ಮೂಲ್ಯವಂತ, ಋಷ್ಯಮೂಕ, ಕಿಷ್ಕಿಂದ, ಅಂಜನಾದ್ರಿ, ಹೇಮಕೂಟ, ವಿಪ್ರಕೂಟ, ಗಂಧರ್ವಗಿರಿ, ಜಂಬುನಾಥಗಿರಿ, ಮಾಣಿಭದ್ರೇಶ್ವರ ಪರ್ವತ, ಸೋಮಪರ್ವತ ಮುಂತಾದ ಪರ್ವತಗಳು, ಮನ್ಮಥ ತೀರ್ಥ, ಲೋಕಪಾವನ ತೀರ್ಥ (ಮಲಯಾಳ ಬ್ರಹ್ಮರ ವಾಸಸ್ಥಾನ) ಚಕ್ರತೀರ್ಥ, ಪಂಪಾತೀರ್ಥ.... ಮುಂತಾದ ತೀರ್ಥಗಳು ಪುರಾಣದಲ್ಲಿ ಉಲ್ಲೇಖಿತವಾದ ಪವಿತ್ರ ಸ್ಥಳಗಳು ಪಂಪಾಂಬಿಕೆಯ ತಪಃ ಪ್ರಭಾವಕ್ಕೆ ಮೆಚ್ಚಿ ಪರಶಿವನು ಶ್ರೀ ವಿರೂಪಾಕ್ಷ ನಾಮದಿಂದ ಅವಿರ್ಭವಿಸಿ ಪಂಪಾಂಬಿಕೆ (ಪಾರ್ವತಿ)ಯೊಂದಿಗೆ ಕಲ್ಯಾಣೋತ್ಸವ ನಡೆದು ಪತ್ನಿ ಸಮೇತನಾಗಿ ಶಿವಗಣ, ವಿಷ್ಣುಗಣ, ಬ್ರಹ್ಮಗಣ ದೇವತಾ ಸಮೂಹದೊಂದಿಗೆ ಈ ಕ್ಷೇತ್ರದಲ್ಲಿ ನೆಲೆಯಾಗಿರುವುದರಿಂದ ಈ ಪಂಪಾಕ್ಷೇತ್ರಕ್ಕೆ ಧಾರ್ಮಿಕವಾಗಿ ಅತ್ಯಂತ ಮಹತ್ವ ಬಂದಿದೆ. 'ಶಿವ-ಪಾರ್ವತಿಯರ' ಕಲ್ಯಾಣೋತ್ಸವದ ವಿವರಗಳನ್ನು ಆನೆಗುಂದಿಯಲ್ಲಿ ದೊರೆತ ತಾಮ್ರ ಪತ್ರ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ಪಂಪಾಕ್ಷೇತ್ರದ ಹಿನ್ನೆಲೆಯನ್ನು ಹರಿಹರದ ಗಿರಿಜಾಕಲ್ಯಾಣ, ಲಕ್ಕಣ್ಣ ದಂಡೇಶನ ಶಿವತತ್ವ ಚಿಂತಾಮಣಿ ಇತ್ಯಾದಿ ಪುರಾಣಗಳಿಂದ ಈ ಸ್ಥಳ ಪುರಾಣ ಅರಿಯಲು ಸಹಕಾರಿಯಾಗಿವೆ.

ಪಂಪಾಮಹಾತ್ಮೆಯಲ್ಲಿ ಹಂಪಿಯ ಪರಿಸರ ಹಾಗು ಕ್ಷೇತ್ರ ಮಹಿಮೆಯ ವರ್ಣನೆಯನ್ನು ಸಾಂಗವಾಗಿ ಚಿತ್ರಿಸಲಾಗಿದ್ದು, ಬ್ರಹ್ಮನ ಮಗಳಾದ ಪಂಪಾದೇವಿ ಶಿವನನ್ನು ಮದುವೆಯಾಗಲು ಹೇಮಕೂಟದ ಉತ್ತರಕ್ಕಿರುವ ಅರ್ಧಕೋಶ ದೂರದಲ್ಲಿ ವಿಪ್ರಕೂಟವೆಂಬ ಪರ್ವತ ಬಳಿಯ ಸರೋವರದ (ಪಂಪಾ ಸರೋವರ) ದಡದಲ್ಲಿ ಉಗ್ರವಾದ ತಪಸ್ಸನ್ನು ಆಚರಿಸುತ್ತಾಳೆ. ಅವಳ ತಪಸ್ಸಿಗೆ ಮೆಚ್ಚಿದ, ಶಿವ ಅವಳ ಇಚ್ಚೆಯಂತೆ ವಿವಾಹವಾಗಿ ಪಂಪಾಪತಿ ಎನಿಸಿಕೊಳ್ಳುತ್ತಾನೆ. ಈ ಸ್ಥಳವನ್ನು ಪಂಪಾಕ್ಷೇತ್ರವೆಂದು ಕರೆದು ಅವಳು ತಪಸ್ಸು ಮಾಡಿದ ಸರೋವರವನ್ನು ಪಂಪಾಸರೋವರವೆಂದು ಖ್ಯಾತವಾಗಲೆಂದು ವರ ಕೊಡುತ್ತಾನೆ. ನಂತರ ಇದು, ಪಂಪಾ ದೇವಿ, ಪಂಪಾಪತಿ, ಪಂಪಾ ಕ್ಷೇತ್ರ, ಪಂಪಾ ಸರೋವರ, ಪಂಪಾಪುರವೆಂಬ ಮೊದಲಾದ ಹೆಸರಿನಿಂದ ಪ್ರಖ್ಯಾತಿಯಾಯಿತು. ಈ ಪವಿತ್ರ ಕ್ಷೇತ್ರದಲ್ಲಿ ೩ ಕೋಟಿ ತೀರ್ಥಗಳಿದ್ದು, ಕಾಶಿ ಗಂಗೆಗೆ ಸಮಾನವೆನಿಸಿದ ತುಂಗಭದ್ರಾ ಎಂಬ ಪುಣ್ಯ ನದಿ ಹರಿಯುತ್ತಿದ್ದು, ಋಷಿಗಳ ಪೂರ್ವಾಶ್ರಮಗಳು ವಿರಾಜಿಸುತ್ತಿವೆ. ಪಂಪಾಪತಿಯನ್ನೊಳಗೊಂಡು

| | | |
|---|---|---|
| ಉತ್ತರಕ್ಕೆ | – | ಮಾಣಿಭದ್ರೇಶ್ವರ (ಗಂಗಾವತಿ ತಾ॥) |
| ದಕ್ಷಿಣಕ್ಕೆ | – | ಜಂಬುನಾಥೇಶ್ವರ (ಹೊಸಪೇಟೆ ತಾ॥) |
| ಪೂರ್ವಕ್ಕೆ | – | ಕಿನ್ನೂರೇಶ್ವರ (ಹೊಸಪೇಟೆ ತಾ॥) |
| ಪಶ್ಚಿಮಕ್ಕೆ | – | ಸೋಮೇಶ್ವರ (ಕೊಪ್ಪಳ ತಾ॥) |

ಈ ಪಂಚಲಿಂಗಗಳು ಭಕ್ತರಿಗೆ ಮುಕ್ತಿಗೊಳಿಸುವಂತ ಸದಾಶಿವನ ಪಂಚಮುಖವಾಗಿ ಅವಿರ್ಭವಿಸಿ ಚಂದ್ರಾರ್ಕಾಗ್ನಿ ಕೋಟಿ ಪ್ರಕಾಶಗಳಿಂದ ಕಂಗೊಳಿಸುತ್ತವೆ.[೧೧]

**ಹಂಪಿ ರಾಮಾಯಣದ ಕಿಷ್ಕಿಂಧೆಯೇ?**

ಪಂಪಾಕ್ಷೇತ್ರದೊಂದಿಗೆ ಈ ಸ್ಥಳಕ್ಕೆ ಕಿಷ್ಕಿಂದ ಎಂಬ ಹೆಸರು ಬಹು ಹಿಂದಿನಿಂದಲೇ ಪ್ರಚಲಿತವಿತ್ತು. ಪ್ರಾಗಿತಿಹಾಸ ಕಾಲದಿಂದ ೧೫ ನೆಯ ಶತಮಾನದ ವರೆಗೆ ನಡೆದು ಬಂದ ಚಟುವಟಿಕೆಗಳಿಂದ ಇದು ಪ್ರಾಚೀನ ಕಾಲದ ಕಿಷ್ಕಿಂದವಾಗಿತ್ತೆಂದು ತಿಳಿಯುತ್ತದೆ. ಆದಿಮಾನವ ಬಿಟ್ಟುಹೋದ ಅವಶೇಷಗಳನ್ನು ರಾಮಾಯಣದಲ್ಲಿ ನಡೆದ ಘಟನೆಗಳಿಗೆ, ಅಲ್ಲಿ ಬರುವ ಪ್ರಮುಖ ವ್ಯಕ್ತಿಗಳಿಗೆ ಹೋಲಿಕೆ ಕೊಟ್ಟು ಜನಮನದಿಂದ ದೂರವಾಗದಂತೆ ಪ್ರಚಾರ ಗಿಟ್ಟಿಸಲಾಯಿತು. ಇವು ಮುಂದೆ ಚಾರಿತ್ರಿಕ ಘಟನೆಗಳಂತೆ ರೂಪ ತಳೆದು ಶಾಸನಗಳಲ್ಲೂ ಉಲ್ಲೇಖವಾಗಿ, ವಿಜಯನಗರ ಕಾಲದಲ್ಲಿ ನಿರ್ಮಾಣವಾದ ವಾಸ್ತುಶಿಲ್ಪಕಲೆಯಲ್ಲಿ ಅನೇಕ ಸನ್ನಿವೇಶಗಳನ್ನು ಅಳವಡಿಸಲಾಯಿತು.

ಈ ಪರಿಸರದಲ್ಲಿ ನವಶಿಲಾಸಂಸ್ಕೃತಿಯ ಕಾಲಘಟ್ಟದಲ್ಲಿ ನಿರ್ಮಾಣವಾದ ಅನೇಕ ಬೂದಿದಿಬ್ಬಗಳಿವೆ. ಅವುಗಳ ಆಕಾರವನ್ನು ಗಮನಿಸಿ ಪ್ರಮುಖ ವ್ಯಕ್ತಿಗಳನ್ನು ಇಲ್ಲವೇ ರಾಕ್ಷಸರನ್ನು ದಹನ ಕ್ರಿಯೆಗೊಳಿಸಿದ್ದರಿಂದ ಉಂಟಾದವೆಂದು ನಂಬಲಾಗಿದೆ. ವೆಂಕಟಾಪುರದ ಬೂದಿದಿಬ್ಬ ವಾಲಿಯನ್ನು ದಹಿಸಿದ್ದರಿಂದ ಹಾಗೂ ಕುಡತಿನಿಯ ಬೂದಿದಿಬ್ಬ ರಾಮನ ಬಾಣದಿಂದ ಸಾವಿಗೀಡಾದ ರಾಕ್ಷಸನನ್ನು ದಹಿಸಿದ್ದರಿಂದ ಉಂಟಾದವುಗಳೆಂದು ಇಂದಿಗೂ ಪ್ರಚಾರ ಪಡೆದಿವೆ.

ಈ ಪ್ರದೇಶದಲ್ಲಿರುವ ವಿಜಯನಗರ ಕಾಲದ ಹಲವಾರು ಆಂಜನೇಯ ದೇವಾಲಯಗಳಲ್ಲಿ ಯುದ್ಧಕಾಂಡದಲ್ಲಿ ಬರುವ ಹನುಮಂತನ ಸಾಧನೆಗಳನ್ನು ನಿರೂಪಿಸುವ ಉಬ್ಬು ಶಿಲ್ಪಗಳನ್ನು ಕಂಬದ ಮೇಲೆ ಕೆತ್ತಲಾಗಿದೆ. ಹಂಪೆಯ ಹತ್ತಿರ ತುಂಗಭದ್ರಾ ದಂಡೆಯ ಮೇಲೆ ಪಂಪಾ ಸರೋವರ, ಮಾನಸ ಸರೋವರ, ಹತ್ತಿರದ ಬೆಟ್ಟದಲ್ಲಿ ಶಬರಿ ಗುಹೆ, ಇನ್ನೊಂದು ಬೆಟ್ಟ ಅಂಜನಾದ್ರಿ, ಆನೆಗುಂದಿ ಹತ್ತಿರ ಬಲಮುರಿ ಸಾಲಿನ ಒಂದು ಭಾಗ ವಾಲಿಭಂಡಾರ ಹಾಗೂ ಈ ನದಿಯ ಇನ್ನೊಂದು ಭಾಗದಲ್ಲಿ ಸುಗ್ರೀವ ಗುಹೆ, ಸೀತೆ ಸೆರಗು, ಮಾತಂಗ ಪರ್ವತ, ಹೇಮಕೂಟ, ರತ್ನಕೂಟ ಮೊದಲಾದವು ಕಂಡುಬರುತ್ತವೆ.[೧೨]

ಪಂಪಾಸರೋವರ ನಿಸರ್ಗ ನಿರ್ಮಿತ ಗುಹೆಗಳಲ್ಲಿ ಎರಡು ಸಾವಿರ ವರ್ಷಗಳ ಪೂರ್ವದ ವರ್ಣಚಿತ್ರಗಳಿದ್ದು, ಆನೆಗುಂದಿ ಹತ್ತಿರ ಗವಿಯೊಂದರಲ್ಲಿ ಮನುಷ್ಯನಿಗೆ ಉದ್ದ ಬಾಲವಿರುವುದು ಗಮನಾರ್ಹ ಇಂತಹ ಬಾಲವಿರುವ ಮನುಷ್ಯರ ಚಿತ್ರಗಳು ಇದಕ್ಕೆ ಹತ್ತಿರದಲ್ಲಿ ಹಿರೇಬೇಣಕಲ್ಲು, ಮಲ್ಲಾಪುರಗಳಲ್ಲೂ ಕಂಡುಬರುತ್ತವೆ. ವಾಲಿ ಭಂಡಾರದ ಬಂಡೆಯ ಮೇಲೆ ಹಲವಾರು ವಾನರರು ಹಣ್ಣುಗಳನ್ನು ಕೀಳುವುದು ಮತ್ತು ತಿನ್ನುತ್ತಿರುವುದನ್ನು ಚಿತ್ರಿಸಲಾಗಿದೆ. ಇದು ತಕ್ಕ ಮಟ್ಟಿಗೆ ಹನುಮಂತನು ಸೀತೆಯನ್ನು ಹುಡುಕಿ ಸಂತೋಷದಿಂದ ಹಣ್ಣು ಹಂಪಲುಗಳಿಂದ ನಿಬಿಡವಾದ ‘ಮಧುವನ’ವನ್ನು ಪ್ರವೇಶಿಸಿದ ಸಂದರ್ಭವನ್ನು ಸೂಚಿಸುತ್ತದೆ. ನವ ಬೃಂದಾವನ ಸಮೀಪ ನದಿ ದಂಡೆಯ ಮೇಲೆ ಚಿಂಚಲಕೋಟೆ ಇದೆ. ಸಂತರದ ಅವಧಿಯಲ್ಲಿ ಒಂದುವರೆ ಮೀಟರ್‌ನಷ್ಟು ಎತ್ತರ, ಒಂದು ಮೀಟರ್‌ನಷ್ಟು ಅಗಲವಾಗಿರುವ ಗೋಡೆಯನ್ನು ಕೆತ್ತಿದ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿ ನಿರ್ಮಿಸಿದ ಇದನ್ನು ಅದೇ ಹೆಸರಿನಿಂದ ಕರೆಯಲಾಗುತ್ತಿದೆ.”

ಬಲಶಾಲಿಯಾದ ವಾಲಿಗೆ ಹೆದರಿ ಸುಗ್ರೀವ ಹನುಮಂತಾದಿಗಳು ಆತಂಕದಿಂದ ಕಾಲ ಕಳೆಯುತ್ತಿದ್ದಾಗ, ದುಃಖಿತಪ್ತರಾದ ರಾಮ-ಲಕ್ಷ್ಮಣರು ಸೀತೆಯ ಶೋಧನೆಗೆ ಬರುತ್ತಿರುವುದನ್ನು ಕಂಡು ಇವರು ವಾಲಿಯ ಕಡೆ ಗುಪ್ತಚಾರರಿರಬಹುದೆಂದು ಸಂದೇಹಗೊಂಡ ಮನಸ್ಸು ಚಂಚಲವಾಯಿತು. ಇದರಿಂದ ಚಿಂ(ಚ)ಚಲ ಕೋಟೆ ಎಂದು ಹೆಸರು ಬಂತೆಂದು ಸ್ಥಳೀಯರ ಪ್ರತೀತಿ. ಈ ಕಣಿವೆ ಪ್ರದೇಶದಲ್ಲಿ ಸುಮಾರು ೨೦೦೦ ವರ್ಷಗಳ ಹಿಂದೆ ಜನವಸತಿ ಇದ್ದ ಕುರುಹುಗಳಿವೆ. ರಾಮ-ಲಕ್ಷ್ಮಣ, ಸುಗ್ರೀವರ ಮೊದಲ ಭೇಟಿ ಮಾತಂಗ ಪರ್ವತದಲ್ಲಾಗುತ್ತದೆ. ಹೆಚ್ಚುಕಾಲ ಸುಗ್ರೀವ ಈ ಪರ್ವತದಲ್ಲಿಯೇ ಕಳೆಯುತ್ತಿದ್ದ. ಕಾರಣ ವಾಲಿಯು ದುಂದುಭಿ ಎಂಬ ಅಸುರನನ್ನು ಕೊಂದಾಗ ಅವನ ರುಂಡ ಈ ಪರ್ವತದಲ್ಲಿ ತಪಸ್ಸು ಮಾಡಿಕೊಂಡಿದ್ದ ಮಾತಂಗ ಮುನಿಯ ಆಶ್ರಮದಲ್ಲಿ ಬಂದು ಬೀಳುತ್ತದೆ. ಕೋಪಗೊಂಡ ಮುನಿ ವಾಲಿ ಮರಳಿ ಇಲ್ಲಿಗೆ ಬಂದರೆ ಬದುಕಲಾರ ಎಂದು ಶಾಪ ಕೊಡುತ್ತಾನೆ. ಇದರಿಂದ ವಾಲಿ ಇಲ್ಲಿಗೆ ಬರುವಂತಿರಲಿಲ್ಲ.[೧೩]

ರಾಮ-ಲಕ್ಷ್ಮಣ, ಸುಗ್ರೀವರ ನಡುವೆ ನಡೆದ ಒಪ್ಪಂದದಂತೆ ವಾಲಿಯನ್ನು ಹತ್ಯೆಗಯ್ಯಲು ರಾಮ ಒಪ್ಪಿಕೊಂಡನು. ಆದರೆ ಸುಗ್ರೀವನಿಗೆ ಬಲಿಷ್ಠನಾದ ವಾಲಿಯನ್ನು ಕೊಲ್ಲಲು ರಾಮನಲ್ಲಿರುವ ಶಸ್ತ್ರಾಸ್ತ್ರಗಳ ಬಗ್ಗೆ ಸಂದೇಹ ಉಂಟಾಗುತ್ತದೆ. ಅದಕ್ಕೆ ರಾಮನ ತನ್ನಲ್ಲಿರುವ ಶಕ್ತಿ ಸಾಮರ್ಥ್ಯವನ್ನು ಹೊಂದಿದ ಶಸ್ತ್ರಾಸ್ತ್ರಗಳ ಬಗ್ಗೆ ಅವನಿಗೆ ತನ್ನ ಬಾಣಗಳು ಕಾರ್ತಿಕೇಯ ವನದಲ್ಲಿ ಸಿದ್ಧವಾದವು. ಅವು ಹೇಮ ವಿಭೂಷಿತಾ... ಮಹೇಂದ್ರಾಶನಿಸನ್ನಿಭಾಃ... ಸುಪರ್ವಾಣಃ ಸುತೀಕ್ಷ್ಣಾಗ್ರಾಃ ಎಂದು ಹೇಳಿದ್ದಾನೆ.[೧೪] ಈ ಅವಧಿಯಲ್ಲಿ ಕಾರ್ತಿಕೇಯವನ ಕಮ್ಮಾರಿಕೆ ಚಟುವಟಿಕೆಯಿಂದ ಪ್ರಸಿದ್ಧಿಯನ್ನು ಪಡೆದಿತ್ತು.

ಮೇಲಿನ ಸ್ಥಳಗಳಿಗೆ ಪೂರಕವೆಂಬಂದತೆ ಬೆಳಗಾವಿ ಜಿಲ್ಲೆಯ ಶಿರಸಂಗಿ ಕಾಳಮ್ಮನ ಗುಡಿಯಲ್ಲಿರುವ ಶಾಸನದಲ್ಲಿ ಈ ರೀತಿಯಾಗಿದೆ.[೧೫] "ಹಿಮವತ್ಸವರ್ಭತ ವಿಂಧ್ಯಸ್ಯಳಪತಿ ಕಿಷ್ಕಿಂಧಾದ್ರಿಯಿಲು ಭೂದ್ರಮೆ ಪೂರ್ವಾಪರ ವಾರ್ಧಿಯಾಂಕೆ ನಿಜವಿಸ್ತಾರಕ್ಕನಲು ನೀಳ್ದವಾಹಿಮವದ್ವಿಂಧ್ಯದರಾಧರಂಗಳೆರಡಕ್ಕಂ ತಾನೆ ಮೇಲಾದೆ (ದುದು)ತ್ತಮ ಕಿಷ್ಕಿಂಧ ಗಿರೀಂದ್ರವೆ(ವು)ತ್ತಮ ಜನೌಘಂ ತನೊಳೊಪುತ್ತಿರಲು ಅವರಾರನೆ ತರದಿಂ ಬಾಲಿ ಮರುತ್ಸುತಾಂಗದ ದಿನೆಯಶಾಪತ್ಯತಾರಾ ಮನೋಹರಿ ವಿಪ್ರರ್ಷಿ ಮತಂಗ ಹಂಸ ಕಪಿಲ ತ್ರಿಶೌನಕಾಗಸ್ತ್ಯ ಸಚ್ಚರಿತೋದ್ಧಾನೆ ವಿಭಾಂಡಕ ಪ್ರಿಯಸುತ ಶ್ರೀ ರಿಶ್ಯಶೃಂಗ ಬ್ರಲೇಶ್ವರಗಾರ್ಗಯಿತಾಶ್ರಯವಂತ ದೆಂಬೆನವೆಯೆಂ ಕಿಷ್ಕಿಂಧಮಂ ಬಣ್ಣಿಸಲು" ಪೂರ್ವ-ಪಶ್ಚಿಮ ಹಾಗೂ ಸಮುದ್ರ ಪರ್ಯಂತ ವಿಸ್ತಾರವಾದ ಭೂಮಿಗೆ ಹಿಮವತ್ಪರ್ವತ, ವಿಂಧ್ಯ, ಕಿಷ್ಕಿಂದ ಈ ಮೂರು ಪರ್ವತಗಳು ಉನ್ನತವಾದವು. ಇವುಗಳಲ್ಲಿ ಅತ್ಯಂತ ಶ್ರೇಷ್ಠವಾದುದು, ಉತ್ತಮವಾದುದು ಎಂದರೆ ಕಿಷ್ಕಿಂಧ ಗಿರಿ. ಇದು ಜನನಿಬಿಡವಾದ ನಗರವಾಗಿತ್ತು. ಅದರಲ್ಲಿ ವಾಲಿ, ವರುತ್ಸ, ಅಂಗದ, ದಿನೆಯಶ, ಮತಂಗ, ಹಂಸ, ಕಪಿಲ, ಶಾರ್ಗ, ಅಗಸ್ತ್ಯ, ವಿಭಾಂಡಕನ ಪುತ್ರ ಋಷ್ಯಶೃಂಗ ಮೊದಲಾದ ಋಷಿಗಳಿಗೆ ಆಶ್ರಯ ಸ್ಥಾನವಾಗಿತ್ತೆಂದು ವರ್ಣಿಸುತ್ತದೆ.

ಹಂಪಿಯಿಂದ ೧೦ ಕಿ.ಮೀ. ದೂರದಲ್ಲಿರುವ ದೇವಘಾಟ್ ಎಂಬಲ್ಲಿಯ ಕ್ರಿ.ಶ. ೧೦೭೯ ರ ಶಾಸನದಲ್ಲಿ "ತುಂಗಭದ್ರ ತಟದ ಬಡಗ ಕಿಷ್ಕಿಂಧಾಮಿ ಪರ್ವತಂ" ಎಂಬ ಉಲ್ಲೇಖವಿದೆ.[೧೬] ೧೦-೧೨ ನೆಯ ಶತಮಾನದ ಶಾಸನಗಳಲ್ಲಿ ಹಂಪಿಯನ್ನು ಕಿಷ್ಕಿಂಧವೆಂದು ಕರೆದಿರುವುದರಿಂದ ಇದು ಸುಮಾರು

ಐದುನೂರು ವರ್ಷಗಳ ಹಿಂದಿನಿಂದಲೂ ಗುರುತಿಸಿಕೊಂಡಿರಲು ಸಾಧ್ಯತೆ ಇದೆ. ರಾಮಾಯಣ ಮಹಾಕಾವ್ಯದಲ್ಲಿರುವ ಸನ್ನಿವೇಶ ಮತ್ತು ಭೌಗೋಳಿಕ ಪರಿಸರವನ್ನು ಕೂಲಂಕುಷವಾಗಿ ಅಧ್ಯಯನ ಮಾಡಿದ ರಾಮದಾಸ, ಸರ್ದಾರ್ ಕೈಬ್, ರಾಮದಾಸ ಹೀರಾಲಾಲ್, ಪರಮಶಿವ ಅಯ್ಯರ್, ಯು.ಪಿ.ಷಹಾ, ಸಂಕಾಲಿಯಾ ಮೊದಲಾದವರು ಅಯೋಧ್ಯ, ಚಿತ್ರಕೂಟ, ಪಂಚವಟಿ, ಮಾರೀಚಾಶ್ರಮ, ಕಿಷ್ಕಿಂಧ, ಮತಂಗಾಶ್ರಮ, ಋಷ್ಯಮುಖ ಸಾಗರ ಮುಂತಾದ ಸ್ಥಳಗಳು ನರ್ಮದಾ ನದಿಯ ಉತ್ತರಕ್ಕೆ ಅರಣ್ಯ ಪರ್ವತಗಳಿಂದ ಕೂಡಿದ ಹಾಗೂ ಸವರರು, ಗೂಂಡಾ ಆದಿವಾಸಿಗಳಿರುವ ನಾಗಪುರ ಪ್ರದೇಶದಲ್ಲಿದ್ದವೆಂದೂ, ಓಬಲ್‌ಪುರದಿಂದ ಉತ್ತರಕ್ಕೆ ಸುಮಾರು ೩೦ ಕಿ.ಮೀ. ದೂರದಲ್ಲಿರುವ ಲಂಕೆಯೇ ರಾಮಾಯಣದ ಲಂಕೆಯಾಗಿತ್ತೆಂದು ಅಭಿಪ್ರಾಯಪಡುತ್ತಾರೆ.[೧೭] ಅಲ್ಲದೆ ರಾಮಾಯಣದಲ್ಲಿ ಉಲ್ಲೇಖವಾದ ಸಾಲವೃಕ್ಷ ಕಿಷ್ಕಿಂಧ ಭಾಗದಲ್ಲಿ ಮಾತ್ರ ಬೆಳೆಯುತ್ತಿದ್ದವು. ಈ ಎಲ್ಲಾ ಲಕ್ಷಣಗಳು ಈ ಪ್ರದೇಶದಲ್ಲಿರುವುದರಿಂದ ಇದೆ ದಂಡಕಾರಣ್ಯವಾಗಿತ್ತು. ಈ ಹಂಪಿ–ಆನೆಗುಂದಿ ಪ್ರದೇಶವನ್ನು ಕಿಷ್ಕಿಂಧವೆಂದೂ, ಈಗಿನ ಶ್ರೀಲಂಕಾವನ್ನು ಲಂಕೆಯೆಂದು ತಪ್ಪಾಗಿ ತಿಳಿಯಲಾಯಿತೆಂದು ಹೇಳಿದ್ದಾರೆ.

ಹಂಪಿ–ಆನೆಗುಂದಿ ಪ್ರದೇಶದ ಭೌಗೋಳಿಕ ಲಕ್ಷಣ, ಮಹಾಕಾವ್ಯದಲ್ಲಿ ಉಲ್ಲೇಖವಾದ ಅನೇಕ ಹೆಸರುಗಳು, ಪ್ರಾಗಿತಿಹಾಸ ಕಾಲದ ಅವಶೇಷಗಳು, ಶಾಸನಗಳು ಮತ್ತು ಆ ಭಾಗದಲ್ಲಿ ಪ್ರಚಲಿತವಿರುವ ಕಥೆ–ಪುರಾಣಗಳನ್ನು ಪರಿಶೀಲಿಸಿ ವ್ಯಾಪಕ ಅಧ್ಯಯನದ ಮೂಲಕ ಹಂಪಿ–ಪ್ರಾಚೀನ ಕಿಷ್ಕಿಂಧವಾಗಿತ್ತೆಂದು ಡಾ. ಅ.ಸುಂದರ ರವರು ತರ್ಕಿಸಿದ್ದಾರೆ.[೧೮] ಈ ಹಿನ್ನೆಲೆಯಲ್ಲಿ ಇದುವರೆಗೆ ಅಧ್ಯಯನ ಕೈಗೊಂಡ ತಜ್ಞರ ಹೇಳಿಕೆಗಳನ್ನು ಗಮನದಲ್ಲಿಟ್ಟುಕೊಂಡು, ಆಕರಗಳ ಪರಿಶೀಲನೆ ವಿಮರ್ಶೆಗಳೊಂದಿಗೆ ಪೂರಕ ಮಾಹಿತಿ ಸಂಗ್ರಹಿಸುವ ಮೂಲಕ ನಿಷ್ಪಕ್ಷಪಾತವಾಗಿ ಆಳ ಅಧ್ಯಯನವಾಗಬೇಕಾಗಿದೆ.

ಹೀಗೆ ಪ್ರಾಚೀನ ಹಂಪಿ ಅದರ ಪರಿಸರದಲ್ಲಿ ಆದಿ ಮಾನವನ ವಾಸಸ್ಥಾನವಾಗಿ, ಪಂಪಾಕ್ಷೇತ್ರವಾಗಿ, ಕಿಷ್ಕಿಂಧವಾಗಿ, ಕಾರ್ತಿಕೇಯ ಕ್ಷೇತ್ರವಾಗಿ ತಿರುವು ಪಡೆದುಕೊಳ್ಳುತ್ತ ಬಂದಿರುವುದು ವ್ಯಕ್ತವಾಗುತ್ತದೆ. ಹೀಗೆ, ಪೌರಾಣಿಕ ಶ್ರೇಷ್ಠತೆಯನ್ನು ಪಡೆದ ಈ ಕ್ಷೇತ್ರ ಧಾರ್ಮಿಕ, ಸಾಮಾಜಿಕ ಮಹತ್ವ ಪಡೆಯುತ್ತ ರಾಜಕೀಯ ಚಟುವಟಿಕೆಗಳಿಗೆ ಎಡೆಮಾಡಿಕೊಟ್ಟಿತು.

**ಚಾರಿತ್ರಿಕ ಹಿನ್ನೆಲೆ**

ಕರ್ನಾಟಕವನ್ನು ಮುನ್ನಡೆಸಿದ ಶಕ್ತಿಗಳಲ್ಲಿ ರಾಜಶಕ್ತಿ ಅಥವಾ ರಾಜಕೀಯ ಘಟನಾವಳಿಗಳು ಮಹತ್ತರ ಪಾತ್ರ ವಹಿಸಿವೆ. ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ಯಾದವರು ಮತ್ತು ವಿಜಯನಗರದ ಅರಸರು, ಶಾಹಿ ಸುಲ್ತಾನರು ರಾಜಕೀಯ ಮತ್ತು ಸಾಂಸ್ಕೃತಿಕ ದೃಷ್ಟಿಯಿಂದ ಕನ್ನಡ ನಾಡಿಗೆ ವೈಶಿಷ್ಟ್ಯಪೂರ್ಣ ಕೊಡುಗೆ ಸಲ್ಲಿಸಿದ್ದಾರೆ.

**ರಾಜಕೀಯ ಚರಿತ್ರೆ :**

ನಂದರು : ಪುರಾಣಗಳ ಪ್ರಕಾರ ಸಮಗ್ರ ಭಾರತವು ನಂದರ ಅಧೀನಕ್ಕೊಳಪಟ್ಟಿತ್ತೆಂದು ತಿಳಿದುಬರುತ್ತದೆ. ಕೆಲವು ಪರೋಕ್ಷ ಮಾಹಿತಿಗಳಿಂದ ಕ್ರಿ.ಪೂ. ೪ ನೆಯ ಶತಮಾನದಲ್ಲಿ ನಂದರು ಹಂಪಿ ಪರಿಸರದ ಬಳ್ಳಾರಿ ಪ್ರದೇಶವನ್ನು ಆಳಿದರೆಂದು ತಿಳಿದುಬರುತ್ತದೆ. ಅನಂತರದ ಕಾಲದ ಕೆಲವು ಕನ್ನಡ

ಶಾಸನಗಳು (ಕ್ರಿ.ಶ. ೧೦ ರಿಂದ ೧೩ ನೆಯ ಶತಮಾನ) ನಂದರು ಕುಂತಳ ದೇಶವನ್ನಾಳಿದ ಬಗ್ಗೆ ಬೆಳಕು ಚೆಲ್ಲುತ್ತವೆ. ಅಂತಹ ಒಂದು ಶಾಸನವ ಕುಂತಳ ರಾಜ್ಯಕ್ಕೆ ಈ ನಂದರು ಅಧಿಪತಿಗಳಾಗಿದ್ದರೆಂದು ತಿಳಿಸುತ್ತದೆ.[೧೯]

**ಮೌರ್ಯರು** : ಹಂಪಿಯ ಸುತ್ತಮುತ್ತಲೂ ಅನೇಯಕ ಸ್ಥಳಗಳಲ್ಲಿ ಅಶೋಕ ಸಾಮ್ರಾಜ್ಯದ ಶಾಸನಗಳು ಕಂಡುಬಂದಿರುವುದು ಮೌರ್ಯರ ಕಾಲದಲ್ಲಿ ಈ ಪ್ರದೇಶ ವಿಶೇಷ ಮಹತ್ವ ಪಡೆದಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಪ್ರಮುಖವಾಗಿ ಗವಿಮಠ, ಪಾಲ್ಕಿಗುಂಡು (ಕೊಪ್ಪಳ ಜಿಲ್ಲೆ), ಮಸ್ಕಿ (ರಾಯಚೂರು ಜಿಲ್ಲೆ), ನಿಟ್ಟೂರು, ಉದಯಗೊಳಂ (ಬಳ್ಳಾರಿ ಜಿಲ್ಲೆ), ಬ್ರಹ್ಮಗಿರಿ, ಸಿದ್ದಾಪುರ, ಜಟಿಂಗರಾಮೇಶ್ವರ (ಚಿತ್ರದುರ್ಗ ಜಿಲ್ಲೆ) ಈ ಸ್ಥಳಗಳಲ್ಲಿ ಅಶೋಕನ ಶಾಸನಗಳು ದೊರಕಿವೆ.[೨೦] ಇವುಗಳಲ್ಲಿ ಮಸ್ಕಿ ಶಾಸನವು ಪ್ರಮುಖವಾಗಿದ್ದು 'ದೇವನಾಂಪ್ರಿಯ ಪ್ರಿಯದರ್ಶಿ' ಎಂಬ ಬಿರುದು ಅಶೋಕನದೇ ಎಂಬ ಮಾಹಿತಿಯನ್ನು ಖಚಿತಪಡಿಸುತ್ತದೆ. ಕೊಪ್ಪಳ ಗವಿಮಠ ಸಮೀಪದ ಬಂಡೆಗಳಲ್ಲಿನ ಶಾಸನದಲ್ಲಿ ದೇವನಾಂಪ್ರಿಯನಾದ ಅಶೋಕನು ತನ್ನ ಸಾಮ್ರಾಜ್ಯದ ಜನರು ಆಚರಿಸಬೇಕಾದ ಧರ್ಮವನ್ನು ಕುರಿತು ಹೇಳಿದ್ದಾನೆ. ಅಂತೆಯೇ ಮಸ್ಕಿ, ನಿಟ್ಟೂರು, ಉದಯಗೊಳಂ ಶಾಸನಗಳು ಅಶೋಕನ ಹೆಸರನ್ನು ನೇರವಾಗಿ ಹೇಳುವುದರಿಂದ ಚಾರಿತ್ರಿಕ ಮಹತ್ವವನ್ನು ಪಡೆದಿವೆ.

**ಶಾತವಾಹನರು** : ದಕ್ಷಿಣ ಭಾರತದಲ್ಲಿ ಮೌರ್ಯರ ತರುವಾಯ ಶಾತವಾಹನರು ಪ್ರಾಬಲ್ಯಕ್ಕೆ ಬಂದು ಸು. ಕ್ರಿಪೂ. ೨೨೦ ರಿಂದ ಕ್ರಿ.ಶ. ೨೩೦ ರ ವರೆಗೆ ರಾಜ್ಯವಾಳಿದರು. ಡಾ॥ ಸುಕ್ತಂಕರ ಶಾತವಾಹನರ ಕೆಲವು ಪ್ರಾಕೃತ ಶಾಸನಗಳಲ್ಲಿ ವ್ಯಕ್ತವಾಗುವ ಶಾತವಾಹನೀಹಾರ ಮತ್ತು ಶಾತವಾಹನೀರಟ್ಟ ಅಂದರೆ ಶಾತವಾಹನೀ ಪ್ರದೇಶ ಎಂಬ ಪದಗಳ ಆಧಾರದ ಮೇಲೆ ಅವರು ಕನ್ನಡ ಪ್ರದೇಶದವರೆಂದು ಅದು ಹಂಪಿ ಪರಿಸರದ ಬಳ್ಳಾರಿ ಪ್ರದೇಶವೆಂದು ಗುರುತಿಸುತ್ತರೆ. ಈ ಪದಗಳು ಮ್ಯಾಕೆದೋಣಿ ಮತ್ತು ಹಿರೇಹಡಗಲಿ ಶಾಸನಗಳಲ್ಲಿ ಕಂಡುಬರುತ್ತವೆ. ಕರ್ನಾಟಕದಲ್ಲೇ ಹೆಚ್ಚಾಗಿ ದೊರೆಯುವ ಶಾತವಾಹನರ ಶಾಸನಗಳಲ್ಲಿ ಅವರನ್ನು ಕುಂತಳಸ್ವಾಮಿ ಎಂದು ಕರೆಯಲಾಗಿದೆ.[೨೧] ಶಾತವಾಹನರ ಕೊನೆಯ ಅರಸರಲ್ಲಿ ಒಬ್ಬನಾದ ಪುಲುಮಾಯಿಗೆ ಸೇರಿದ ಶಾಸನವೊಂದು ಬಳ್ಳಾರಿ ಜಿಲ್ಲೆಯಲ್ಲಿ ದೊರಕಿದೆ. ಈ ಮೇಲಿನ ಅಂಶಗಳು ಈ ಪ್ರದೇಶದಲ್ಲಿನ ಶಾತವಾಹನರ ಆಳ್ವಿಕೆಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇತ್ತೀಚೆಗೆ ಹಂಪಿಯ ಉತ್ಖನನದಲ್ಲಿ ಬ್ರಾಹ್ಮೀ ಲಿಪಿ ಮತ್ತು ಪ್ರಾಕೃತ ಭಾಷೆಯ ಶಾಸನಗಳಿರುವ ಸುಣ್ಣ ಕಲ್ಲಿನ ಫಲಕಗಳು ಬೆಳಕಿಗೆ ಬಂದಿವೆ.[೨೨] ಹಾಗೆಯೇ ಹಂಪಿ ಪ್ರದೇಶದಲ್ಲಿ ಗಾಂಧಾರ ಶೈಲಿಯ ಬಿಳಿಯ ಜೇಡಿಮಣ್ಣಿನ ಗೊಂಬೆಗಳು ದೊರೆತಿದ್ದು, ಅವುಗಳ ಕಾಲ ಕ್ರಿ.ಶ. ೨ ನೆಯ ಶತಮಾನವೆಂದು ಡಾ॥ ಅ.ಸುಂದರ ತಿಳಿಸುತ್ತಾರೆ.[೨೩]

**ಕದಂಬರು** : ಕದಂಬರ ಮೊದಲ ದೊರೆ ಮಯೂರಶರ್ಮನ ಶಾಸನವು ಈ ಪರಿಸರದ ನೆರೆಯ ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ದೊರೆತಿದ್ದು, ಶಾತವಾಹನೀ ರಾಷ್ಟ್ರದ ಸೇಂದ್ರಕ ವಿಷಯವನ್ನು ಆಳಿದನೆಂದು ತಿಳಿಸುತ್ತದೆ. ಕದಂಬರು ಬನವಾಸಿಯಿಂದ ರಾಜ್ಯವಾಳುತ್ತಿದ್ದು ಈ ಪ್ರದೇಶದ ಸಮೀಪದ ಉಚ್ಚಂಗಿಯು ಅವರ ಪೂರ್ವ ಪ್ರಾಂತದ ರಾಜಧಾನಿಯಾಗಿತ್ತು. ಇವರ ರಾಜ್ಯವು ಪಶ್ಚಿಮ ತೀರದಿಂದ ಬಳ್ಳಾರಿ ಪ್ರದೇಶದವರೆಗೂ ಹಬ್ಬಿತ್ತು. ಹಂಪಿ ಪರಿಸರದ ಸಂಡೂರು ಪ್ರದೇಶ ಮತ್ತು ಆಗಿನ

ಕುಮಾರಸ್ವಾಮಿ ದೇವಾಲಯವು ಕದಂಬರ ಕಾಲದಲ್ಲೇ ಪ್ರಾಮುಖ್ಯತೆ ಪಡೆದಿದ್ದವು. ಬಳಿಕ ಬಾದಾಮಿ ಚಾಲುಕ್ಯರ ಪ್ರಾಬಲ್ಯದಿಂದಾಗಿ ಕದಂಬರು ಅವರ ಸಾಮಂತರಾಗಿ ಮುಂದುವರೆದರು.[೨೪]

**ಬಾದಾಮಿ ಚಾಲುಕ್ಯರು** : ಬಾದಾಮಿ ಚಾಲುಕ್ಯರು ಒಂದನೆಯ ಪುಲಕೇಶಿಯ ಕಾಲಕ್ಕೆ ಪ್ರಾಬಲ್ಯಕ್ಕೆ ಬಂದರು. ಇವನ ಮಗನಾದ ಕೀರ್ತಿವರ್ಮನು ಕೊಂಕಣದ ಮೌರ್ಯರನ್ನು, ಬನವಾಸಿಯ ಕದಂಬರನ್ನು, ಬಳ್ಳಾರಿ ಮತ್ತು ಕರ್ನೂಲ್ ಪ್ರಾಂತಗಳನ್ನಾಳುತ್ತಿದ್ದ ನಳರನ್ನು ಸೋಲಿಸಿದನು. ಈ ವಂಶದ ಬಲಿಷ್ಠ ದೊರೆಯಾದ ಇಮ್ಮಡಿ ಪುಲಕೇಶಿಯ ಐಹೊಳೆ ಪ್ರಶಸ್ತಿ ಈ ಪ್ರದೇಶ ಸೇರಿದಂತೆ ಇಡೀ ದಕ್ಷಿಣಾಪಥವು ಅವನ ಆಳ್ವಿಕೆಗೆ ಒಳಗಾದ ಬಗ್ಗೆ ತಿಳಿಸುತ್ತದೆ. ಬಾದಾಮಿ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದುರ್ಗ/ಪಾರ್ವತಿ ದೇವಾಲಯವೊಂದು ಹಂಪಿ ಪರಿಸರದ ಸಂಡೂರಿನ ಕುಮಾರಸ್ವಾಮಿ ಬೆಟ್ಟದಲ್ಲಿದೆ. ಇಲ್ಲಿರುವ ಕುಮಾರಸ್ವಾಮಿ / ಕಾರ್ತಿಕೇಯ ಬಾದಾಮಿ ಚಾಲುಕ್ಯರ ಆರಾಧ್ಯ ದೈವ. ಇಮ್ಮಡಿ ಪುಲಕೇಶಿ ತನ್ನ ಮಕ್ಕಳನ್ನು ಬಳ್ಳಾರಿ ಮತ್ತು ಕರ್ನೂಲ್ ಪ್ರದೇಶಗಳಿಗೆ ಪ್ರಾಂತಾಧಿಕಾರಿಗಳನ್ನಾಗಿ ನೆಯಮಿಸಿದನು. ಬಾದಾಮಿಯು ಪಲ್ಲವರ ದಾಳಿಗೀಡಾದಾಗ ಚಾಲುಕ್ಯರ ಆದಿತ್ಯವರ್ಮ ಮತ್ತು ಚಂದ್ರಾದಿತ್ಯ ಕೆಲ ಕಾಲ ಈ ಪ್ರದೇಶವನ್ನಾಳಿದರು. ಆದಿತ್ಯವರ್ಮನು ಈ ಪರಿಸರದ ಮುಂಡಕಲ್ ಮತ್ತು ಪರಗೆರೆ ಗ್ರಾಮಗಳನ್ನು ದತ್ತಿಬಿಟ್ಟನು. ವಿನಯಾದಿತ್ಯನು ತನ್ನ ಸೈನ್ಯದೊಂದಿಗೆ ಪಂಪಾತೀರ್ಥದಲ್ಲಿ ಬೀಡು ಬಿಟ್ಟಾಗ ಭೂಮಿಯನ್ನು ದತ್ತಿ ಬಿಡುತ್ತಾನೆಂದು ಕ್ರಿ.ಶ. ೬೮೯ ರ ತಾಮ್ರ ಶಾಸನವೊಂದು ತಿಳಿಸುತ್ತದೆ.[೨೫] ಅಂತೆಯೇ ತುಂಗಭದ್ರಾ ನದಿ ಎಡತೀರದ ಈ ಪರಿಸರದ ಕೊಪ್ಪಳ ಜಿಲ್ಲೆಯ ಹಲಗೇರಿ, ಇಟಗಿ ಮತ್ತು ಕುಕನೂರುಗಳಲ್ಲಿ ಇವರ ಶಾಸನಗಳು ತೊರೆತಿವೆ. ಕ್ರಿ.ಶ. ೭ ನೇ ಶತಮಾನದ ಹಲಗೇರಿ ಶಾಸನವು ವಿನಯಾದಿತ್ಯನ ಕಾಲದ್ದಾಗಿದ್ದು ಕೋಪಣ (ಕೊಪ್ಪಳ)ದ ಮೊದಲ ಉಲ್ಲೇಖ ನೀಡುತ್ತದೆ. ಇಟಗಿಯ ಶಾಸನವೊಂದು ಯುದ್ಧಮಲ್ಲ, ಸತ್ಯಾಶ್ರಯನ ಕಾಲಕ್ಕೆ ಸೇರಿದೆ. ಬಾದಾಮಿಯ ಚಾಲುಕ್ಯರು ಕ್ರಿ.ಶ. ೭೫೩ ರ ವರೆಗೂ ಈ ಪ್ರದೇಶವನ್ನು ಆಳಿದ್ದು ಶಾಸನಾಧಾರಗಳಿಂದ ದೃಢಪಡುತ್ತದೆ.[೨೬]

**ರಾಷ್ಟ್ರಕೂಟರು** : ರಾಷ್ಟ್ರಕೂಟರ ದಂತಿದುರ್ಗನು ಬಾದಾಮಿ ಚಾಲುಕ್ಯ ದೊರೆ ಇಮ್ಮಡಿ ಕೀರ್ತಿವರ್ಮನನ್ನು ಕ್ರಿ.ಶ. ೭೫೩ ರಲ್ಲಿ ಸೋಲಿಸಿ ಮಾನ್ಯಖೇಟದಿಂದ ಆಳ್ವಿಕೆಯನ್ನು ಆರಂಭಿಸುತ್ತಾನೆ. ನಂತರ ಬಂದ ಒಂದನೆಯ ಕೃಷ್ಣ ಮತ್ತು ದ್ರುವ ರಾಷ್ಟ್ರಕೂಟರ ಪರಮಾಧಿಕಾರವನ್ನು ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ಸ್ಥಾಪಿಸುತ್ತಾರೆ. ದ್ರುವನ ಮಗನಾದ ಮೂರನೆಯ ಗೋವಿಂದನು ನೊಳಂಬವಾಡಿಯನ್ನು ಜಯಸುತ್ತಾನೆ. ಈ ವಂಶದ ಇತರ ಪ್ರಖ್ಯಾತ ರಾಜರೆಂದರೆ ಒಂದನೆಯ ಅಮೋಘವರ್ಷ, ಇಮ್ಮಡಿ ಕೃಷ್ಣ, ಮುಮ್ಮಡಿ ಇಂದ್ರ, ಮುಮ್ಮಡಿ ಅಮೋಘವರ್ಷ, ಮುಮ್ಮಡಿ ಕೃಷ್ಣ ಮುಂತಾದವರು. ಹಂಪಿ ಪರಿಸರದ ಕುಡಿತಿನಿ ಶಾಸನವೊಂದು ರಾಷ್ಟ್ರಕೂಟರ ಖೊಟ್ಟಿಗನನ್ನು ಉಲ್ಲೇಖಿಸುತ್ತದೆ.[೨೭] ಹಾಗೆಯೇ ಈ ಪರಿಸರದ ಕೊಪ್ಪಳ, ಇಟಗಿ, ಅರಕೇರಿ, ಸಂಕನೂರು, ಅಳವಂಡಿ, ಬೆಟಗೇರಿ ಗ್ರಾಮಗಳಲ್ಲಿ ರಾಷ್ಟ್ರಕೂಟರಿಗೆ ಸಂಬಂಧಿಸಿದ ಶಾಸನಗಳು ದೊರೆತಿವೆ.

**ಗಂಗರು** : ಗಂಗರು ಈ ಪ್ರದೇಶದ ಬಳ್ಳಾರಿ ಜಿಲ್ಲೆಯ ಕೆಲವು ಭಾಗಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ದುರ್ವಿನೀತ ಮತ್ತು ಶ್ರೀಪುರುಷರು ತಮ್ಮ ರಾಜ್ಯವನ್ನು ಈ ಪ್ರದೇಶದ

ಹಗರಿ ನದಿಯವರೆಗೆ ವಿಸ್ತರಿಸಿದ್ದರು.[೨೮] ಹಂಪಿ ಪರಿಸರದ ಕೊಪ್ಪಳ ಜಿಲ್ಲೆಯಲ್ಲಿ ಗಂಗರ ಚರಿತ್ರೆಗೆ ಸಂಬಂಧಿಸಿದಂತೆ ಕುಕನೂರು, ಹೆಬ್ಬಾಳ, ಇಟಗಿ ಮತ್ತು ಕೊಪ್ಪಳಗಳಲ್ಲಿ ಶಾಸನಗಳು ದೊರಕಿವೆ. ಇಟಗಿ ಶಾಸನವು ಸ್ಪಷ್ಟವಾಗಿ ಕ್ರಿ.ಶ. ೯೩೯ ಕ್ಕೆ ಬೂತುಗ ರೇವಕನಿಮ್ಮಡಿಯನ್ನು ಮದುವೆಯಾಗಿದ್ದನ್ನು ಹಾಗೂ ಈ ಪ್ರದೇಶಗಳನ್ನು ಬೂತುಗನು ಪಡೆದಿದ್ದನ್ನು ತಿಳಿಸುತ್ತದೆ. ಇವನು ಇಟಗಿಗೆ ಬಂದಿದ್ದಂತೆ ಈ ಶಾಸನ ಸೂಚಿಸುತ್ತದೆ. ಇಮ್ಮಡಿ ಮಾರಸಿಂಹನ ಕಾಲದ ಕುಕನೂರಿನ ತಾಮ್ರ ಶಾಸನದಲ್ಲಿ ಗಂಗರ ಪಾರಂಪರಿಕ ವಂಶಾವಳಿಯನ್ನು ವಿವರವಾಗಿ ಈ ವಂಶದ ಮೊದಲ ಅರಸ ಕೊಂಗುಣಿವರ್ಮನಿಂದ ಹಿಡಿದು ಇಮ್ಮಡಿ ಮಾರಸಿಂಹನ ವರೆಗೆ ಆಳಿದ ರಾಜರನ್ನು ಇದು ಉಲ್ಲೇಖಿಸುತ್ತದೆ. ಕ್ರಿ.ಶ. ೯೬೭-೬೮ ರ ಇಟಗಿ ಶಾಸನದಲ್ಲಿ ರಾಷ್ಟ್ರಕೂಟ ಖೊಟ್ಟಿಗನ ಉಲ್ಲೇಖವಿದ್ದು ಈತ ಕೃಷ್ಣನ ಮರಣಾನಂತರ ಪಟ್ಟಕ್ಕೆ ಬಂದವನು. ಇವನ ಮಾಂಡಲೀಕನಾಗಿ ಗಂಗಪೆರ್ಮಾನಡಿ ಇದ್ದಂತೆ ತಿಳಿಯುತ್ತದೆ. ಹೆಬ್ಬಾಳದ ಕ್ರಿ.ಶ. ೧೦ ನೆಯ ಶತಮಾನದ ಶಾಸನದಲ್ಲಿ ಗಂಗರ ಪಾರಂಪರಿಕ ಬಿರುದುಗಳುಳ್ಳ ಗಂಗರಸನ ಉಲ್ಲೇಖವಿದ್ದು ಬಹುಶಃ ಇದು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಮಾರಸಿಂಹನದಾಗಿರಬಹುದು. ಹಾಗೆಯೇ ಕೊಪ್ಪಳದ ಸಿಪ್ಪಿ ಶಾಸನಗಳಲ್ಲಿ ಇವರ ಬಗ್ಗೆ ಹೆಚ್ಚಿನ ಉಲ್ಲೇಖಗಳು ದೊರೆಯುತ್ತವೆ.[೨೯]

**ಕಲ್ಯಾಣದ ಚಾಲುಕ್ಯರು** : ಕ್ರಿ.ಶ. ೯೭೩ ರಲ್ಲಿ ಕಲ್ಯಾಣದ ಚಾಲುಕ್ಯರು ತಮ್ಮ ಆಳ್ವಿಕೆಯನ್ನು ಪ್ರಾರಂಭಿಸಿದರು. ಈ ವಂಶದ ಇಮ್ಮಡಿ ತೈಲನು ರಾಷ್ಟ್ರಕೂಟರ ಕೊನೆಯ ದೊರೆಯನ್ನು ಪದಚ್ಯುತಗೊಳಿಸಿ ಅಧಿಕಾರ ಸ್ಥಾಪಿಸುತ್ತಾನೆ. ಕ್ರಿ.ಶ. ೯೭೨-೭೩ ರಲ್ಲಿ ರಾಷ್ಟ್ರಕೂಟರ ಖೊಟ್ಟಿಗನ ಆಳ್ವಿಕೆಯಲ್ಲಿ ಬೂತುಗದೇವನು ಕೋಗಳಿ ರಾಜಪಾಲನಾಗಿದ್ದನು. ಬಹುಶಃ ಗಂಗರ ಸಾಮಂತನಾದ ಪಾಂಚಾಲದೇವ ಬೂತುಗನನ್ನು ಕೋಗಳಿಯಿಂದ ಓಡಿಸುತ್ತಾನೆ. ನಂತರದ ಕಾಲದಲ್ಲಿ ಇಮ್ಮಡಿ ತೈಲನು ಬೂತುಗದೇವನೊಡಗೂಡಿ ಪಾಂಚಾಲದೇವನನ್ನು ಯುದ್ಧದಲ್ಲಿ ಸೋಲಿಸಿ ಬಳ್ಳಾರಿ ಪ್ರಾಂತವನ್ನು ಚಾಲುಕ್ಯರ ವಶಕ್ಕೆ ತೆಗೆದುಕೊಳ್ಳುತ್ತಾನೆ. ಹಂಪಿ ಪರಿಸರದ ಬಳ್ಳಾರಿ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ. ೫ ನೆಯ ವಿಕ್ರಮಾದಿತ್ಯನು (ಕ್ರಿ.ಶ.೧೦೦೮-೧೫) ನೊಳಂಬವಾಡಿ-೩೨೦೦೦, ಕೋಗಳಿ-೫೦೦, ಬಳ್ಳಕುಂದೆ-೩೦೦ (ಇದು ಇಂದಿನ ಹೊಸಪೇಟೆ ಪ್ರದೇಶವನ್ನು ಒಳಗೊಂಡಿತ್ತು.) ಭಾಗಗಳನ್ನು ಪಾಲಿಸುತ್ತಿದ್ದನು.[೩೦] ನೊಳಂಬರ ತ್ರೈಲೋಕ್ಯಮಲ್ಲನನ್ನು ನೊಳಂಬವಾಡಿಯ ರಾಜ್ಯಪಾಲನನ್ನಾಗಿ ಕ್ರಿ.ಶ. ೧೦೪೪ ರಲ್ಲಿ ನೇಮಿಸಿದನೆಂದು ಶಾಸನಗಳು ತಿಳಿಸುತ್ತವೆ.[೩೧] ಇದೇ ವರ್ಷ ಚೋಳರ ರಾಜಾಧಿರಾಜ ಮತ್ತು ಅವನ ಸಹೋದರ ಇಮ್ಮಡಿ ರಾಜೇಂದ್ರ ಕೂಡಿ ತುಂಗಭದ್ರಾ ನದಿಯನ್ನು ದಾಟಿ ಕೊಪ್ಪಂ (ಕೊಪ್ಪಳ) ಎಂಬಲ್ಲಿ ಒಂದನೆಯ ಸೋಮೇಶ್ವರನ ಮೇಲೆ ಯುದ್ಧ ಮಾಡಿದರು. ಈ ಯುದ್ಧದಲ್ಲಿ ರಾಜಾದಿರಾಜನು ಕೊಲ್ಲಲ್ಪಟ್ಟು ಚೋಳರು ಪಲಾಯನ ಮಾಡಿದರು. ಒಂದನೆಯ ಸೋಮೇಶ್ವರ ಗೆಲುವು ಸಾಧಿಸಿದನು. ಕೊಪ್ಪಂ ಕದನದ ನಂತರ ರಾಜೇಂದ್ರನು ಹಿಂದಿರುಗಿ ಬರುವಾಗ ಸಮೀಪದ ಕುಮ್ಮಟದುರ್ಗವನ್ನು ಆಕ್ರಮಿಸುತ್ತಾನೆ. ಹಿಂಬಾಲಿಸಿದ ಸೋಮೇಶ್ವರನು ಕುಮ್ಮಟದ ಕೋಟೆಯಿಂದ ರಾಜೇಂದ್ರನನ್ನು ಸೋಲಿಸಿ ಓಡಿಸುತ್ತಾನೆ.[೩೨] ಕ್ರಿ.ಶ. ೧೦೬೪ ರಲ್ಲಿ ಚಾಲುಕ್ಯ ಯುವರಾಜ ವಿಷ್ಣುವರ್ಧನ, ವಿಜಯಾದಿತ್ಯನು (೧ ನೆಯ ಸೋಮೇಶ್ವರನ ಮಗ) ನೊಳಂಬವಾಡಿಯನ್ನು ಕಂಪಿಲಿ ನೆಲೆಯಿಂದ ಆಳಿದನು. ಕ್ರಿ.ಶ. ೧೦೬೨ ರಲ್ಲಿ ಒಂದನೆಯ

ಸೋಮೇಶ್ವರನ ಮತ್ತೊಬ್ಬ ಮಗನಾದ ಜಯಸಿಂಹನು ಕೋಗಳಿ, ಜಲ್ಲಕುಂದ ಮತ್ತು ನೊಳಂಬವಾಡಿಗಳನ್ನು ನೋಡಿಕೊಳ್ಳುತ್ತಾನೆ. ದೊರೆ ನಾಲ್ಕನೆಯ ಸೋಮೇಶ್ವರ ಮತ್ತು ಇವನ ಸಹೋದರರು ಬಿಜ್ಜಳನಿಂದ ತಪ್ಪಿಸಿಕೊಂಡು ಬಂದು ಬಳ್ಳಾರಿ ಮತ್ತು ಚಿತ್ರದುರ್ಗ ಪ್ರದೇಶಗಳಲ್ಲಿ ನೆಲೆನಿಂತರು. ಈ ಪ್ರದೇಶಗಳಲ್ಲಿ ಇವರಿಗೆ ನಿಷ್ಠ ಸಾಮಂತರಾದ ಉಚ್ಚಂಗಿ ಪಾಂಡ್ಯರು, ನಿಡುಗಲ್ಲಿನ ಚೋಳರು ಮತ್ತು ಶಾಂತರರು ಇದ್ದರು. ಚಾಲುಕ್ಯ ಸಿಂಹಾಸನ ಕಳಚೂರಿ ಬಿಜ್ಜಳನ ವಶವಾಯಿತು. ಸುಮಾರು ೩೦ ವರ್ಷಗಳ ನಂತರ ಅಂದರೆ ಕ್ರಿ.ಶ. ೧೧೮೩ ರ ವೇಳೆಗೆ ಹೊಯ್ಸಳರು ಮತ್ತು ಸೇವುಣರು ಪ್ರಬಲರಾಗಿದ್ದು ಅಂತಿಮವಾಗಿ ಚಾಲುಕ್ಯ ರಾಜ್ಯ ಅವರಲ್ಲಿ ಹಂಚಿಹೋಯಿತು.[೩೩] ಈ ಪರಿಸರದ ಕೊಪ್ಪಳ ಜಿಲ್ಲೆಯಲ್ಲಿ ಇವರ ಆಳ್ವಿಕೆಯ ಮಾದಿನೂರು, ಕೊಪ್ಪಳ, ತಳಕ್ಕಲ್, ಕುಕನೂರು, ಹಿರೇಮನ್ನಾಪುರ, ಬಳಗೇರಿ, ಕಲ್ಲೂರು ಮುಂತಾದ ಸ್ಥಳಗಳಲ್ಲಿ ಶಾಸನಗಳು ದೊರಕಿವೆ. ಹುಲಗಿಯ ಕ್ರಿ.ಶ. ೧೦೮೮ ರ ಶಾಸನವು ಆರನೆಯ ವಿಕ್ರಮಾದಿತ್ಯನು ಕಲ್ಯಾಣದಿಂದ ಆಳುತ್ತಿದ್ದುದನ್ನು ಉಲ್ಲೇಖಿಸಿದೆ. ಕುಕನೂರಿನ ೧೦೪೦ ರ ಶಾಸನವು ತೈಲಪನಿಂದ ಇಮ್ಮಡಿ ಜಗದೇಕಮಲ್ಲನ ವರೆಗೆ ವಂಶಾವಳಿಯನ್ನು ನೀಡಿವೆ.[೩೪]

**ನೊಳಂಬರು** : ಕ್ರಿ.ಶ ೯೭೩ ರಲ್ಲಿ ರಾಷ್ಟ್ರಕೂಟರ ಆಳ್ವಿಕೆಯನ್ನು ಕೊನೆಗಾಣಿಸಿದ ಕಲ್ಯಾಣ ಚಾಲುಕ್ಯರು ಅಧಿಕಾರಕ್ಕೆ ಬರಲು ನೊಳಂಬವಾಡಿಯ ಮೇಲೂ ಅವರ ಸಾರ್ವಭೌಮತ್ವ ಸ್ಥಾಪಿತವಾಯಿತು. ರಾಷ್ಟ್ರಕೂಟರ ಸಾಮಂತರಾಗಿದ್ದ ನೊಳಂಬ ಪಲ್ಲವರು ಚಾಲುಕ್ಯರ ಸಾರ್ವಭೌಮತ್ವವನ್ನು ಒಪ್ಪಿಕೊಂಡು ನೊಳಂಬವಾಡಿ-೩೨೦೦೦ ಪ್ರದೇಶವನ್ನು ನೂತನ ರಾಜಧಾನಿ ಕಂಪ್ಲಿಯಿಂದ ಆಳುತ್ತಾರೆ. ಕಂಪ್ಲಿ ಪ್ರದೇಶ ಒಳಗೊಂಡಿದ್ದ ನೊಳಂಬವಾಡಿ ರಾಷ್ಟ್ರಕೂಟರ ಕಾಲದಲ್ಲಿ ಸಣ್ಣ ವಿಭಾಗವಾಗಿದ್ದ ಇದು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ೩೨೦೦೦ ಗ್ರಾಮಗಳನ್ನು ಒಳಗೊಂಡು ದೊಡ್ಡ ವಿಭಾಗವಾಯಿತು. ಬಾದಾಮಿ ಚಾಲುಕ್ಯ ಹಾಗೂ ತಲಕಾಡಿನ ಗಂಗರ ಕಾಲದಲ್ಲಿ ನೊಳಂಬರು ಅವರ ಸಾಮಂತರಾಗಿ ನೊಳಂಬವಾಡಿಯನ್ನು ಆಳುತ್ತಿದ್ದರು. ಹೆಂಜೇರು (ಆಂಧ್ರ ಪ್ರದೇಶದ ಮಡಕಶಿರಾ ತಾಲೂಕಿನ ಈಗಿನ ಹೇಮಾವತಿ) ಅವರ ರಾಜಧಾನಿಯಾಗಿದ್ದಿತು. ೯ ನೆಯ ಶತಮಾನದ ಕೊನೆಯಲ್ಲಿದ್ದ ಮಹೇಂದ್ರ ನೊಳಂಬಾದಿ ರಾಜನು ಈ ಮನೆತನದ ಪ್ರಮುಖ ಅರಸನಾಗಿದ್ದನು. ಇವನ ಮಗ ನನ್ನಿಗ ಅಯ್ಯಪ್ಪದೇವ ಬಳಿಕ ಅವನ ಮಗ ಅಣ್ಣಿಗ ಕ್ರಮವಾಗಿ ಅಧಿಕಾರ ನಡೆಸುತ್ತಾರೆ. ನಂತರ ಅಧಿಕಾರಕ್ಕೆ ಬಂದ ವೀರನೊಳಂಬನ ಕ್ರಿ.ಶ. ೯೮೧ ರ ಕಾಲದ ಶಾಸನವೊಂದು ಕಂಚುಗಾರ ಬೆಳಗಲ್ಲಿನಲ್ಲಿದ್ದು ಅವನ ಮತ್ತು ಹೆಂಡತಿ ರೇವಲದೇವಿಯಕ್ಕಳ ಬಗ್ಗೆ ಉಲ್ಲೇಖಿಸುತ್ತದೆ.[೩೫] ಇವನ ನಂತರ ತ್ರೈಲೋಕ್ಯಮಲ್ಲ ಇರಿವನೊಳಂಬ ನರಸಿಂಹದೇವನು ಅಧಿಕಾರಕ್ಕೆ ಬರಲಾಗಿ ಇವನಿಗೆ ಘಟೆಯಂಕಾರ, ಚಿತ್ರವೆಡುಂಗಗಳೆಂಬ ಹೆಸರುಗಳಿದ್ದವು.[೩೬] ಇವನ ರಾಣಿ ಮಬ್ಬರಸಿಯು ಪಂಪಾಕ್ಷೇತ್ರದ (ಹಂಪಿ) ಮಹಾಕಾಲ ದೇವರಿಗೆ ಕೆಲವು ತೆರಿಗೆಗಳನ್ನು ಬಿಟ್ಟಳೆಂದು ಕ್ರಿ.ಶ. ೧೦೧೪ ರ ಗೋನಾಳ ಶಾಸನದಿಂದ ತಿಳಿಯುತ್ತದೆ.[೩೭] ನರಸಿಂಘದೇವನ ತರುವಾಯ ಜಗದೇಕಮಲ್ಲನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯನು ಅಧಿಕಾರಕ್ಕೆ ಬಂದು ಇವನು ನೊಳಂಬವಾಡಿ-೩೨೦೦೦ ಜೊತೆಗೆ ಕದಂಬಗಳಿಗೆ-೧೦೦೦, ಕೋಗಳಿ-೫೦೦, ಕುದಿಯಪರವಿ-೭೦, ಕರವಿಡಿ-೩೦ ರ ಪ್ರದೇಶಗಳನ್ನು ಕೂಡಾ

ಆಳಿದನು.[೩೮] ಕ್ರಿ.ಶ.೧೦೧೮ ರ ಶಾಸನವು ಇವನು ಚಾಲುಕ್ಯ ಜಗದೇಕಮಲ್ಲ ಎರಡನೇ ಜಯಸಿಂಹದೇವ ಸಾಮಂತನಾಗಿ ತುಂಗಭದ್ರೆ ತೀರದ ಕಂಪಿಲಿ ಬೀಡಿನಿಂದ ಆಳಿದನೆಂದು ತಿಳಿಸುತ್ತದೆ.[೩೯] ಇದೇ ವಿಷಯವನ್ನು ಮತ್ತು ಇವನು ಪಂಪಾಕ್ಷೇತ್ರಕ್ಕೆ ಭೇಟಿ ನೀಡಿದ ಸಂಗತಿಗಳನ್ನು ಬಾಗಳಿ[೪೦] ಮತ್ತು ಹಿರೇಮ್ಯಾಗಳಗೇರಿ[೪೧]ಗಳ ನಾಲ್ಕು ಶಾಸನಗಳು ಉಲ್ಲೇಖಿಸುತ್ತವೆ. ಇವನ ನಂತರ ಕಂಪಿಲಿಯಲ್ಲಿ ನೊಳಂಬರು ತಮ್ಮ ಅಸ್ತಿತ್ವ ಕಳೆದುಕೊಂಡಿರಬೇಕು.

**ಪಾಂಡ್ಯರು** : ಪಾಂಡ್ಯರು ಉಚ್ಚಂಗಿಯ ಪಾಂಡ್ಯರೆಂದೇ ಪ್ರಸಿದ್ಧರಾಗಿದ್ದಾರೆ. ಇವರು ಚಾಲುಕ್ಯರ ಸಾಮಂತರಾಗಿ ನೊಳಂಬವಾಡಿಯನ್ನು ಆಳುತ್ತಿದ್ದರು. ಈ ಕಾಲಕ್ಕೆ ಈ ಪರಿಸರದ ಸಂಡೂರಿನ ಕುಮಾರಸ್ವಾಮಿ ದೇವಾಲಯ ತುಂಬ ಪ್ರಸಿದ್ಧಿಯನ್ನು ಪಡೆದಿತ್ತು. ಈ ಭಾಗದ ಹೊಸಪೇಟೆ ಪ್ರದೇಶ ದೊರವಾಡಿ ನಾಡಿನ ಭಾಗವಾಗಿತ್ತು. ಕ್ರಿ.ಶ. ೧೧೪೮ ಓರುವಾಯಿ ಶಾಸನವು ದೊರವಾಡಿಯನ್ನು ಕುರಿತು ಉಲ್ಲೇಖಿಸುತ್ತದೆ.[೪೨] ಇವರಲ್ಲಿ ವೀರಪಾಂಡ್ಯನು ಪ್ರಮುಖನಾಗಿದ್ದು ತನ್ನ ಒಡೆಯನ (ಚಾಲುಕ್ಯ ದೊರೆ) ಪರವಾಗಿ ಅನೇಯಕ ಯುದ್ಧಗಳಲ್ಲಿ ಭಾಗವಹಿಸಿದ್ದನು. ಹೊಯ್ಸಳರ ವಿಷ್ಣುವರ್ಧನನು ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿ ಉಚ್ಚಂಗಿ ಕೋಟೆಯನ್ನು ವಶಪಡಿಸಿಕೊಂಡನೆಂದು ಕ್ರಿ.ಶ. ೧೧೩೭ ಶಾಸನವೊಂದು ತಿಳಿಸುತ್ತದೆ.[೪೩] ಆದರೆ ಈ ಪ್ರದೇಶದ ಮೇಲೆ ಶಾಶ್ವತವಾಗಿ ಹಿಡಿತ ಹೊಂದಲು ಸಾಧ್ಯವಾಗಲಿಲ್ಲ. ಈ ಮುನ್ನ ವಿಷ್ಣುವರ್ಧನನು ಈ ಪರಿಸರದ ಕುಮ್ಮಟದುರ್ಗವನ್ನು ವಶಪಡಿಸಿಕೊಂಡಿದ್ದನು. ಆದರೆ ಚಾಲುಕ್ಯ ಸೈನ್ಯದ ಪ್ರತಿರೋಧದಿಂದಾಗಿ ಈ ಪ್ರಯತ್ನಗಳು ನಿರರ್ಥಕವಾದವು. ಉಚ್ಚಂಗಿ ಪಾಂಡ್ಯರು ಮುಂದೆ ಕಲ್ಯಾಣದಲ್ಲಿ ಅಧಿಕಾರಕ್ಕೆ ಬಂದ ಕಳಚೂರಿ ಅರಸರ ಸಾಮಂತರಾಗಿ ನೊಳಂಬವಾಡಿಯನ್ನು ಆಳುತ್ತಾರೆ.[೪೪]

**ಕಳಚೂರಿಗಳು** : ಕಲ್ಯಾಣ ಚಾಲುಕ್ಯರ ಮೂರನೆಯ ತೈಲನು ಕ್ರಿ.ಶ. ೧೧೬೨ ರಲ್ಲಿ ಮರಣಹೊಂದಿದ ಬಳಿಕ ಬಿಜ್ಜಳನು ಚಾಲುಕ್ಯ ಸಿಂಹಾಸನಕ್ಕೆ ಅಧಿಪತಿಯಾದನು. ಈ ಪ್ರದೇಶದ ಉಚ್ಚಂಗಿ ಪಾಂಡ್ಯರ ವಿಜಯಪಾಂಡ್ಯನು ಇವನ ಪರಮಾಧಿಕಾರ ಒಪ್ಪಲು ನಿರಾಕರಿಸುತ್ತಾನೆ. ಆಗ ಬಿಜ್ಜಳನು ವಿಜಯಪಾಂಡ್ಯನನ್ನು ಮತ್ತು ಸಿಂಧನಾಡಿ ಬಮ್ಮಿದೇವರಸನನ್ನು ಯುದ್ಧದಲ್ಲಿ ಸೋಲಿಸಿ ತನ್ನ ಸಾಮಂತರನ್ನಾಗಿ ಮಾಡಿಕೊಳ್ಳುತ್ತಾನೆ. ಬಿಜ್ಜಳನ ಶಾಸನವೊಂದು ಈ ಪ್ರದೇಶದ ಹೊಸಪೇಟೆಯಲ್ಲಿ ದೊರೆತಿದೆ.[೪೫] ಈ ವಂಶದ ಸೋವಿದೇವ ಮತ್ತು ಇತರರು ಕ್ರಿ.ಶ. ೧೧೮೩ ರ ವರೆಗೆ ರಾಜ್ಯವಾಳಿದರು. ಪುನಃ ಕ್ರಿ.ಶ. ೧೧೮೩ ರ ವೇಳೆಗೆ ಕಲ್ಯಾಣ ಚಾಲುಕ್ಯರ ೪ ನೆಯ ಸೋಮೇಶ್ವರನು ಕಳೆದುಹೋಗಿದ್ದ ರಾಜ್ಯವನ್ನು ಮತ್ತೆ ಗಳಿಸಿಕೊಂಡು ಚಾಲುಕ್ಯರ ಆಳ್ವಿಕೆಯನ್ನು ಆರಂಭಿಸುತ್ತಾನೆ.[೪೬] ಬಳ್ಳಾರಿ, ಅನಂತಪುರ ಮತ್ತು ಚಿತ್ರದುರ್ಗದ ಶಾಸನಗಳು ಈ ಪ್ರದೇಶಗಳನ್ನು ೪ನೆಯ. ಸೋಮೇಶ್ವರನು ಕಲ್ಯಾಣದ ಸಿಂಹಾಸನದಲ್ಲಿದ್ದನೆಂದು ತೋರಿಸುತ್ತವೆ. ಇವನ ಸಾಮಂತನಾಗಿ ಸಿಂಧ ರಾಜಮಲ್ಲನು ಬಳ್ಳಕುಂದೆಯನ್ನು ಕುರುಗೋಡು ನೆಲೆಯಿಂದ ಆಳುತ್ತಿದ್ದನು. ಹಂಪಿಯ ಕ್ರಿ.ಶ. ೧೧೯೯ ಶಾಸನವು ಕುರಗೋಡಿನ ಇಮ್ಮಡಿ ರಾಜಮಲ್ಲನ ಮಗನಾದ ವೀರಕಲಿದೇವರಸನನ್ನು ಮತ್ತು ವಿರೂಪಾಕ್ಷತೀರ್ಥ ರಕ್ಷಣೆಗಾಗಿ ಮತಂಗ ಪರ್ವತವನ್ನು ಆಳುತ್ತಿದ್ದ ಸಾಮಂತನಾದ ಮಾದೆಯನಾಯಕನನ್ನು ಉಲ್ಲೇಖಿಸುತ್ತದೆ.[೪೭] ಮುಂದೆ ಹೊಯ್ಸಳರು ಮತ್ತು ಸೇವುಣರು ಚಾಲುಕ್ಯರ ರಾಜ್ಯಕ್ಕಾಗಿ ಅನೇಯಕ ಯುದ್ಧಗಳನ್ನು ಮಾಡಿದರು.

ಅಂತೆಯೇ ಕಳಚೂರಿಗಳ ಶಾಸನಗಳು ಈ ಪ್ರದೇಶದ ಕೊಪ್ಪಳ ಜಿಲ್ಲೆಯ ಕುಕನೂರು, ಹಲಗೇರಿ, ಕವಲೂರು, ಪುರ, ಇಟಗಿ, ಅಳವಂಡಿ ಮುಂತಾದ ಗ್ರಾಮಗಳಲ್ಲಿ ದೊರೆತಿವೆ.[೨೮]

**ಹೊಯ್ಸಳರು :** ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದ ಹೊಯ್ಸಳರು ಕ್ರಿ.ಶ. ೧೦೪೭ ರಲ್ಲೇ ಈ ಪ್ರದೇಶದ ಕುಮ್ಮಟವನ್ನು ತಮ್ಮ ಭದ್ರನೆಲೆಯಾಗಿ ಮಾಡಿಕೊಂಡಿದ್ದರು. ಇವರಲ್ಲಿ ಪ್ರಮುಖನಾದ ವಿಷ್ಣುವರ್ಧನನು ಈ ಪ್ರದೇಶದ ಬಳ್ಳಾರಿ ನಗರವನ್ನು ಮತ್ತು ತುಂಗಭದ್ರೆಯನ್ನು ದಾಟಿ ಕುಮ್ಮಟದುರ್ಗವನ್ನು ಹಿಡಿದನು. ಹೊಯ್ಸಳರ ಶಾಸನಗಳು ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬಂದಿರುವುದರಿಂದ ಈ ಪ್ರದೇಶಗಳು ಕೆಲಕಾಲ ಅವರ ವಶದಲ್ಲಿದ್ದವೆಂದು ಹೇಳಬಹುದು. ಕೋಗಳಿಯ ಕ್ರಿ.ಶ. ೧೨೭೬ ರ ಶಾಸನವೊಂದರಿಂದ ಈ ಪ್ರದೇಶವು ಹೊಯ್ಸಳರ ವಶದಲ್ಲಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೨೯೧ ರಲ್ಲಿ ಪಟ್ಟಕ್ಕೆ ಬಂದ ಮೂರನೆಯ ಬಲ್ಲಾಳನು ಈ ಪ್ರದೇಶಕ್ಕೆ ಸಂಬಂಧಿಸಿದಂತೆ ಕುಮ್ಮಟದ ಕಂಪಿಲದೇವನೊಡನೆ ಸೆಣೆಸಬೇಕಾಯಿತು. ೧೩೨೦ ರ ಸುಮಾರಿಗೆ ಬಲ್ಲಾಳನು ಕಂಪಿಲದೇವನನ್ನು ಸೋಲಿಸಿ ದೊರವಾಡಿ ಮತ್ತು ಕಂಪಿಲಿಗಳನ್ನು ಕೈವಶ ಮಾಡಿಕೊಂಡನೆಂದು ಅಭಿಪ್ರಾಯಪಡಲಾಗಿದೆ.[೨೯] ೧೩೨೭ ರಲ್ಲಿ ಕುಮ್ಮಟ ತನ್ನ ಅಸ್ತಿತ್ವ ಕಳೆದುಕೊಂಡ ಮೇಲೆ ಬಲ್ಲಾಳನು ಈ ಪ್ರದೇಶದಲ್ಲಿ ಹೆಚ್ಚಿನ ಆಸಕ್ತಿ ವಹಿಸುತ್ತಾನೆ. ಉತ್ತರದ ಕಡೆಯಿಂದ ಉಂಟಾಗುತ್ತಿದ್ದ ಮುಸ್ಲಿಮರ ದಾಳಿಗಳನ್ನು ಎದುರಿಸಲು ಸಂಗಮ ಸಹೋದರರು ಸಮರ್ಥರೆಂದು ತಿಳಿದು ಪೂರ್ಣ ಸ್ವಾತಂತ್ರ್ಯ ನೀಡಿ ಪ್ರೋತ್ಸಾಹಿಸುತ್ತಾನೆ.[೩೦] ಹಂಪಿಯಿಂದ ರಾಮೇಶ್ವರದ ವರೆಗೆ ರಾಜ್ಯಪಾಲನೆ ಮಾಡಲು ೭೦ ವರ್ಷದ ಬಲ್ಲಾಳನಿಗೆ ಅಸಾಧ್ಯವಾಗಿತ್ತು. ಮಗನಾದ ನಾಲ್ಕನೆಯ ಬಲ್ಲಾಳ (ವಿರೂಪಾಕ್ಷ ಬಲ್ಲಾಳ) ಅಸಮರ್ಥನಾಗಿದ್ದನು.[೩೧] ಈ ಹಿನ್ನೆಲೆಯಲ್ಲಿ ರಾಜ್ಯದ ಉತ್ತರ ಭಾಗಗಳ ರಕ್ಷಣೆಗಾಗಿ ಹಂಪಿಯಲ್ಲಿ ಹೊಸ ಪಟ್ಟಣವನ್ನು ನಿರ್ಮಿಸಿ ಇಲ್ಲಿ ಆಗಾಗ್ಗೆ ತಂಗುತ್ತಿದ್ದನು. ಹೊಸ ಪಟ್ಟಣವೆಂಬುದು ವಿಜಯನಗರದ ಮೊದಲಿನ ಹೆಸರಾಗಿತ್ತು.[೩೨] ಕ್ರಿ.ಶ. ೧೩೩೬ ರಿಂದ ಮಹಾಮಂಡಲೇಶ್ವರನಾಗಿ ಹರಿಹರನು ಹಂಪಿಯ ಹೊಸ ಪಟ್ಟಣದಿಂದ ಹೊಯ್ಸಳ ರಾಜ್ಯದ ಉತ್ತರ ಭಾಗಗಳನ್ನು ಆಳಿದನು. ೧೩೩೯ ರಲ್ಲಿ ಮೂರನೆಯ ಬಲ್ಲಾಳನು ಹಂಪಿಯಲ್ಲಿ ತಂಗಿದ್ದನೆಂದು ಶಾಸನವೊಂದು ತಿಳಿಸುತ್ತದೆ. ೧೩೪೨ ರಲ್ಲಿ ಮೂರನೆಯ ಬಲ್ಲಾಳ ಮರಣಹೊಂದಲಾಗಿ ಮಗ ನಾಲ್ಕನೆಯ ಬಲ್ಲಾಳನು ೧೩೪೩ ರಲ್ಲಿ ಹಂಪಿಯ ಹೊಸ ಪಟ್ಟಣದಲ್ಲಿ ಪಟ್ಟಾಭಿಷಿಕ್ತನಾದನು. ಆದರೆ ಇವನು ೧೩೪೬ ರಲ್ಲಿ ಮರಣಹೊಂದಲಾಗಿ ಇಲ್ಲಿಗೆ ಹೊಯ್ಸಳ ಆಳ್ವಿಕೆಯು ಈ ಪ್ರದೇಶ ಸೇರಿದಂತೆ ಕೊನೆಯಾಗುತ್ತದೆ.

**ಕುಮ್ಮಟದ ನಾಯಕರು :** ಹಂಪಿ ಪರಿಸರದಲ್ಲೇ ಕುಮ್ಮಟ ರಾಜ್ಯವೂ ಅಸ್ತಿತ್ವದಲ್ಲಿತ್ತು. ಇಲ್ಲಿಯ ಹೊಸಮಲೆದುರ್ಗ ಮತ್ತು ಕುಮ್ಮಟದುರ್ಗಗಳು ಅದರ ರಾಜಧಾನಿಗಳಾಗಿದ್ದವು. ಹಂಪಿ ಪರಿಸರದ ಕುಮ್ಮಟದುರ್ಗವು ಕರ್ನಾಟಕದ ಪ್ರಾಚೀನ ಕೋಟೆಗಳಲ್ಲಿ ಒಂದಾಗಿದ್ದು, ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಈ ಪ್ರದೇಶದ ತುಂಗಭದ್ರೆಯ ಎಡತೀರದ ಕೊಪ್ಪಳ ತಾಲೂಕಿನಲ್ಲಿರುವ ಇದು ಪ್ರಾಕೃತಿಕವಾಗಿ ರಕ್ಷಣೆ ಪಡೆದಿರುವ ಗಿರಿದುರ್ಗವಾಗಿದೆ. ಈ ಮಹತ್ವದ ಕುಮ್ಮಟದುರ್ಗ ಮುಮ್ಮಡಿ ಸಿಂಗೇಯನಾಯಕ ಮತ್ತು ಅವನ ಮಗ ಕಂಪಿಲದೇವನಿಗೆ ರಾಜಧಾನಿಯಾಗಿ ಅವರ ರಾಜಕೀಯ ಸಾಧನೆಗಳಲ್ಲಿ ಮಹತ್ವದ ಪಾತ್ರ ವಹಿಸಿದೆ.[೩೩]

೧೪ ನೆಯ ಶತಮಾನದ ಮೊದಲ ಭಾಗದಲ್ಲಿ ಇಡೀ ದಕ್ಷಿಣ ಭಾಗವು ಮುಸ್ಲಿಂ ದಾಳಿಗೆ ತುತ್ತಾಗಿ ದೆಹಲಿ ಸುಲ್ತಾನನ ವಶವಾಯಿತು. ಆದರೆ ಕಂಪಿಲರಾಯ ಮಾತ್ರ ಬಹಳ ವರ್ಷಗಳ ವರೆಗೆ ಈ ದಾಳಿಗಳನ್ನು ಎದುರಿಸಿ ಸ್ವತಂತ್ರವಾಗಿ ಉಳಿದನು.[೫೪] ಕ್ರಿ.ಶ. ೧೩೧೩-೧೫ ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕ ಮಲ್ಲಿಕಾಫರನ ದಾಳಿಯನ್ನು ಎದುರಿಸಿದನು. ಅದೇ ರೀತಿ ಮೊಹಮ್ಮದ್ ಬಿನ್ ತುಘಲಕ್‌ನ ಕಾಲದಲ್ಲಿಯೂ ಎರಡು ಸಲ ಮುಸ್ಲಿಂ ಸೈನ್ಯವನ್ನು ಎದುರಿಸಿ ಸೋಲಿಸಿದನು. ಕೊನೆಗೆ ಕ್ರಿ.ಶ. ೧೩೨೭ ರಲ್ಲಿ ತುಘಲಕ್‌ನ ದೊಡ್ಡ ಸೈನ್ಯ ತಿಂಗಳುಗಟ್ಟಲೆ ಕೋಟೆಯನ್ನು ಸುತ್ತುವರೆದು ನಿಂತಾಗ ಕೋಟೆಯೊಳಗಿರುವ ಆಹಾರ ಸಾಮಗ್ರಿ ಮುಗಿದಾಗ ವೈರಿಗೆ ಶರಣಾಗದೇ ಕಂಪಿಲರಾಯ ಮತ್ತು ಅವನ ವೀರಪುತ್ರ ಕುಮಾರರಾಮರು ಕೋಟೆ ಬಾಗಿಲನ್ನು ತೆರೆದು ವೈರಿಪಡೆಯ ಮೇಲೆ ಬಿದ್ದು ವೀರಸ್ವರ್ಗವನ್ನು ಪಡೆದ ವಿಷಯ ದಕ್ಷಿಣ ಭಾರತದಲ್ಲೇ ಮರೆಯಲಾಗದ ಅಧ್ಯಾಯವಾಗಿದೆ. ಕುಮಾರರಾಮನಂತೂ ತನ್ನ ಶೌರ್ಯ, ಸಾಹಸ ಮತ್ತು ಪರನಾರಿ ಸೋದರತ್ವ ಗುಣಗಳಿಂದಾಗಿ ಹಂಪಿ ಪರಿಸರದಲ್ಲಿ ಜನಪ್ರಿಯನಾಗಿದ್ದಾನೆ.

ವಿಜಯನಗರ : ಭಾರತೀಯ ಚರಿತ್ರೆಯ ಪುಟಗಳಲ್ಲಿ ಸುವರ್ಣಯುಗವಾಗಿ ಮೆರೆದಿದ್ದ ವಿಜಯನಗರ ಸಾಮ್ರಾಜ್ಯವು ತುಂಗಭದ್ರಾ ತೀರದ ಹಂಪಿ ಕ್ಷೇತ್ರದಲ್ಲಿ ಕ್ರಿ.ಶ. ೧೩೩೬ ರಲ್ಲಿ ಹರಿಹರ - ಬುಕ್ಕರಿಂದ ಗುರು ವಿದ್ಯಾರಣ್ಯರ ಮಾರ್ಗದರ್ಶನದಲ್ಲಿ ಅಸ್ತಿತ್ವಕ್ಕೆ ಬಂದಿತು. ವೈಭವದ ಪ್ರತೀಕವಾಗಿ ರಾಜ್ಯಭಾರ ನಡೆಸಿದ ವಿಜಯನಗರ ಸಾಮ್ರಾಜ್ಯದಲ್ಲಿ ಕ್ರಮವಾಗಿ ಸಂಗಮ ವಂಶ (ಕ್ರಿ.ಶ. ೧೩೩೬-೧೪೮೫), ಸಾಳುವ ವಂಶ (ಕ್ರಿ.ಶ. ೧೪೮೫-೧೫೦೫), ತುಳುವ ವಂಶ (ಕ್ರಿ.ಶ. ೧೫೦೫-೧೫೬೫). ಅರವೀಡು ವಂಶ (ಕ್ರಿ.ಶ. ೧೫೬೫-೧೬೬೪) ಈ ಸಂತತಿಗಳು ಆಳ್ವಿಕೆ ನಡೆಸಿದವು. ಸಂಗಮವಂಶದಲ್ಲಿ ಎರಡನೆಯದೇವರಾಯ ಪ್ರಸಿದ್ಧ ದೊರೆಯಾಗಿದ್ದು, ಪ್ರೌಢ ದೇವರಾಯ, ಪ್ರತಾಪದೇವರಾಯ, ಅಭಿನವವೀರದೇವರಾಯ ಎಂಬ ಹೆಸರುಗಳನ್ನು ಹೊಂದಿದ್ದನು. ಗಜಬೇಂಟೆಕಾರ ಎಂಬುದು ಇವನ ವಿಶಿಷ್ಟ ಬಿರುದಾಗಿತ್ತು. ಧರ್ಮ ಸಮನ್ವಯವನ್ನು ಸಾಧಿಸಿದ ಇವನು ತನ್ನ ಆಸ್ಥಾನದಲ್ಲಿ ಅನೇಯಕ ಕವಿ-ವಿದ್ವಾಂಸರಿಗೆ ಪೋಷಕನಾಗಿದ್ದನು.

ವಿಜಯನಗರ ಸಾಮ್ರಾಟರಲ್ಲಿ ಅತ್ಯಂತ ಶ್ರೇಷ್ಠನಾದ ಕೃಷ್ಣದೇವರಾಯನು ತನ್ನ ಆಳ್ವಿಕೆಯಲ್ಲಿ ಸಾಮ್ರಾಜ್ಯದ ಕೀರ್ತಿಯನ್ನು ಉತ್ತುಂಗಕ್ಕೇರಿಸಿದನು. ಪ್ರಬಲ ದೊರೆಯಾದ ಕೃಷ್ಣದೇವರಾಯನು ತನ್ನ ಸೈನ್ಯಬಲದಿಂದ ರಾಜ್ಯವನ್ನು ವಿಸ್ತರಿಸಿದನು. ಹಾಗೆಯೇ ಪೋರ್ಚುಗೀಸರೊಡನೆ ಉತ್ತಮ ಸ್ನೇಹ ಸಂಬಂಧವನ್ನು ಬೆಳೆಸಿಕೊಂಡನು. ಮುಖ್ಯವಾಗಿ ರಾಯಚೂರು ದೋ-ಅಬ್ ಪ್ರದೇಶಕ್ಕಾಗಿ ವಿಜಯನಗರ ಸಾಮ್ರಾಟರು ಮತ್ತು ಬಹಮನಿ ಸುಲ್ತಾನರು ನಿರಂತರ ಹೋರಾಟಕ್ಕಿಳಿದರು. ವಿಜಯನಗರ ಸಾಮ್ರಾಜ್ಯದ ಹೃದಯ ಭಾಗವಾಗಿ, ರಾಜಧಾನಿಯಾಗಿ ಮೆರೆದ ಹಂಪಿಯಲ್ಲಿ ವಿಜಯನಗರ ಸಾಮ್ರಾಟರು ಹಲವಾರು ಬಗೆಯ ದೇವಾಲಯಗಳನ್ನು ನಿರ್ಮಿಸುವ ಮೂಲಕ ಕರ್ನಾಟಕ ಸಂಸ್ಕೃತಿಗೆ ವಿಶಿಷ್ಟ ಕೊಡುಗೆ ಸಲ್ಲಿಸಿದ್ದಾರೆ. ಅಂತಿಮವಾಗಿ ದಕ್ಷಿಣದ ಬಿಜಾಪುರ, ಅಹಮದ್‌ನಗರ, ಗೋಲ್ಕೊಂಡ, ಬೀದರ್ ಈ ಷಾಹಿ ರಾಜ್ಯಗಳ ಮೈತ್ರಿಕೂಟ ೧೫೬೫ ರಲ್ಲಿ ತಾಳಿಕೋಟೆ / ರಕ್ಕಸಗಿ-ತಂಗಡಗಿ ಕದನದಲ್ಲಿ ವಿಜಯನಗರವನ್ನು ಪರಾಭವಗೊಳಿಸುವ ಮೂಲಕ ಕ್ರಮೇಣ ಅದರ ಪರ್ಯಾವಸಾನಕ್ಕೆ ಕಾರಣರಾದರು.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಭಾರತೀಯ ಚರಿತ್ರೆಯ ಪುಟಗಳಲ್ಲಿ ಚಿರಸ್ಮರಣೀಯವಾಗಿದ್ದು, ಭಾರತೀಯ ಇತಿಹಾಸದಲ್ಲೇ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕೊನೆಯ ಮಹಾನ್ ಸಾಮ್ರಾಜ್ಯ. ವಿಜಯನಗರ ಅರಸರ ಆಶ್ರಯ ಎಲ್ಲಾ ಧರ್ಮಗಳಿಗೂ ಏಕರೂಪವಾಗಿದ್ದು, ಧರ್ಮ ಸಹಿಷ್ಣುತೆ ಸಾಮ್ರಾಜ್ಯಾದ್ಯಂತ ಸ್ಥಾಪಿಸಲ್ಪಟ್ಟಿತ್ತು. ಬಹಮನಿ ಮತ್ತು ವಿಜಯನಗರದ ನಡುವೆ ರಾಜಕೀಯವಾಗಿ ವೈಷಮ್ಯಗಳಿದ್ದರೂ ಕೂಡ ಸಾಂಸ್ಕೃತಿಕವಾಗಿ ಹಿಂದೂ ಮುಸ್ಲಿಮರ ಧಾರ್ಮಿಕ, ತಾತ್ವಿಕ, ಸಾಹಿತ್ಯ, ಸಂಗೀತ, ಚಿತ್ರಕಲೆ, ಬಿದರಿ ಲೋಹಕಲೆ, ಗಾರೆ ಕಲೆ, ನೇಯ್ಗೆ, ವಾಸ್ತುಕಲೆ, ಮೊದಲಾದ ಕ್ಷೇತ್ರಗಳಲ್ಲಿ ಪರಸ್ಪರ ವಿಚಾರ ವಿನಿಮಯಗಳುಂಟಾದವು. ಅಂತೆಯೇ ಕನ್ನಡ ನಾಡಿನಲ್ಲಿ ವಿಶಿಷ್ಟ ವಾಸ್ತುಶೈಲಿಯಿಂದ ಅಪರೂಪದ ಭವ್ಯ ಸ್ಮಾರಕಗಳನ್ನು ನಿರ್ಮಿಸಿ ದ್ರಾವಿಡ ವಾಸ್ತುಶೈಲಿಯ ಜನಪ್ರಿಯತೆಕ್ಕೆ ಕಾರಣರಾದರು. ಹಾಗೆಯೇ ಕನ್ನಡ, ಸಂಸ್ಕೃತ ಭಾಷೆಗಳನ್ನೊಳಗೊಂಡಂತೆ ತೆಲುಗು, ತಮಿಳು ಇತರ ಭಾಷೆ ಕವಿ, ವಿದ್ವಾಂಸರಿಗೆ ಆಶ್ರಯ ನೀಡಿ ಸಾಹಿತ್ಯದ ಬೆಳವಣಿಗೆಗೆ ಕಾರಣರಾದರು. ಈ ಎಲ್ಲಾ ಅಂಶಗಳಿಗೆ ಪೂರಕವಾಗಿ ವಿಜಯನಗರ ದಕ್ಷಿಣ ಭಾರತದ ಚರಿತ್ರೆಯ ಅಧ್ಯಯನದಲ್ಲಿಯೇ ಸುವರ್ಣ ಯುಗವಾಗಿ ಗುರುತಿಸಿಕೊಂಡಿದೆ.[೫೬]

ಅಡಿಟಿಪ್ಪಣಿ :


೧. ಸಿದ್ದಲಿಂಗೇಶ್ವರ ಸ್ವಾಮಿ, ೧೯೮೩; ಶ್ರೀ ಪಂಪಾಮಹಾತ್ಮೆ ವೃಷಭಾಶ್ರಮ, ಹೊಳಗುಂದಿ.

೨. ಫ್ಲೀಟ್; ಕೆನರಿಸ್ ಡೈನಸ್ಟೀಸ್ ಇನ್ ಬಾಂಬೆ ಗ್ಯಾಸೆಟಿಯರ್.

೩. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್; IX - I, ನಂ. ೭೯.

೪. ಅದೇ; ನಂ. ೮೦.

೫. ಅದೇ; IV ನಂ. ೨೬೦.

೬. ವಿಜಯನಗರ ಸಿಟಿ ಆಂಡ್ ಎಂಪೈರ್; ಸಂ.೧, ಪು. ೧೧೬.

೭. ವಿಜಯನಗರ ಸಿಟಿ ಆಂಡ್ ಎಂಪೈರ್; ಪು. ೧೦೨.

೮. ೧೯೮೩; ಪಂಪಾಮಹಾತ್ಮೆ, ಹೊಳಗುಂದಿ.

೯. ವಸಂತಲಕ್ಷ್ಮಿ, ೧೯೯೬; "ಹಂಪಿಯ ಪಂಪಾಂಬಿಕೆ", ಹಂಪಿ ಪರಂಪರೆ, ಹೊಸಪೇಟೆ.

೧೦. ಸುಂದರ .ಅ., ೧೯೯೭; ಕಿಷ್ಕಿಂದ ಹನುಮಂತನ ತವರು?, ಹೊಸಪೇಟೆ.

೧೧. ಚಂದ್ರಶೇಖರ ವಿ. ದಾವಣಗೇರೆ, ೨೦೦೩; "ಹಂಪಿ ಶ್ರೀ ವಿರೂಪಾಕ್ಷ ದೇವಾಲಯ ಪೌರಾಣಿಕ ಮತ್ತು ಐತಿಹಾಸಿಕ ಹಿನ್ನೆಲೆ", ವಿಜಯನಗರ ಅಧ್ಯಯನ.

೧೨. ವಾಸುದೇವ ಬಡಿಗೇರ, ೨೦೦೬; "ಪ್ರಾಚೀನ ಹಂಪಿ", ಹಂಪಿ ಅಂದು-ಇಂದು, ಕ.ವಿ.ವಿ., ಹಂಪಿ.

೧೩. ಜೆನಕಲ್ ರಾಮರಾವ್, ಪುರಾಣ ನಾಮ ಚೂಡಾಮಣಿ (೩ನೆಯ ಮುದ್ರಣ) ಪು.೪೪೪.

೧೪. ರಂಗನಾಥ ಶರ್ಮ .ಎನ್. (ಸಂ) ಕಿಷ್ಕಿಂಧ ಕಾಂಡ, ಪು. ೬೦-೬೮.

೧೫. K.I. Vol-I, 25, 1186; ಸಿರಸಂಗಿ (ಸವದತ್ತಿ ತಾಲೂಕು ಬೆಳಗಾವಿ ಜಿಲ್ಲೆ.

೧೬. Sundara .A; 1988, New light trends in Anegundi region during Vijayanagar period early Vijayanagar, Bangalore. P. 101.

೧೭. ಮಹಾಬಲೇಶ್ವರರಾವ್; ೧೯೯೦, ಇತಿಹಾಸ ಕಣ್ಣಲ್ಲಿ ರಾಮಾಯಣ, ಬೆಂಗಳೂರು.

೧೮. ಸುಂದರ .ಅ., ೧೯೯೭; ಪೂರ್ವೋಕ್ತ.

೧೯. ಎಪಿಗ್ರಫಿಯ ಕರ್ನಾಟಿಕ VII, ಶಿಕಾರಿಪುರ ನಂ. ೨೨೫.

೨೦. Hultzsch E, 1925, Corpus Inscriptionum Indicarum, Volume I, Inscriptions of Ashoka, Govt. of India, Oxford.

೨೧. Turner R.L., 1952, The Gavimath and Palkigundu Inscriptions of Ashoka, The Dept. of Archaeology, The Govt. of Hyderabad, Hyderabad.

೨೨. Annual Reports of an Indian Epigraphy, 1975-76, No. 94, P. 20.

೨೩. ೧೯೮೯; ಇತಿಹಾಸದರ್ಶನ, ಸಂ.೪, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು. ಪು.೨೯.

೨೪. ಮಹಾದೇವ ಸಿ. ಮತ್ತು ಇತರರು, ೨೦೦೨; ಹೊಸಪೇಟೆ ತಾಲೂಕು ದರ್ಶನ, ಕ.ವಿ.ವಿ., ಹಂಪಿ.
೨೫. ಫ್ಲೀಟ್; ಕೆನರೀಸ್ ಡೈನಸ್ಟೀಸ್ ಇನ್ ಬಾಂಬೆ ಗೆಸೆಟಿಯರ್-I, ಪುಟ ೩೬೯.
೨೬. ದೇವರಕೊಂಡಾರೆಡ್ಡಿ, ಕ.ವಿ.ವಿ. ಶಾಸನಸಂಪುಟ ೨, ಕೊಪ್ಪಳ ಜಿಲ್ಲೆ.
೨೭. ದೇವರಕೊಂಡಾರೆಡ್ಡಿ, ಕ.ವಿ.ವಿ. ಶಾಸನಸಂಪುಟ ೧, ಬಳ್ಳಾರಿ ಜಿಲ್ಲೆ.
೨೮. ದೇಸಾಯಿ ಪಿ.ಬಿ. ಮತ್ತು ಇತರರು, ೧೯೭೦; ಎ ಹಿಸ್ಟರಿ ಆಫ್ ಕರ್ನಾಟಕ, ಕರ್ನಾಟಕ ವಿ.ವಿ., ಧಾರವಾಡ.
೨೯. ದೇವರ ಕೊಂಡಾರೆಡ್ಡಿ, ಕ.ವಿ.ವಿ. ಶಾಸನಸಂಪುಟ ೨, ಕೊಪ್ಪಳ ಜಿಲ್ಲೆ.
೩೦. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ I, ನಂ.೧೬೬.
೩೧. ದೇಸಾಯಿ ಪಿ.ಬಿ. ಮತ್ತು ಇತರರು, ೧೯೭೦; ಪೂರ್ವೋಕ್ತ, ಪುಟ ೧೬೯.
೩೨. ಅದೇ, ಪುಟ ೧೭೧.
೩೩. Annual Reports on Indian Epigraphy, 1975-76, No.95.
೩೪. ಮಹದೇವ.ಸಿ. ಇತರರು, ೨೦೦೨; ಪೂರ್ವೋಕ್ತ.
೩೫. SII IX No.74, ಕಂಚುಗಾರ ಬಳಗಲ್ಲು.
೩೬. AR No. 86, 1977-78, ಬಲ್ಲಕುಂದೆ.
೩೭. SII IX 1 No.79, ಗೋನಹಾಳ.
೩೮. AR No.102, 1977-78 & 87-1977-78.
೩೯. SII IX 1 No.80.
೪೦. ಅದೇ ಮತ್ತು ೮೧.
೪೧. SII IX No.113 & SII IX Pt.11 No.113.
೪೨. ದೇವರ ಕೊಂಡಾರೆಡ್ಡಿ, ಕ.ವಿ.ವಿ. ಶಾಸನಸಂಪುಟ ೨, ಕೊಪ್ಪಳ ಜಿಲ್ಲೆ.
೪೩. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ I, ನಂ.೩೫೩.
೪೪. ದೇಸಾಯಿ ಮತ್ತು ಇತರರು; ಪೂರ್ವೋಕ್ತ, ಪುಟ ೧೮೬.
೪೫. ಅದೇ; ಪೂರ್ವೋಕ್ತ.
೪೬. Annual Reports on Indian Epigraphy, 1980-81, No.122.
೪೭. ದೇಸಾಯಿ ಮತ್ತು ಇತರರು; ಪೂರ್ವೋಕ್ತ, ಪುಟ ೧೯೨.
೪೮. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್ VI, ನಂ.೨೬೦.
೪೯. ದೇವರ ಕೊಂಡಾರೆಡ್ಡಿ, ಕ.ವಿ.ವಿ. ಶಾಸನಸಂಪುಟ, ಕೊಪ್ಪಳ ಜಿಲ್ಲೆ.
೫೦. ವಸುಂಧರ ಫಿಲಿಯೋಜಾ, ೧೯೮೦; ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪುಟ ೪೬.

೫೧. ದೇಸಾಯಿ ಮತ್ತು ಇತರರು; ಪೂರ್ವೋಕ್ತ, ಪುಟ ೩೨೯.

೫೨. ಅದೇ.

೫೩. ಎಪಿಗ್ರಫಿಯ ಕರ್ನಾಟಿಕ XI, ಪುಟ ೨೪.

೫೪. ಮಹದೇವ.ಸಿ. ಮತ್ತು ಇತರರು; ಪೂರ್ವೋಕ್ತ, ಪುಟ ೨೩.

೫೫. ವರದರಾಜ್‌ರಾವ್.ಜಿ., ೧೯೬೩; ಕುಮ್ಮಟ ಕೇಸರಿ, ಉಷಾ ಸಾಹಿತ್ಯ ಮಾಲೆ, ಮೈಸೂರು.

೫೬. ಸೂರ್ಯನಾಥ .ಯು. ಕಾಮತ್, ೨೦೦೧; ಎ ಕನ್ಸೈಸ್ ಹಿಸ್ಟರಿ ಆಫ್ ಕರ್ನಾಟಕ, ಎಂ.ಸಿ.ಸಿ. ಪ್ರಕಾಶನ, ಬೆಂಗಳೂರು.

# ಅಧ್ಯಾಯ ೪

೪. ವಿರೂಪಾಕ್ಷನ ಆರಾಧನೆ

೪.೧ ಪ್ರಾಚೀನತೆ

೪.೨ ಆರಾಧನೆ

೪.೩ ದಾನ-ದತ್ತಿ

೪.೪ ಧಾರ್ಮಿಕ ಆಚರಣೆಗಳು

## ಅಧ್ಯಾಯ ೪

### ೪.೧ ಪ್ರಾಚೀನತೆ :

ವಿರೂಪಾಕ್ಷ ಎನ್ನುವುದು ಶಿವನ ಹೆಸರುಗಳಲ್ಲಿ ಒಂದು. ಸಾಮಾನ್ಯವಾಗಿ ಮೂರು ಕಣ್ಣುಗಳನ್ನು ಹೊಂದಿರುವುದರಿಂದ ಶಿವನನ್ನು 'ವಿರೂಪಾಕ್ಷ' ಎಂದು ಕರೆಯಲಾಗಿದೆ. ಭಾರತದಲ್ಲಿ ಶಿವಾರಾಧನೆಯ ಬೇರುಗಳನ್ನು ಹರಪ್ಪಾ ಸಂಸ್ಕೃತಿಯ ಕಾಲದಿಂದಲೇ ಗುರುತಿಸಲಾಗುತ್ತಿದೆ. ಮಹೆಂಜೊದಾರೋದಲ್ಲಿ ದೊರೆತಿರುವ ಗುಂಡಾಕೃತಿಯ ಶಿಲೆಗಳನ್ನು ಲಿಂಗಗಳೆಂದು, ಮುದ್ರೆಯೊಂದರ ಮೇಲೆ ಪ್ರಾಣಿಗಳ ನಡುವೆ ಕುಳಿತಿರುವ ವ್ಯಕ್ತಿಯನ್ನು ಯೋಗ ಸಮಾಧಿಯಲ್ಲಿರುವ ಪಶುಪತಿ ಶಿವನ ಆಕೃತಿಯೆಂದು ವಿದ್ವಾಂಸರು ಗುರುತಿಸಿದ್ದಾರೆ. ವೇದಗಳ ಕಾಲದಲ್ಲಿ ರುದ್ರನ ಸ್ಥಾನ ಅಷ್ಟು ಮಹತ್ವದ್ದಿಲ್ಲವಾದರೂ ಈತನ ದಂಡಿಸುವ ಮತ್ತು ರಕ್ಷಿಸುವ ಶಕ್ತಿಗಳ ವರ್ಣನೆಗಳಿವೆ. ಯಜುರ್ವೇದ ಶತರುದ್ರೀಯದಲ್ಲಿ ಈತನ ಪ್ರಾರ್ಥನೆಯೂ ಇದೆ. ಅಲ್ಲಿ ಈತನು ಶಂಕರನೂ, ನೀಲಕಂಠನೂ ಆಗಿದ್ದು ಪರ್ವತಗಳಲ್ಲಿಯೂ ಜನರು ವಾಸವಾಗಿಲ್ಲದಂತಹ ಸ್ಥಳಗಳಲ್ಲಿಯೂ ವಾಸಿಸುವವನು, ಬಹುದೊಡ್ಡ ಶಕ್ತಿಯುಳ್ಳವನು, ವಿಶ್ವದ ಎಲ್ಲ ವಸ್ತುಗಳಲ್ಲಿ ವಾಸಿಸುವವನು, ವಿಶ್ವದ ಎಲ್ಲ ಪ್ರಾಣಿಗಳ ಮೇಲೆ ಪ್ರಭುತ್ವವನ್ನು ಹೊಂದಿದವನು ಎಂದು ವರ್ಣಿಸಲಾಗಿದೆ.

ಶಿವನು ಉತ್ಪತ್ತಿಯ ಅಧಿದೇವತೆಯಾದುದರಿಂದ ಅರ್ಧನಾರೀಶ್ವರನೆನಿಸಿದ್ದಾನೆ. ಈತನ ವಾಸಸ್ಥಳ ಸರ್ವತ್ರವಿದ್ದರೂ ಕೈಲಾಸ ಮುಖ್ಯವಾದುದು. ಈತನು ಮುಕ್ಕಣ್ಣನು, ಬಾಲೆಂದುಧರನು, ಗಂಗಾಧರನು. ಈತನ ಕಂಠ ನೀಲವರ್ಣದ್ದಿದ್ದು ಅದರ ಸುತ್ತಲೂ ಸರ್ಪವೂ ರುಂಡಮಾಲೆಯೂ ಇರುವುವು. ಕೈಯಲ್ಲಿ ತ್ರಿಶೂಲ, ಡಮರುಗಳಿರುವುವು. ಪಾರ್ವತಿ ಅಥವಾ ಶಕ್ತಿ ಈತನ ಅರ್ಧಾಂಗಿ. ಗಣಪತಿಯೂ, ಸ್ಕಂದನೂ ಈತನ ಮಕ್ಕಳು. ನಂದಿ ಈತನ ವಾಹನ. ಶಿವನನ್ನು ಮಹಾದೇವ, ಹರ, ಭೈರವ, ಪಶುಪತಿ ಎಂತಲೂ ಅನೇಕ ರೂಪಗಳಿಂದ ಪೂಜಿಸುವರು.

ಶಿವನು ಸಚ್ಚಿದಾನಂದ, ನಿತ್ಯ ಪರಿಪೂರ್ಣ, ಸರ್ವಾಂತರ್ಯಾಮಿ, ನಿಷ್ಕಲ, ನಿರಂಜನ, ನಿರಾವರಣ, ಪರಬ್ರಹ್ಮ ಆದುದರಿಂದ ನಿರಾಕಾರ ರೂಪದಿಂದ ಪೂಜಿಸುವ ರೂಢಿ ಪ್ರಚಾರದಲ್ಲಿ ಬಂದಿತು. ಶೈವಾಗಮಿಗಳು ಶಿವನನ್ನು ನಿಷ್ಕಲವಾದ ಲಿಂಗರೂಪದಿಂದಲೇ ಪೂಜಿಸಬೇಕೆಂದೂ ಪೂಜೆಗೆ ಸಕಲ ರೂಪವಾದ ವಿಗ್ರಹ ಅಷ್ಟು ಯೋಗ್ಯವಾದುದಲ್ಲವೆಂದೂ ಹೇಳುವರು.

**ಅಗ್ನಿ-ರುದ್ರ-ವಿರೂಪಾಕ್ಷ**

ರುದ್ರ, ಶಿವನಿಗೆ 'ವಿರೂಪಾಕ್ಷ' ಎಂಬ ಹೆಸರು ವೇದಕಾಲದಿಂದಲೇ ಇದ್ದುದು ತಿಳಿಯುತ್ತದೆ. ಋಗ್ವೇದ ಸಂಹಿತೆಯಲ್ಲಿ ವಿವಿಧ ರೂಪಗಳನ್ನು ಹೊಂದಿರುವ ಗೋವುಗಳನ್ನು 'ವಿರೂಪಾ' ಎಂದು ಅವುಗಳ ಸ್ವರೂಪವನ್ನು ಅರಿತಿರುವ 'ಅಗ್ನಿ'ಗೆ ವಿರೂಪಾಕ್ಷನೆಂದು ಕರೆಯಲಾಗಿದೆ. ಇಲ್ಲಿ ಅಗ್ನಿ ಬೇರೆಯಲ್ಲ ರುದ್ರ ಬೇರೆಯಲ್ಲ. ಸ್ತುತಿ ವೇದ್ಯನಾದ ಅಗ್ನಿಯು ಭಯಂಕರ ರೂಪವುಳ್ಳವನಾಗಿ 'ರುದ್ರ' ಎಂದು ಕರೆಸಿಕೊಳ್ಳುತ್ತಾನೆ. ಕೆಳಗಿನ ಶ್ಲೋಕವು ಇದನ್ನು ಸ್ಪಷ್ಟಪಡಿಸುತ್ತದೆ.

ಮಯೋ ಭೂರ್ವಾತೋ ಅಭಿ ವಾತೊ ಸ್ರಾ
ಉರ್ಜಸ್ವತೀ ರೋಷಧೀರಾ ರಿಶಂತಾಂ ।

ಪೀವಸ್ವತೀರ್ಜೀವ ಧನ್ಯಾಃ
ಪಿಬಂತ್ವಂವಸಾಯ ಪದ್ವತೇ ರುದ್ರ ಮೃಳ ॥ [೧]

ಅಂದರೆ ಗೋವುಗಳಿಗೆ ಆಹ್ಲಾದಕರವಾದ ವಾತಾವರಣದಲ್ಲಿ ಸಮೃದ್ಧಿಯಾಗಿರುವ ಹುಲ್ಲನ್ನು ಯಥೇಚ್ಛವಾಗಿ ನೀರನ್ನು ಕುಡಿಯಲಿ. ಎಲೈ ರುದ್ರನೇ ನಿಮಗೆ ಹಾಲಿನ ರೂಪದಲ್ಲಿ ಆಹಾರವನ್ನು ಒದಗಿಸುತ್ತಿರುವ ಈ ಗೋವುಗಳನ್ನು ಸುಖವಾಗಿಟ್ಟಿರು. ಈ ಕಾರಣದಿಂದಾಗಿ ರುದ್ರನು ಪಶುಪತಿ ಎಂದೆನಿಸಿಕೊಂಡು ಹಾಗೂ ವಿರೂಪಾ ಎಂದರೆ ಎಲ್ಲ ಪಶುಗಳಿಗೆ ಒಡೆಯ ವಿರೂಪಾಕ್ಷ ಎಂದು ಕರೆಸಿಕೊಳ್ಳುತ್ತಾನೆ.

**ಭೈರವ–ವಿರೂಪಾಕ್ಷ**

ಶಿವ, ತಂತ್ರಾರಾಧನೆಯಲ್ಲಿ ಭೈರವ ಸ್ವರೂಪನಾಗಿ ನಿಲ್ಲುತ್ತಾನೆ. ಭೈರವನ ಹಲವು ರೂಪಗಳಲ್ಲಿ 'ವಿರೂಪಾಕ್ಷ' ರೂಪವು ಒಂದಾಗಿದೆ. ಭೈರವನ ಆರಾಧನೆಯನ್ನು ಶಿವಪುರಾಣ, ಲಿಂಗಪುರಾಣ ಮತ್ತು ವಾಮನ ಪುರಾಣಗಳಲ್ಲಿ ಕಾಣಬಹುದು[೨]. ವಾಮನ ಪುರಾಣದ ಉಲ್ಲೇಖದಂತೆ 'ಒಮ್ಮೆ ಶಿವ ಹಾಗೂ ಅಂಧಕಾಸುರನಿಗೂ ಘೋರವಾದ ಯುದ್ಧ ಸಂಭವಿಸಿತು. ಅಂಧಕನು ಶಿವನ ಹಣೆಗೆ ಹೊಡೆದನು. ಆಗ ಶಿವನ ಹಣೆಯಿಂದ ರಕ್ತ ಸೋರಿ ನಾಲ್ಕು ದಿಕ್ಕುಗಳಲ್ಲಿ ಹರಿಯಿತು. ಅದರಿಂದ ಭೈರವರು ಸೃಷ್ಟಿಯಾದರು. ಆ ನಂತರ ಈ ಭೈರವರು ಎಂಟು ಗುಂಪುಗಳಾಗಿ ಪ್ರತ್ಯೇಕಗೊಂಡರು. ಇವರಲ್ಲಿ 'ಗುರು–ಭಯರವ' ಎಂಬುದು ಒಂದು ಗುಂಪು. ಈ ಗುರು–ಭೈರವರಲ್ಲಿ 'ವಿರೂಪಾಕ್ಷ ಭೈರವ' ಎಂಬ ಒಬ್ಬ ಭೈರವನು ಇದ್ದಾನೆ. ಇವನು ಶ್ವೇತವರ್ಣದ ಮೈಯುಳ್ಳವನೆಂದು, ಜಪಮಾಲೆ, ಅಂಕುಶ, ವೀಣೆ ಮತ್ತು ಪುಸ್ತಕಧಾರನೆಂದು ಹೇಳಲಾಗಿದೆ.[೩]

**ಆರಾಧನೆ :**

ಕರ್ನಾಟಕದಲ್ಲಿ ವಿರೂಪಾಕ್ಷನ ಆರಾಧನೆಯು ಮೂಲತಃ ಪ್ರಾರಂಭಗೊಂಡಿದ್ದು ಹಂಪಿಯಲ್ಲಿಯೇ ಎಂಬುದು ಸ್ಪಷ್ಟವಾದ ಸಂಗತಿ. ಸ್ಥಳೀಯ ಐತಿಹ್ಯಗಳು ಮತ್ತು ಸ್ಥಳಪುರಾಣಗಳು, ಜನನಂಬಿಕೆಗಳು ಈ ಸಂಗತಿಯನ್ನು ವಿಷದಪಡಿಸುತ್ತವೆ. ಹೆಸರೇ ಸೂಚಿಸುವಂತೆ ಹಂಪಿಯ ಅಧಿದೇವತೆ ಹಂಪಮ್ಮ/ಪಂಪಾಂಬಿಕೆ. ಅದಕ್ಕಾಗಿ ಅದು ಪಂಪಾಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಇಲ್ಲಿ ಹರಿಯುತ್ತಿರುವ ತುಂಗಭದ್ರಾ ನದಿಯನ್ನು ಕೂಡ ಪಂಪಾತೀರ್ಥವೆಂದೇ ಕರೆಯಲಾಗಿದೆ. ಸ್ಕಾಂದ ಪುರಾಣದ ಪಂಪಾ ಮಹಾತ್ಮೆಯಲ್ಲಿ ಪಂಪಾಂಬಿಕೆಯು ಈ ಕ್ಷೇತ್ರದಲ್ಲಿ ತಪಸ್ಸನ್ನು ಆಚರಿಸಿ ಶಿವನನ್ನು ವರಿಸಿದಳೆಂದು ತಿಳಿದುಬರುತ್ತದೆ. ಪಂಪಾಂಬಿಕೆಯನ್ನು ವಿವಾಹವಾಗಿ ಈ ಕ್ಷೇತ್ರಕ್ಕೆ ಬಂದ ಶಿವ ಪಂಪಾಪತಿಯಾದ. ಹೀಗೆ ಈ ಪಂಪಾಂಬಿಕೆ ಮತ್ತು ಪಂಪಾಪತಿಯರ ಆರಾಧನೆ ಜನಪ್ರಿಯವಾಯಿತು. ಪಂಪಾಪತಿಯನ್ನು ವಿರೂಪಾಕ್ಷನೆಂತಲೂ ಕೂಡ ಕರೆಯುತ್ತಾ ಬರಲಾಗಿದೆ. ಆದರೆ ಯಾವ ಸಂದರ್ಭದಲ್ಲಿ ಆ ಹೆಸರು ರೂಢಿಗೊಂಡಿತೆಂಬುದು ಸ್ಪಷ್ಟವಾಗುವುದಿಲ್ಲ.[೪] ಬಾದಾಮಿಚಾಲುಕ್ಯರ ಕಾಲದ ಶಾಸನಗಳಲ್ಲಿ ಕೂಡಾ ವಿರೂಪಾಕ್ಷನ ಉಲ್ಲೇಖವಿಲ್ಲ. ಆದರೆ ಬಾದಾಮಿ ಚಾಲುಕ್ಯ ಅರಸ ವಿನಯಾದಿತ್ಯನ ಕ್ರಿ.ಶ. ೬೮೬ ರ ತಾಮ್ರಪಟದಲ್ಲಿ ಪಂಪಾತಟವೆಂಬ ಹೆಸರಿನ ಉಲ್ಲೇಖವಿದೆ.[೫] ಅದರಂತೆ ಕ್ರಿ.ಶ. ೧೦೧೪ ರ ಚಾಲುಕ್ಯ ೫ನೆಯ ವಿಕ್ರಮಾದಿತ್ಯ ಶಾಸನದಲ್ಲಿ ಪಂಪಾತೀರ್ಥದ ಮಹಾಕಾಳ ದೇವರಿಗೆ ದಾನಬಿಟ್ಟ ವಿವರವಿದೆ.[೬]

ಅಂದರೆ ಈ ಶಾಸನಗಳಲ್ಲಿ ವಿರೂಪಾಕ್ಷನ ಉಲ್ಲೇಖ ಕಾಣಸಿಗುವುದಿಲ್ಲ. ಆದರೆ ಕುಷ್ಟಗಿ ತಾಲೂಕಿನ ಪುರ ಗ್ರಾಮದ ಕ್ರಿ.ಶ. ೧೦೧೮ ರ ಶಾಸನದಲ್ಲಿ ಚಾಲುಕ್ಯರ ಜಗದೇಕಮಲ್ಲನ ದಂಡನಾಯಕ ಅಗ್ರಹಾರ ಬೆಳನಗೆಯೂರಿನ ಮುಖ್ಯಸ್ಥನಾದ ಕೊಣ್ಣಯ್ಯವಾರಿ ಅಯನಯ್ಯನಿಗೆ ಪಂಪಾತೀರ್ಥದ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ೫ ಮತ್ತರು ಗದ್ದೆ ದಾನ ನೀಡಿದ ಉಲ್ಲೇಖವಿದೆ.[೬] ಅಂದರೆ ಪಂಪಾತೀರ್ಥದ ವಿರೂಪಾಕ್ಷನ ಮೊಟ್ಟ ಮೊದಲ ಉಲ್ಲೇಖ ಈ ಶಾಸನದಲ್ಲಿ ಕಾಣಸಿಗುತ್ತದೆ. ಈ ಶಾಸನದ ಕಾಲಕ್ಕಿಂತ ಮೊದಲು ಹಂಪಿಯಲ್ಲಿ ವಿರೂಪಾಕ್ಷ ಹೆಸರಿನ ದೇವರ ಆರಾಧನೆ ಪ್ರಚಲಿತವಾಗಿತ್ತೋ ಇಲ್ಲವೋ ತಿಳಿಯುವುದಿಲ್ಲ. ಹಾಗೆಂದ ಮಾತ್ರಕ್ಕೆ ವಿರೂಪಾಕ್ಷನ ಆರಾಧನೆ ಇರಲಿಲ್ಲವೆಂದು ಅಲ್ಲ. ಅಲ್ಲಿ ಭೈರವ ಆರಾಧನೆ, ಮಹಾಕಾಲನ ಆರಾಧನೆ ನಿರಂತರವಾಗಿ ನಡೆದುಬಂದಿರುವುದು ಶಾಸನಗಳಿಂದ ವ್ಯಕ್ತವಾಗುತ್ತದೆ.

ಡಾ. ಕಲ್ಬುರ್ಗಿಯವರು ಹಂಪಿಯಲ್ಲಿರುವ ಅಧಿಕ ಸಂಖ್ಯೆಯ ವೀರಭದ್ರನ ವಿಗ್ರಹಗಳನ್ನು ಗಮನಿಸಿ ಹಂಪಿ ಮೂಲತಃ ವಿರೂಪಾಕ್ಷನ ಉಪಾಸನೆ ಕೇಂದ್ರವೆಂದು, ರೌದ್ರಭಾವದ ವೀರಭದ್ರ ಇಲ್ಲಿ ವಿರೂಪಾಕ್ಷನಾಗಿರಬಹುದೆಂದು ತೋರುತ್ತದೆಂದು ಹೇಳಿರುವುದು ಸಮಂಜಸವೆನಿಸುತ್ತದೆ.[೮] ಏಕೆಂದರೆ ಪ್ರಾಚೀನ ಭಾರತದಲ್ಲಿ ರೂಢಿಯಲ್ಲಿದ್ದ ತಂತ್ರಾರಾಧನೆಯಲ್ಲಿ ಶಿವ ಭೈರವ ಸ್ವರೂಪನಾಗಿ ಕಂಡುಬರುತ್ತಾನೆ. ಭೈರವನ ಹಲವು ರೂಪಗಳಲ್ಲಿ ವಿರೂಪಾಕ್ಷ ರೂಪವೂ ಒಂದಾಗಿದೆ. ಭೈರವನ ಆರಾಧನೆಯನ್ನು ಶಿವಪುರಾಣ, ಲಿಂಗಪುರಾಣ ಮತ್ತು ವಾಮನ ಪುರಾಣಗಳಲ್ಲಿ ಕಾಣಬಹುದು. ವಾಮನ ಪುರಾಣದ ವಿವರಣೆಯಂತೆ ಶಿವ ಮತ್ತು ಅಂಧಕಾಸುರನ ಮಧ್ಯೆ ನಡೆದ ಯುದ್ಧದ ಸಂದರ್ಭದಲ್ಲಿ ಶಿವನ ಹಣೆಯಿಂದ ಸೋರಿದ ರಕ್ತದಿಂದ ಹುಟ್ಟಿದ ಗುರು ಭೈರವ ಎಂಬ ಗುಂಪಿನಲ್ಲಿ ವಿರೂಪಾಕ್ಷ ಭೈರವ ಎಂಬ ಹೆಸರಿನ ಉಲ್ಲೇಖವಿದೆ.[೯] ಇದರಿಂದ ವಿರೂಪಾಕ್ಷ ಬೇರೆ ಅಲ್ಲ, ಭೈರವ ಬೇರೆ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಹಂಪಿಯ ವಿರೂಪಾಕ್ಷ ಭೈರವ ವಿರೂಪಾಕ್ಷನೆಂದು ಹೇಳಬಹುದು. ಹಾಗಾಗಿಯೇ ಮೂಲ ವಿರೂಪಾಕ್ಷನನ್ನು ಲಿಂಗ ರೂಪದಲ್ಲಿ ಪ್ರತಿಷ್ಠಾಪಿಸಿ ಅವನ ಲೀಲೆಗಳನ್ನು ಮೂರ್ತಿ ರೂಪದಲ್ಲಿ ಬಿಂಬಿಸುವ ಪರಂಪರೆಯಂತೆ ಹಂಪಿಯಲ್ಲಿ ಅನೇಕ ಭೈರವ ಶಿಲ್ಪಗಳನ್ನು ನಿರ್ಮಿಸಿರುವುದು ಸ್ಪಷ್ಟವಾಗುತ್ತದೆ.

ಕ್ರಿ.ಶ. ೧೨ ನೇ ಶತಮಾನದಲ್ಲಿದ್ದ ಬಸವಣ್ಣನವರೂ ಕೂಡ ತಮ್ಮ ವಚನದಲ್ಲಿ ಶಿವನು ಕೃತಯುಗದಲ್ಲಿ ಕೇದಾರವೆಂಬ ಮೂಲಸ್ಥಾನದಲ್ಲಿ, ತ್ರೇತಾಯುಗದಲ್ಲಿ ವಾರಣಾಸಿ ಎಂಬ ಮೂಲಸ್ಥಾನದಲ್ಲಿ, ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನದಲ್ಲಿ, ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನದಲ್ಲಿದ್ದನೆಂದು ಹೇಳುತ್ತಾರೆ.[೧೦] ಅಂದರೆ ಆ ಹೊತ್ತಿಗಾಗಲೇ ವಿರೂಪಾಕ್ಷ ಸ್ಥಾನ ಅಂದರೆ ಹಂಪಿಯು ಶಿವನ ಪ್ರಮುಖ ನೆಲೆಯಾಗಿತ್ತೆಂದು ಸ್ಪಷ್ಟವಾಗುತ್ತದೆ. ಶಾಸನಗಳಲ್ಲಿ ಉಲ್ಲೇಖಗಳು ಬರದೇ ಹೋದರೂ ಕೂಡ ಹಂಪಿಯಲ್ಲಿ ಸುಮಾರು ಕ್ರಿ.ಶ. ೭ ನೆಯ ಶತಮಾನದಿಂದ ವಿರೂಪಾಕ್ಷನ ಆರಾಧನೆ ಇತ್ತೆಂದು ಮೇಲಿನ ಸಂಗತಿಗಳಿಂದ ತರ್ಕಿಸಬಹುದು. ಹಂಪಿಯಲ್ಲಿಯ ಮೂಲ ವಿರೂಪಾಕ್ಷನೆಂಬ ದೇವಾಲಯವೂ ಕೂಡ ಇರುವುದನ್ನು ಈ ಸಂದರ್ಭದಲ್ಲಿ ಗಮನಿಸಬೇಕಾಗುತ್ತದೆ. ಕ್ರಮೇಣ ಹಂಪಿಯ ವಿರೂಪಾಕ್ಷನ ಆರಾಧನೆ ಹೆಚ್ಚು ಜನಪ್ರಿಯವಾದಂತೆ ಹಂಪಿ ಪರಿಸರದ ಕೆಲವು ಸ್ಥಳಗಳಲ್ಲಿ ವಿರೂಪಾಕ್ಷ ದೇವಾಲಯಗಳೂ ಕೂಡ ನಿರ್ಮಾಣಗೊಂಡವು. ಅಂತಹ ಒಂದು ಪ್ರಾಚೀನ ದೇವಾಲಯ

ರಾಣೆಬೆನ್ನೂರು ತಾಲೂಕಿನ ಇಟಗಿಯ ವಿರೂಪಾಕ್ಷ ದೇವಲಯ. ಇದರ ಕಾಲಮಾನ ಅಲ್ಲಿಯ ಶಾಸನದನ್ವಯ ೧೦ ನೆಯ ಶತಮಾನಕ್ಕೆ ಸೇರುತ್ತದೆ. ಅಂದರೆ ಕ್ರಿ.ಶ. ೧೦೬೯ ರಲ್ಲಿ ನೂರುಂಬಾಡದ ಮನ್ನೆಯತನವನ್ನು ಮಾಡುತ್ತಿದ್ದ ವ್ಯಕ್ತಿಯೊಬ್ಬ ಇಟಗಿ ವಿರೂಪಾಕ್ಷ ದೇವರಿಗೆ ಸ್ನಾನ, ನೈವೇದ್ಯಕ್ಕೆ ದಾನ ನೀಡಿದ ಉಲ್ಲೇಖವಿದೆ.[೧೧] ಅದರಂತೆ ಹರಪನಹಳ್ಳಿ ತಾಲೂಕಿನ ಬೆಣ್ಣೆಹಳ್ಳಿ ವಿರೂಪಾಕ್ಷ ದೇವಾಲಯವು ಚಾಲುಕ್ಯ ಇಮ್ಮಡಿ ಜಗದೇಕಮಲ್ಲನ ಕಾಲದ ಕ್ರಿ.ಶ. ೧೧೪೮ ರ ಶಾಸನದಲ್ಲಿ ಉಲ್ಲೇಖಗೊಂಡಿದೆ.[೧೨] ಇಲ್ಲಿ ಶಾಸನದ ಆರಂಭದಲ್ಲಿ ವಿರೂಪಾಕ್ಷನು ಧರ್ಮವನ್ನು ಕಾಪಾಡಲೆಂದು ಪ್ರಾರ್ಥಿಸಲಾಗಿದೆ. ಹಾಗೂ ದೇವರನ್ನು ಸ್ವಯಂಭೂ ವಿರೂಪಾಕ್ಷನೆಂದೇ ಕರೆಯಲಾಗಿದೆ. ಈ ದೇವಾಲಯ ೧೨ ನೆಯ ಶತಮಾನದ ಆರಂಭಿಕ ದಶಕಗಳಲ್ಲಿಯೇ ನಿರ್ಮಿಸಿರಬೇಕೆಂದು ತೋರುತ್ತದೆ. ಈ ಎರಡೂ ದೇವಾಲಯಗಳು ಹಂಪಿ ವಿರೂಪಾಕ್ಷನಿಗಿಂತ ಶಾಸನೋಕ್ತ ಪ್ರಾಚೀನ ದೇವಾಲಯಗಳಾಗಿದ್ದರೂ ಇವೇ ಹಂಪಿಗಿಂತ ಮೂಲ ದೇವಾಲಯಗಳೆಂದು ಹೇಳುವಂತಿಲ್ಲ. ಆದರೆ ಹಂಪಿಯ ವಿರೂಪಾಕ್ಷನ ಆರಾಧನೆ ಪ್ರಸರಣದ ಪರಿಣಾಮವಾಗಿ ಹುಟ್ಟಿದ ದೇವಾಲಯಗಳೆಂದು ಸ್ಪಷ್ಟವಾಗಿ ಹೇಳಬಹುದು. ಈ ಎರಡೂ ದೇವಾಲಯಗಳು ವಿರೂಪಾಕ್ಷ ಎಂಬ ಹೆಸರು ಪಡೆಯುವಲ್ಲಿ ಹಂಪಿಯಲ್ಲಿದ್ದ ಮೂಲ ವಿರೂಪಾಕ್ಷನೇ ಕಾರಣ ಎಂದು ಹೇಳಬಹುದು. ಈ ದೇವಾಲಯಗಳಲ್ಲಿ ಬೆಣ್ಣೆಹಳ್ಳಿಯ ವಿರೂಪಾಕ್ಷ ದೇವಾಲಯಕ್ಕೆ ಪಂಪಾಪತಿ ದೇವಾಲಯವೆಂದು ಕರೆಯಲಾಗುತ್ತಿರುವುದು ಗಮನಾರ್ಹ ಸಂಗತಿ. ಇದು ಹಂಪಿಯ ವಿರೂಪಾಕ್ಷನ ಮತ್ತೊಂದು ಹೆಸರಾಗಿದೆ. ಅದರ ಪ್ರಭಾವ ಮತ್ತು ಅನುಕರಣೆಗಳು ಇಲ್ಲಿ ವ್ಯಕ್ತವಾಗಿರುವುದನ್ನು ಗುರುತಿಸಬಹುದು. ಒಟ್ಟಿನಲ್ಲಿ ಶಾಸನಗಳ ನೇರ ಉಲ್ಲೇಖವಿರದಿದ್ದರೂ ಕೂಡ ಕ್ರಿ.ಶ. ೭ನೆಯ ಶತಮಾನದಿಂದ ಹಂಪಿಯಲ್ಲಿ ವಿರೂಪಾಕ್ಷನ ಆರಾಧನೆ ಪ್ರಚಲಿತವಾಗಿತ್ತೆಂದು ಮತ್ತು ಆತನನ್ನು ಭೈರವ, ಮಹಾಕಾಲ ಎಂದು ಮುಂತಾಗಿ ಕರೆಯಲಾಗುತ್ತಿತ್ತೆಂದು ಮತ್ತು ಇಲ್ಲಿ ಮೂಲ ವಿರೂಪಾಕ್ಷನ ಪ್ರಭಾವದಿಂದ ಹಂಪಿ ಪರಿಸರದ ಅನೇಕ ಸ್ಥಳಗಳಲ್ಲಿ ವಿರೂಪಾಕ್ಷ / ಪಂಪಾಪತಿ ದೇವಾಲಯಗಳು ಅಸ್ತಿತ್ವಕ್ಕೆ ಬಂದವೆಂದು ಸ್ಪಷ್ಟವಾಗಿ ಹೇಳಬಹುದು.

**ಆರಾಧನಾ ಪರಂಪರೆ :**

ಮೇಲಿನ ಚರ್ಚೆಯನ್ವಯ ಹಂಪಿಯಲ್ಲಿ ಸುಮಾರು ೭ ನೆಯ ಶತಮಾನದಿಂದಲೇ ವಿರೂಪಾಕ್ಷ ಆರಾಧನೆ ಇರುವುದು ಸ್ಪಷ್ಟವಾಗುತ್ತದೆ. ತದನಂತರ ಚರಿತ್ರೆಯುದ್ದಕ್ಕೂ ವಿರೂಪಾಕ್ಷನ ಆರಾಧನೆಯ ಪರಂಪರೆ ಬೆಳೆದು ಬಂದಿರುವುದನ್ನು ಶಾಸನಗಳು ಮತ್ತು ಸಾಹಿತ್ಯ ಕೃತಿಗಳ ವರ್ಣನೆಯಿಂದ ಗುರುತಿಸಬಹುದು. ಬಾದಾಮಿ ಚಾಲುಕ್ಯರ ದೊರೆಗಳು ವಿರೂಪಾಕ್ಷನ ಆರಾಧಕರಾಗಿದ್ದರೆಂದು ಅವರ ಶಾಸನಗಳಿಂದ ತಿಳಿದುಬರುವುದು. ಚಾಲುಕ್ಯ ದೊರೆ ವಿಕ್ರಮಾದಿತ್ಯನು ಪಂಪಾತೀರ್ಥದ ಮಹಾಕಾಲ ದೇವನೆಂದು ಕರೆಯಲಾದ ವಿರೂಪಾಕ್ಷನಿಗೆ ಕ್ರಿ.ಶ. ೧೦೧೪ ರಲ್ಲಿ ದಾನಗಳನ್ನು ನೀಡುತ್ತಾನೆ.[೧೩] ರಾಷ್ಟ್ರಕೂಟರ ಕಾಲದಲ್ಲಿಯೂ ವಿರೂಪಾಕ್ಷ ಆರಾಧನಾ ಪರಂಪರೆ ಮುಂದುವರೆಯುತ್ತದೆ. ಕಾಲದ ಶಾಸನಗಳು ನೇರವಾಗಿ ವಿರೂಪಾಕ್ಷನನ್ನು ಉಲ್ಲೇಖಿಸದಿದ್ದರೂ ಪಂಪಾತಟವನ್ನು ಹೆಸರಿಸುತ್ತವೆ. ಹೀಗಾಗಿ ಪಂಪಾತಟ, ಪಂಪಾತೀರ್ಥ ಆ ಕಾಲದ ಜನ ಸಮುದಾಯದಲ್ಲಿ ಪ್ರಚಲಿತವಾಗಿದ್ದ ಪಂಪಾಕ್ಷೇತ್ರದ ಬಗೆಗಿನ ಪವಿತ್ರ ಭಾವನೆಗಳು ಇರುವುದನ್ನು ವ್ಯಕ್ತಪಡಿಸುತ್ತವೆ. ಕಲ್ಯಾಣ ಚಾಲುಕ್ಯರ ದೊರೆಗಳು

ವಿರೂಪಾಕ್ಷನಿಗೆ ತಮ್ಮ ಭಕ್ತಿ ನಿಷ್ಠೆಯನ್ನು ಮುಂದುವರೆಸುತ್ತಾರೆ. ಕ್ರಿ.ಶ. ೧೦೧೪ ನೆಯ ಚಾಲುಕ್ಯ ೬ ನೆಯ ವಿಕ್ರಮಾದಿತ್ಯನ ಶಾಸನವೊಂದು ವೀರನೊಳಂಬಾದಿರಾಜರ ರಾಣಿ ಮಬ್ಬರಸಿಯು ಪಂಪಾಕ್ಷೇತ್ರದ ಮಹಾಕಾಲ ದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.[೧೪] ಹೀಗೆ ಚಾಲುಕ್ಯ ಕಾಲದಲ್ಲಿ ವಿರೂಪಾಕ್ಷನು ಈ ಮೇಲೆ ಗಮನಿಸಿದಂತೆ ಮಹಾಕಾಲನೆಂಬ ಹೆಸರಿನಿಂದ ಕರೆಯಲ್ಪಟ್ಟದ್ದು, ಅವನ ಆರಾಧನೆ ಪ್ರಚಲಿತವಾಗಿತ್ತೆಂದು ತಿಳಿಯುತ್ತದೆ. ಚಾಲುಕ್ಯರ ಮಾಂಡಲಿಕರಾದ ನೊಳಂಬಪಲ್ಲವರು ಮತ್ತು ಕುರುಗೋಡಿನ ಸಿಂಧರು ವಿರೂಪಾಕ್ಷನನ್ನು ಆರಾಧಿಸುತ್ತಾ ಸಿಂಧದ ೨ ನೆಯ ರಾಚಮಲ್ಲನ ಕ್ರಿ.ಶ. ೧೧೯೯ ರ ಶಾಸನದಲ್ಲಿ ವಿರೂಪಾಕ್ಷತೀರ್ಥದ ಮಹತ್ವ ಮತ್ತು ಅಲ್ಲಿಯ ಆರಾಧನೆಯನ್ನು ತಿಳಿಸುತ್ತದೆ. ಆ ಕಾಲದಲ್ಲಿ ವಿರೂಪಾಕ್ಷ ತೀರ್ಥವು ಪವಿತ್ರ ಕ್ಷೇತ್ರವಾಗಿತ್ತೆಂದು ಮತ್ತು ಅದನ್ನು ರಕ್ಷಿಸಲೆಂದು ಮಾತಂಗ ಪರ್ವತದಲ್ಲಿ ಸಾಮಂತ ಮಾದಯ್ಯನಾಯಕನೆಂಬುವನು ನೇಮಿಸಲ್ಪಟ್ಟಿದ್ದನೆಂದು ತಿಳಿಯುತ್ತದೆ. ಅಷ್ಟೇ ಅಲ್ಲದೆ ಇವನ ಕೈಕೆಳಗಿದ್ದ ಮೈದುನಚೌಡಯ್ಯ ಪಂಪಾದೇವಿಗೆ ಚಿಂಭೊನ್ನಿನ ಕಳಶವನ್ನು ಮಾಡಿಸಿ ಪಂಪಾದೇವಿ ಮತ್ತು ಭೈರವ ಗೃಹಗಳಿಗೆ ಸುಣ್ಣ ಬಳಿಸಿ ಆ ದೇವ ಗೃಹಗಳಿಗೆ ಗಂಟೆ, ಅಡ್ಡಣಿಗೆ, ಆರತಿ, ದೂಪಘಟ್ಟ, ಪರಿಯಾಣ, ತಿಳಿವಟ್ಟಲು, ಚಂದನ, ಸುಗಂಧ ಸಿಪ್ಪುಗಳಲ್ಲದೇ ಅನೇಕ ಉಪಕರಣಗಳನ್ನು ದಾನವಾಗಿ ಕೊಡುತ್ತಾನೆ.[೧೫] ಅಂದರೆ ಪ್ರಾಯಶಃ ಈ ದೇವಾಲಯಗಳ ಪೂಜೆಗೆ ಸ್ವಲ್ಪ ವ್ಯತ್ಯಯವಾಗಿರಬಹುದೆಂದು ತೋರುತ್ತದೆ. ಹಾಗಾಗಿ ಆ ದೇವಾಲಯಗಳಿಗೆ ತಕ್ಕಮಟ್ಟಿಗೆ ದುರಸ್ತಿಗೊಳಿಸಿ ನಿರಂತರ ಪೂಜೆ ನಡೆಯಲು ಪೂಜಾ ಪರಿಕರಗಳನ್ನು ಕೊಟ್ಟನೆಂದು ತೋರುತ್ತದೆ. ಈ ಶಾಸನದಲ್ಲಿ ವಿರೂಪಾಕ್ಷ ಪಂಪಾದೇವಿಯರ ಜೊತೆ ಭೈರವನ ಉಲ್ಲೇಖವನ್ನು ಕಾಣುತ್ತೇವೆ. ಪ್ರಾಯಶಃ ಕಾಲಾನಂತರದಲ್ಲಿ ವಿರೂಪಾಕ್ಷ ಭೈರವನ ಪರಿಕಲ್ಪನೆ ಹಿಂದೆ ಸರಿಯಿತು. ವಿರೂಪಾಕ್ಷನಿಗಾಗಿ ಪ್ರತ್ಯೇಕ ಲಿಂಗವನ್ನು ಸ್ಥಾಪಿಸಿದಂತೆ ತೋರುತ್ತದೆ. ಹೀಗಾಗಿ ಈ ಹೊತ್ತಿನಲ್ಲಿ ಹಂಪಿಯಲ್ಲಿ ವಿರೂಪಾಕ್ಷ ಪಂಪಾದೇವಿ ಮತ್ತು ಭೈರವರ ಆರಾಧನೆ ಪ್ರತ್ಯೇಕವಾಗಿ ಪ್ರಚಲಿತಗೊಂಡಿರುವುದು ತಿಳಿಯುತ್ತದೆ.

ವಿಜಯನಗರ ಅಸ್ತಿತ್ವಕ್ಕೆ ಬಂದಾಗಿ ವಿರೂಪಾಕ್ಷನ ಆರಾಧನೆ ಅತ್ಯಂತ ಜನಪ್ರಿಯವಾಯಿತು. ವಿಜಯನಗರದ ಅರಸರು ವಿರೂಪಾಕ್ಷನೇ ನಿಜವಾದ ದೊರೆ, ತಾವು ಆತನ ಪ್ರತಿನಿಧಿಗಳೆಂದು ಭಾವಿಸಿದ್ದರು. ಸಂಗಮ ವಂಶದ ದೊರೆಗಳಿಂದ ಅರವೀಡು ವಂಶದ ಆಳ್ವಿಕೆ ವರೆಗೆ ವಿರೂಪಾಕ್ಷ ಹಂಪಿಯ ಪ್ರಮುಖ ದೇವತೆಯಾಗಿ ೨ ನೆಯ ದೇವರಾಯನು ವಿರೂಪಾಕ್ಷ ದೇವಾಲಯದ ಪ್ರಧಾನ ದ್ವಾರಗೋಪುರವನ್ನು ನಿರ್ಮಿಸಿ ಭಕ್ತಿಸೇವೆಗೈದನು. ಅದೇ ರೀತಿ ಪ್ರಸಿದ್ಧ ದೊರೆಯಾದ ಶ್ರೀಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ಸವಿನೆನಪಿಗಾಗಿ ಕ್ರಿ.ಶ. ೧೫೧೦ ರಲ್ಲಿ ೨ ನೆಯ ದ್ವಾರಗೋಪುರವನ್ನು ಮತ್ತು ಮಹಾರಂಗಮಂಟಪವನ್ನು ನಿರ್ಮಿಸುತ್ತಾನೆ.[೧೬] ನಂತರದ ಅರಸರೂ ಕೂಡ ವಿರೂಪಾಕ್ಷನೊಂದಿಗೆ ಅನನ್ಯ ಸಂಬಂಧ ಹೊಂದಿದ್ದರು. ಅದೇ ರೀತಿ ಸಾಮ್ರಾಜ್ಯದ ಜನತೆಯೂ ಕೂಡ ಭಕ್ತಿ ಭಾವ ಹೊಂದಿದ್ದರು. ವಿಜಯನಗರ ಕಾಲದ ನೂರಾರು ಶಾಸನಗಳು ಅರಸರಿಂದ ಹಿಡಿದು ಮಾಂಡಲೀಕರು, ಸಾಮಂತರು, ಗಣ್ಯರು, ವರ್ತಕರು ವಿರೂಪಾಕ್ಷನಿಗೆ ದಾನ ನೀಡಿದ, ವಿರೂಪಾಕ್ಷನ ಸನ್ನಿಧಿಯಲ್ಲಿ ದಾನ ನೀಡಿದ ಮತ್ತು ಬೇರೆ ಬೇರೆ ಸ್ಥಳಗಳಲ್ಲಿ ವಿರೂಪಾಕ್ಷ/ಪಂಪಾಪತಿ ದೇವಾಲಯಗಳನ್ನು ಕಟ್ಟಿಸಿದ ಬಗೆಗೆ ತಿಳಿಸುತ್ತದೆ.

**ಸಾಹಿತ್ಯದ ಉಲ್ಲೇಖ :**

ಈ ಕಾಲದಲ್ಲಿ ಅನೇಕ ಕವಿಗಳು, ಪಂಡಿತರು ವಿರೂಪಾಕ್ಷನ ಪ್ರಭಾವಕ್ಕೆ ಒಳಗಾಗಿದ್ದರೂ ಆತನ ಕುರಿತಾಗಿ ಕೃತಿ-ಕವನಗಳನ್ನು ರಚಿಸಿದರು ಮತ್ತು ತಾವು ರಚಿಸಿದ ಯಾವುದೇ ಕೃತಿಗಳಲ್ಲಿ ಕಡ್ಡಾಯವಾಗಿ ವಿರೂಪಾಕ್ಷನ ಮಹಿಮೆಯನ್ನು ಕೊಂಡಾಡಿ ಸ್ಮರಿಸಿರುವುದು ಕಂಡುಬರುವುದು. ಇಂತಹ ಕವಿಗಳಲ್ಲಿ ಹರಿಹರ, ರಾಘವಾಂಕ, ಚನ್ನಬಸವ ಪಂಡಿತ, ಚಂದ್ರಶೇಖರ ಕವಿ, ಲಕ್ಕಣ್ಣ ದಂಡೇಶ, ಚಾಮರಸ ಮುಂತಾದವರು.

ಹರಿಹರನ ಹಂಪೆಯರಸನ ರಗಳೆಯಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಲಾಗಿದೆ.

॥ ನಿತ್ಯ ಶ್ರೀಕಂಠಕಂಠಾಭರಣ ಕಿರಣಸಂಘಾತ ಸಂಭೂತ ನೂತ್ನಾ
ದಿತ್ಯ ವ್ರಾತಾಂಗ ಗಂಗಾಧರ ಪುರಹರ ಬಾಳಾಕ್ಷ ಚಂಚದ್ಭವಾನೀ
ಪ್ರತ್ಯಕ್ಷಸ್ವಾಮಿ ಕಾಮಾಂತಕ ನಿಖಿಳಮಖಾಧಾರ ವಿಸ್ತೀರ್ಣ ಭಕ್ತ
ಗೌತ್ಯಂತ ಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥೧೭

ಶಿವತತ್ವ ಚಿಂತಾಮಣಿಯಲ್ಲಿ ಲಕ್ಕಣ್ಣ ದಂಡೇಶನು ಉಲ್ಲೇಖಿಸುವಂತೆ

॥ ಅಲ್ಲಿರ್ಪುದೊಲುಮೆಯಿಂ ಮಾಲ್ಯವಂತಾಚಲಂ
ಸಲ್ಲಲಿತ ಋಣವಿಮೋಚನ ತೀರ್ಥಮವಿರತಂ
ಪ್ರೋಲ್ಲಸಿತ ಯಕ್ಷತೀರ್ಥಂ ಗದಾತೀರ್ಥವುಂ ಧನುತೀರ್ಥವೆಂದೆನಿಪವು
ಎಲ್ಲ ಮಹಿಮೆಯ ಶಂಖಚಕ್ರತೀರ್ಥಂ ಮುಕ್ತಿ
ಪಲ್ಲವಿಪ ಪದ್ಮದಳ ತೀರ್ಥಂಗಳಂ ಕೂಡಿ
ಸಲ್ಲೀಲೆಯಿಂದಿರ್ಪ ಪಂಪಾಪತಿಯ ವಿಮಲಚರಣಾಂಬುಜಕ್ಕೆ ಶರಣು ॥೧೮

ಹರಿಶ್ಚಂದ್ರ ಕಾವ್ಯದಲ್ಲಿ ರಾಘವಾಂಕನು ಹೀಗೆ ಸ್ತುತಿಸಿದ್ದಾನೆ.

ನಿರುಪಮ ನಿರಾಲಂಬ ನಿತ್ಯನಿರ್ಭಯ ನಿರಾ
ವರಣ ನಿರ್ಮಾಯ ನಿರ್ಮಳ ನಿರ್ವಿಕಲ್ಪ ನಿಜ
ನಿರಸೂಯ ನಿಶ್ಚಿಂತ ನಿರ್ಲೇಪ ನಿರ್ಗುಣ ನಿರಾಧಾರ ನಿತ್ಯತೃಪ್ತ
ನಿರವದ್ಯ ನಿರ್ಭಿನ್ನ ನಿರ್ದ್ವಂದ್ವ ನಿರ್ದೋಷ
ನಿರಪೇಕ್ಷ ನಿಷ್ಕಾಮಿ ನಿಷ್ಕಳ ನಿರಾಕಾರ
ನಿರಜ ನಿರಹಂಕಾರ ನಿರ್ಮಳ ನಿರಾಳ ಪಂಪಾವಿರೂಪಾಕ್ಷ ಶರಣು ॥೪॥

ವಿರೂಪಾಕ್ಷ ಅಷ್ಟಕವೊಂದರಲ್ಲಿ ವಿರೂಪಾಕ್ಷನ ವರ್ಣನೆ ಹೀಗೆ ಬರುತ್ತದೆ.

ಅವನ ಚರಣದೊಳಂಬಕ ।
ಅವನ ನಯನದೊಳು ಹವಿ ।
ತ್ರಿಶೂಲದ ಪೆಣ
ಮತ್ತವನ ಶಿರದೊಳ್ಸುರನದಿ । ದೇವ ವಿರೂಪಾಕ್ಷನಲ್ಲ... ।೧।
ಅವನದು ಸುರರಾಶ್ರಾಯ ಅವನ ಬಿಲ್ಲವರಿಪುರ್ವಿಯಿಂ

ದದಿಸಿರಿಪ್ಪುದು ।

ಅವನ ಗರಳಿಂ ವಿಷವು । ದೇವ..... ।೨। ಆವಂಗೆ ಪಂಚಮುಖ

ಮತ್ತಾವಂಗಿರ್ಪೈ ದುಭುಜವು ನೊಸಲೊಳುಗೇಳು ।......... ॥೬॥

ಹೀಗೆ ವಿವಿಧ ಸಾಹಿತ್ಯಿಕ ಉಲ್ಲೇಖಗಳನ್ನು ಗುರುತಿಸಬಹುದು.

**ದಾನ-ದತ್ತಿ :**

ಹಂಪಿ ಪರಿಸರದ ಪ್ರಧಾನ ದೇವತೆಯಾದ ವಿರೂಪಾಕ್ಷನಿಗೆ ೧೧ ನೆಯ ಶತಮಾನದಿಂದ ಅನೇಕ ದಾನ-ದತ್ತಿಗಳನ್ನು ಬಿಡಲಾಗಿದೆ. ಇದು ಕಂಪಿಲಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಅಧಿಕಾರದಲ್ಲಿದ್ದ ನೊಳಂಬರ ಕಾಲಘಟ್ಟದಿಂದ ಆರಂಭವಾಗುತ್ತದೆ. ನೇರವಾಗಿ ವಿರೂಪಾಕ್ಷನಿಗೆ ದಾನದತ್ತಿಗಳನ್ನು ಬಿಟ್ಟಿರುವುದಲ್ಲದೆ, ಹಂಪಿಯ ಸುತ್ತಮುತ್ತಲಿರುವ ಅನೇಕ ಗ್ರಾಮಗಳಲ್ಲಿಯ ವ್ಯಕ್ತಿಗಳಿಗೆ ದೇವಾಲಯಗಳಿಗೆ ದಾನಬಿಡುವ ಸಂದರ್ಭದಲ್ಲಿ ಪಂಪಾತೀರ್ಥಕ್ಕೆ ಬಂದು ವಿರೂಪಾಕ್ಷನ ಸನ್ನಿಧಿಯಲ್ಲಿ ಪ್ರಮಾಣೀಕರಿಸಲಾಗುತ್ತಿತ್ತು. ವಿರೂಪಾಕ್ಷನೇ ಹಂಪಿಯ ಒಡೆಯನೆಂದು ನಂಬಿದ್ದ ಅರಸ, ಸಾಮಂತರ ಶಾಸನದ ಆರಂಭ ಮತ್ತು ಕೊನೆಯಲ್ಲಿ ಶ್ರೀ ವಿರೂಪಾಕ್ಷನ ಉಲ್ಲೇಖವಿರುವುದು ಗಮನೀಯ. ಹಂಪಿಯ ವಿರೂಪಾಕ್ಷನಲ್ಲದೇ ಕ್ರಮೇಣ ಆತನ ಹೆಸರಿನಲ್ಲಿ ದೇವಾಲಯಗಳನ್ನು ನಿರ್ಮಿಸುವುದು ಮತ್ತು ದಾನ-ದತ್ತಿಗಳನ್ನು ಬಿಡುವ ಪದ್ಧತಿ ಆರಂಭವಾಯಿತು. ಹೀಗಾಗಿ ಈ ಪರಿಸರದಲ್ಲಿ ಅನೇಕ ದೇವಾಲಯಗಳನ್ನು ಮತ್ತು ಅವುಗಳಿಗೆ ಬಿಟ್ಟ ದಾನಗಳನ್ನು ಶಾಸನಗಳು ಉಲ್ಲೇಖಿಸುತ್ತವೆ.

**ಪಂಪಾತೀರ್ಥದ ವಿರೂಪಾಕ್ಷನ ಸನ್ನಿಧಿಯಲ್ಲಿ ಬಿಟ್ಟ ದಾನ-ದತ್ತಿ :**

ಹಂಪಿ ಪರಿಸರದ ಸುತ್ತಮುತ್ತಲಿನ ದಾನ-ದತ್ತಿಗಳನ್ನು ಪವಿತ್ರ ಕ್ಷೇತ್ರವಾಗಿದ್ದ ಹಂಪಿ ವಿರೂಪಾಕ್ಷನ ಸನ್ನಿಧಿಯಲ್ಲಿ ಬಿಡಲಾಗಿದೆ. ಇದು ೧೧ ನೆಯ ಶತಮಾನದಿಂದ ಶಾಸನಗಳಲ್ಲೂ ದಾಖಲಾಗಿ ಉಳಿದು ಈ ರೀತಿಯ ಶಾಸನಗಳ ಉಲ್ಲೇಖ ಕಲ್ಯಾಣದ ಚಾಲುಕ್ಯ ಅರಸ ಜಗದೇಕಮಲ್ಲನ ಕಾಲದಿಂದ ಆರಂಭವಾಗಿರುವುದನ್ನು ಕಾಣುತ್ತೇವೆ. ಕ್ರಿ.ಶ. ೧೦೧೮ ರಲ್ಲಿ ವಿಕೃತ ಸಂವತ್ಸರ, ಕಾರ್ತೀಕ ಪೂರ್ಣಿಮೆ, ಸೋಮಗ್ರಹಣ ನಿಮಿತ್ಯ ಅಗ್ರಹಾರ ಬೈಳನಗೆಯೂರಿನ ಊರೊಡೆಯ ಕೊಣ್ಣಯವಾರಿ ಅಯ್ಯನಯ್ಯನಿಗೆ ಪಂಪಾತೀರ್ಥದ ವಿರೂಪಾಕ್ಷನ ಸನ್ನಿಧಿಯಲ್ಲಿ ಗದ್ದೆ ದಾನ ಕೊಡಲಾಗಿದೆ. ಇದೇ ಅವಧಿಯ ಬಾಗಳಿ ಶಾಸನದಲ್ಲಿ ನೊಳಂಬ ಪಲ್ಲವ ಉದಯಾದಿತ್ಯ ದೇವ ಕಂಪಿಲಿಯಲ್ಲಿ ಆಳ್ವಿಕೆ ಮಾಡುತ್ತಿರುವಾಗ ಉತ್ತರಾಯಣ ಸಂಕ್ರಾಂತಿಯಂದು ಪಂಪಾತೀರ್ಥಕ್ಕೆ ಬಂದಾಗ ಅವನ ಅಪ್ಪಣೆಯಂತೆ ಪೆರ್ಗ್ಗಡೆ ನರಸಿಂಘಯ್ಯನು ಬಾಗಳಿಗೆ ಬಂದು ಸೋಮಸಿಂಗ ಬಳಾರದ ಪಾದ ತೊಳೆದು ಕಲ್ಲಿಯ ಕಲಿದೇವನಿಗೆ ತಪೋಧನರ ಸತ್ರಕ್ಕೆ, ಛಾತ್ರ ಭೋಜನಕ್ಕೆ, ಸೂಳೆಯರಿಗೆ ಮತ್ತು ಪರಿಕಾರರಿಗೆ ದಾನ ಕೊಟ್ಟಿದ್ದಾನೆ.[೪೯] ಕ್ರಿ.ಶ. ೧೦೪೬ ರ ಮೋರಗೇರಿಯ ಶಾಸನದಲ್ಲಿ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮಾನಡಿ ದೇವನ ದಂಡನಾಯಕ ತಿಕ್ಕಣ್ಣ ಮತ್ತು ಲೆಂಕಸಾಸಿರ್ವರು ಮೊರಗೇರಿಯಲ್ಲಿಯ ಭೂಮಿಯನ್ನು ಬಲ್ಲವರಸರಿಂದ ಪಡೆದು ವ್ಯಯಸಂವತ್ಸರದ ಕಾರ್ತಿಕಹುಣ್ಣಿಮೆ ಸೋಮಗ್ರಹಣದಂದು ವಿರೂಪಕ್ಷನೇವರ ಸಮಕ್ಷಮದಲ್ಲಿ

ನೊಳಂಬೇಶ್ವರ ದೇವರಿಗೆ ವಿದ್ಯಾಭ್ಯಾಸಕ್ಕೆ ಮುಂತಾದವುಗಳಿಗೆ ಸೋಮೇಶ್ವರ ಪಂಡಿತರ ಪಾದ ತೊಳೆದು ದಾನ ಕೊಡುತ್ತಾರೆ.[೨೦]

ಕ್ರಿ.ಶ. ೧೧೪೩ ರ ಕುಕನೂರು ಶಾಸನದಲ್ಲಿ ಸುಭಾನು ಸಂವತ್ಸರದ ಪುಷ್ಯ ಹುಣ್ಣಿಮೆ ಬೃಹಸ್ಪತಿವಾರ ಸೋಮಗ್ರಹಣದಂದು ಹಲವು ಬಾಡಗಳ ಅಧಿಕಾರಿ ಮಹಾಪ್ರಧಾನರು ಸೇರಿ ಕಲಚೂರಿ ಬಿಜ್ಜಳ ದೇವನಲ್ಲಿ ಭಿನ್ನಹವನ್ನು ಮಾಡಿಕೊಂಡು ಹಂಪಿಯ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ಎಡೆಹಳ್ಳಿಯನ್ನು ಪುನರ್ದತ್ತಿಯಾಗಿ ಪಡೆದು ಕುಕನೂರು ಮಲ್ಲಿಕಾರ್ಜುನ ದೇವರಿಗೆ ಮತ್ತು ೧೫ ಜನ ಬ್ರಾಹ್ಮಣರಿಗೆ ದಾನ ಕೊಡಲಾಗಿದೆ.[೨೧]

ಪಂಪಾತೀರ್ಥದ ವಿರೂಪಾಕ್ಷನ ಸನ್ನಿಧಿಯಲ್ಲಿ ಜಡುವ ದಾನ-ದತ್ತಿಗಳು ವಿಜಯನಗರ ಕಾಲದಲ್ಲಿಯೂ ಮುಂದುವರೆಯಿತು. ಇನ್ನೂ ಕೆಲವು ಶಾಸನಗಳ ಆರಂಭದಲ್ಲಿ ಶ್ರೀ ವಿರೂಪಾಕ್ಷ, ವಿರೂಪಾಕ್ಷ ಗಣಾಧಿಪತಿ ಎಂದು ಮತ್ತು ಶಾಸನಗಳ ಕೊನೆಯಲ್ಲಿ ವಿರೂಪಾಕ್ಷ, ವಿರೂಪಾಕ್ಷನೇ ಗತಿ ಎಂದು ಬರೆಯಲಾಗಿದೆ. ಸಾಮಾನ್ಯವಾಗಿ ದಾನ-ದತ್ತಿಗಳನ್ನು ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ ಮತ್ತು ಗ್ರಹಣ ಮುಂತಾದ ಪ್ರಮುಖ ದಿನಗಳಂದು ಬಿಟ್ಟಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ವಿರೂಪಾಕ್ಷನ ಸನ್ನಿಧಿಯಲ್ಲಿ ಬಿಟ್ಟ ಹೆಚ್ಚಿನ ದಾನಗಳು ಚಂದ್ರಗ್ರಹಣದಂದು. ಈ ಕ್ಷೇತ್ರವನ್ನು ಪಂಪಾತೀರ್ಥದಂತೆ ಭಾಸ್ಕರತೀರ್ಥವೆಂದೂ ಕರೆಯಲಾಗಿದೆ. ಇದರಿಂದ ವಿರೂಪಾಕ್ಷನನ್ನು ಭಾಸ್ಕರ ಅಥವಾ ಸೂರ್ಯನ ರೂಪದಲ್ಲಿಯೂ ಪೂಜಿಸುತ್ತಿದ್ದರೆಂದು ವಿದ್ವಾಂಸರು ತರ್ಕಿಸುತ್ತಾರೆ.[೨೨]

ವಿರೂಪಾಕ್ಷನಿಗೆ ಕುರಿತಾದ ಕೆಲವು ಪ್ರಮುಖ ಶಾಸನಗಳನ್ನು ಅವಲೋಕಿಸುವುದಾದರೆ ಹೊಯ್ಸಳರ ಕಾಲದಲ್ಲಿ ಹೊಯ್ಸಳ ದೊರೆ ಸೋಮೇಶ್ವರನು ಕ್ರಿ.ಶ. ೧೨೩೬ ರಲ್ಲಿ ಪಂಪಾಕ್ಷೇತ್ರದ ವಿರೂಪಾಕ್ಷನಿಗೆ ಒಂದು ಹಳ್ಳಿಯನ್ನು ದಾನ ಮಾಡಿದನು.[೨೩] ಇದೇ ಅರಸನ ಹಾಸನ ಜಿಲ್ಲೆಯ ಯಲ್ಲೇಶ್ವರದ ಕ್ರಿ.ಶ. ೧೨೩೮ ರ ಶಾಸನದಲ್ಲಿ ಬಮ್ಮಣ್ಣನನ್ನು ಹೇಮಕೂಟ ವಿರೂಪಾಕ್ಷ ದೇವರು ಪಾದಪದ್ಮಾರಾಧಕನೆಂದು ಬಣ್ಣಿಸಲಾಗಿದೆ.[೨೪] ದ್ವಾರಸಮುದ್ರವು ಮುಸ್ಲಿಮರ ದಾಳಿಯಿಂದ ನಾಶವಾದ ಮೇಲೆ ಮೂರನೆಯ ಬಲ್ಲಾಳನು ಹಂಪಿಯನ್ನು ವಿರೂಪಾಕ್ಷ ಹೊಸದುರ್ಗವೆಂದು ಕರೆದು ಕ್ರಿ.ಶ. ೧೩೩೧ ರಲ್ಲಿ ಅಲ್ಲಿಂದ ಆಳುತ್ತಿದ್ದನು.[೨೫] ಮೂರನೆಯ ಬಲ್ಲಾಳನ ಮಗ ಯುವರಾಜ ಪಟ್ಟಾಭಿಷೇಕ ಹಂಪೆಯಲ್ಲಿ ನಡೆಯಿತು.[೨೬] ಇವೆಲ್ಲವನ್ನು ಗಮನಿಸಿದಾಗ ಹೊಯ್ಸಳ ವಂಶದ ಕೊನೆಯ ಅರಸರು ಪಂಪೆ ವಿರೂಪಾಕ್ಷನಲ್ಲಿ ಆಶ್ರಯ ಪಡೆದದ್ದು ವ್ಯಕ್ತವಾಗುತ್ತದೆ. ವಿಜಯನಗರ ಪೂರ್ವಕಾಲದಲ್ಲಾಗಲೇ ಹಂಪಿಯು ಧಾರ್ಮಿಕವಾಗಿ, ರಾಜಕೀಯವಾಗಿ ಸಾಕಷ್ಟು ಅಭಿವೃದ್ಧಿ ಹೊಂದಿತ್ತು. ಇದಕ್ಕೆ ಕಾರಣ ಹಂಪಿಯ ಕೇಂದ್ರಬಿಂದುವಾದ ವಿರೂಪಾಕ್ಷ ದೇವರು.

ವಿಜಯನಗರ ಸ್ಥಾಪನೆಯೊಂದಗೆ ವಿರೂಪಾಕ್ಷನ ಮಹತ್ವ ಹೆಚ್ಚಾಗಿ ಸಂಗಮ ವಂಶದ ಎರಡನೇ ಹರಿಹರನು ವಿಜಯನಗರ ಪಟ್ಟಣದ ಜೊತೆಗೆ ಆರಾಧ್ಯ ದೈವ ವಿರೂಪಾಕ್ಷನನ್ನು ವಂಶ ಪಾರಂಪರ್ಯವಾಗಿ ಪಡೆದನೆಂದು ಶಾಸನವೊಂದು ತಿಳಿಸುತ್ತದೆ.[೨೭] ಈ ಅರಸನ ಶಾಸನಗಳು ವಿರೂಪಾಕ್ಷನು ವಿಜಯನಗರ ಪಟ್ಟಣದ ರಕ್ಷಕನೆಂದು[೨೮] ಅರಸನನ್ನು ವಿರೂಪಾಕ್ಷ ಚರಣಕಮಲ ರಾಜಭೃಂಗ[೨೯] ಮತ್ತು ವಿರೂಪಾಕ್ಷ ದೇವ ದಿವ್ಯಭಕ್ತಾಂಕಿತನೆಂದು[೩೦] ತಿಳಿಸುತ್ತವೆ. ಹರಿಹರನು

ವಿರೂಪಾಕ್ಷನ ಕರುಣೆಯಿಂದ ರಾಜ್ಯಭಾರ ಮಾಡುತ್ತಿದ್ದನು.[೩೧] ಇವನು ಹೊರಡಿಸಿದ ತಾಮ್ರ ಶಾಸನಗಳ ಕೊನೆಯಲ್ಲಿ ॥ ರಾಜಾಧಿರಾಜ ವೀರಹರಿಹರ ರಾಯರ ಹಸ್ತಮುಟ್ಟಿದವೊಪ್ಪಿತಾ ॥ ರಾಜ್ಞೋ ಹರಿಹರೇಶಸ್ಯ ಆಜ್ಞಯ ತಾಮ್ರ ಶಾಸನಂ ॥ ಎಂದು ಇರುವುದಲ್ಲದೆ, ಹಸ್ತಾಕ್ಷರವೂ 'ಶ್ರೀ ವಿರೂಪಾಕ್ಷ' ಎಂದಿದೆ.[೩೨] ಶ್ರೀ ವಿರೂಪಾಕ್ಷ ಎಂದು ಹಸ್ತಾಕ್ಷರ ಹಾಕುವ ಪದ್ಧತಿಯನ್ನು ಅರವೀಡು ವಂಶದ ಒಂದನೆಯ ಶ್ರೀರಂಗನ ವರೆಗೆ ಎಲ್ಲಾ ಅರಸರು ಮುಂದುವರೆಸಿಕೊಂಡು ಬಂದರು. ಒಂದನೆಯ ದೇವರಾಯನು ವಿಜಯನಗರದಲ್ಲಿ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ರಾಜ್ಯಭಾರ ಮಾಡುತ್ತಿದ್ದನೆಂದು ಅವನ ಶಾಸನಗಳು ತಿಳಿಸುತ್ತವೆ.[೩೩] ಎರಡನೇ ದೇವರಾಯನೂ ಸಹ ವಿಜಯನಗರಿಯಲ್ಲಿ ಸಿಂಹಾಸನಸ್ಥನಾಗಿ ವಿರೂಪಾಕ್ಷ ದೇವರ ಸನ್ನಿಧಿಯಲ್ಲಿ ರಾಜ್ಯವನ್ನು ಪರಿಪಾಲಿಸುತ್ತಿದ್ದನು.[೩೪] ಹಾಗೆಯೇ ಇವನು ವಿರೂಪಾಕ್ಷ ಸನ್ನಿಧಿಯಲ್ಲಿಯ ದಾನ ಮಂಟಪದಲ್ಲಿ ಕಲ್ಪಲತಾ ಮತ್ತು ಇತರ ದಾನಗಳನ್ನು ಮಾಡಿದನು.[೩೫] ತುಳುವ ವಂಶದ ವೀರ ನರಸಿಂಹನು ಶ್ರೀರಂಗ, ಹಸ್ತಿಶೈಲ, ಗರುಡಗಿರಿ, ಕುಂಭಕೋಣ, ವೃಷಾದ್ರಿ, ಶ್ರೀಶೈಲ, ರಾಮಸೇತು, ಹರಿಹರ, ಸಂಗಮ, ನಂದಿತೀರ್ಥ, ಗೋಕರ್ಣ, ಕಾಳಹಸ್ತಿ, ಹಂಪಿಯ ವಿರೂಪಾಕ್ಷ ದೇವಸ್ಥಾನದಲ್ಲಿ ಷೋಡಷ ಮಹಾದಾನಗಳನ್ನು ಮಾಡಿದನೆಂದು ಕ್ರಿ.ಶ. ೧೫೦೫ ರ ಶಾಸನವು ತಿಳಿಸುತ್ತದೆ.[೩೬] ಕಾಂಚಿ, ಶ್ರೀರಂಗ, ಶೇಷಾಚಲ, ಗರುಡಗಿರಿ, ಗೋಕರ್ಣ, ಶ್ರೀನಾಗೇಂದ್ರ, ಅರುಣಶಿಖರಿ ಮತ್ತು ವಿರೂಪಾಕ್ಷ ದೇವಸ್ಥಾನದಲ್ಲಿ ಬ್ರಹ್ಮಾಂಡ, ಸ್ವರ್ಣಮೇರು, ತ್ರಿದಶತರುಲತ, ಕಾಮದೇನು ಮತ್ತು ಇತರ ಮಹಾದಾನಗಳನ್ನು ಪುನಃ ಮಾಡಿದನೆಂದು ಅದೇ ಶಾಸನ ತಿಳಿಸುತ್ತದೆ. ಇದೇ ಅರಸನ ಕ್ರಿ.ಶ. ೧೫೦೬ ರ ಶಾಸನವು ಮೇಲೆ ತಿಳಿಸಿದ ಸ್ಥಳಗಳಲ್ಲಿ ಬ್ರಹ್ಮಾಂಡ, ವಿಶ್ವಚಕ್ರ, ಮಹಾಭೂತಘಟ, ರತ್ನಧೇನು, ಸಪ್ತಾಂಭೋದಿ, ಕಲ್ಪಲತ, ಕಾಂಚನೀಂ, ಕಾಮಧೇನು, ಸ್ವರ್ಣಾಕ್ಷ್ಮ, ಹಿರಣ್ಯಾಶ್ವರಥ, ತುಲಾಪುರುಷ, ಗೋಸಹಸ್ರ, ಹೇಮಾಶ್ವ, ಹೇಮಗರ್ಭ, ಕನಕಗಿರಿ ರಥ ಮತ್ತು ಪಂಚಲಾಂಗಲ (೫ ನೇಗಿಲು) ಮಹಾದಾನಗಳನ್ನು ಮಾಡಿದನೆಂದು ತಿಳಿಸುತ್ತವೆ.[೩೭] ಕೃಷ್ಣದೇವರಾಯ[೩೮], ಅಚ್ಯುತರಾಯ[೩೯] ಮತ್ತು ಸದಾಶಿವರಾಯರ[೪೦] ಶಾಸನಗಳು ವಿಜಯನಗರ ಅರಸರ ವಂಶಾವಳಿಯನ್ನು ಹೇಳುವಾಗ ವೀರ ನರಸಿಂಹನ ಈ ಮಹಾದಾನಗಳ ಬಗ್ಗೆ ಪದೇಪದೇ ಪ್ರಸ್ತಾಪಿಸುತ್ತವೆ.

ಈ ಎಲ್ಲಾ ಶಾಸನಗಳನ್ನು ಅವಲೋಕಿಸಿದಾಗ ಒಂದನೆಯ ಬುಕ್ಕನಿಂದ ಅಚ್ಯುತದೇವರಾಯನ ವರೆಗೆ ಈ ಪದ್ಧತಿ ಮುಂದುವರೆದದ್ದು ಕಾಣುತ್ತದೆ. ಎರಡನೆಯ ದೇವರಾಯನು ವಿರೂಪಾಕ್ಷನ ಸನ್ನಿಧಿಯಲ್ಲಿ ದಾನ ಮಂಟಪದಲ್ಲಿ . ದಾನ ಮಾಡುತ್ತಿದ್ದುದನ್ನು ಗಮನಿಸಲಾಗಿ ಹಾಗೆಯೇ ಕೃಷ್ಣದೇವರಾಯನು ಕ್ರಿ.ಶ. ೧೫೧೭ ರಲ್ಲಿ ವಿರೂಪಾಕ್ಷನ ಸನ್ನಿಧಿಯಲ್ಲಿ ಮುಕ್ತಿ ಮಂಟಪದಲ್ಲಿ ದಾನ ಮಾಡಿದನೆಂದು ಪಾವಗಡದ ಶಾಸನ ತಿಳಿಸುತ್ತದೆ.[೪೧] ತುಮಕೂರು ಜಿಲ್ಲೆಯ ಬೆನಕನಕೆರೆ ಶಾಸನವನ್ನು ಹರಿಹರನ ಕಾಲದಲ್ಲಿ ವಿರೂಪಾಕ್ಷನ ಸನ್ನಿಧಿಯಲ್ಲಿ ಬರೆದು ವಿರೂಪಾಕ್ಷನ ಶಾಸನವೆಂದು ಕರೆಯಲಾಗಿದೆ.[೪೨] ಅಂತೆಯೇ ವಿಜಯನಗರ ಅರಸರು ತಾವು ಹೊರಡಿಸಿದ ಶಾಸನಗಳಿಗೆ 'ಶ್ರೀ ವಿರೂಪಾಕ್ಷ' ಎಂದು ಹಸ್ತಾಕ್ಷರ ಹಾಕುವುದನ್ನು ಹೆಚ್ಚಾಗಿ ತಾಮ್ರಶಾಸನಗಳಿಂ ಅನ್ವಯಿಸಿದರೂ ಕೆಲವು ಶಿಲಾಶಾಸನಗಳಲ್ಲಿಯೂ ಇದನ್ನು ಕಾಣುತ್ತೇವೆ. ಶಾಸನದ ಭಾಷೆ, ಲಿಪಿ ಯಾವುದೇ ಆಗಿದ್ದರೂ ವಿರೂಪಾಕ್ಷ ಹಸ್ತಾಕ್ಷರವು ಸಾಮಾನ್ಯವಾಗಿ ಕನ್ನಡ ಲಿಪಿಯಲ್ಲಿರುತ್ತದೆ. ಶ್ರೀ ವಿರೂಪಾಕ್ಷ ಹಸ್ತಾಕ್ಷರ

ವಿಜಯನಗರ ಅರಸರದೇ ಆಗಿದೆ ಎಂಬುದಕ್ಕೆ ಎರಡನೇ ಹರಿಹರನ ಅನೇಕ ಶಾಸನಗಳು ಪುಷ್ಟಿ ನೀಡುತ್ತವೆ. ತುಮಕೂರು ಜಿಲ್ಲೆಯ ನಾಗಸಂದ್ರದ ಶಾಸನದಲ್ಲಿ "ಹರಿಹರ ರಾಯನ ಶ್ರೀ ಹಸ್ತದ ಬರಹ ಶ್ರೀ ವಿರೂಪಾಕ್ಷ" ಎಂದಿದೆ.[೪೩] ಮೈಸೂರು ಜಿಲ್ಲೆಯ ಸಾಗೆರೆ ಶಾಸನದಲ್ಲಿ "ಹರಿಹರ ಸ್ವಹಸ್ತೇಸ ಶ್ರೀ ವಿರೂಪಾಕ್ಷ" ಎಂದಿದೆ.[೪೪] ದಾವಣಗೆರೆ ಜಿಲ್ಲೆಯ ಹರಿಹರ ಶಾಸನದಲ್ಲಿ "ಶ್ರೀಹರಿಹರರಾಯನವೊಪ್ಪ ಶ್ರೀ ವಿರೂಪಾಕ್ಷ" ಎಂದಿದೆ.[೪೫] ತುಮಕೂರು ಜಿಲ್ಲೆಯ ಯಲಿಯೂರು ಶಾಸನದಲ್ಲಿ "ರಾಯರವೊಪ್ಪ ಶ್ರೀ ವಿರೂಪಾಕ್ಷ" ಎಂದಿದೆ.[೪೬] ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ವಿಜಯನಗರದ ಅರಸರು ವಿರೂಪಾಕ್ಷನ ಕರುಣೆಯಿಂದ ಆತನ ಸನ್ನಿಧಿಯಲ್ಲಿ ಸಿಂಹಾಸನದ ಮೇಲೆ ಕುಳಿತು ತಮ್ಮನ್ನು ವಿರೂಪಾಕ್ಷ ಚರಣಕಮಲ ರಾಜಭೃಂಗಗಳೆಂದು ಕರೆದುಕೊಂಡು ತಾವು ಬರೆಸಿದ ಶಾಸನಗಳಿಗೆ ದೇವರ ಹೆಸರಿನಲ್ಲಿ ಶ್ರೀ ವಿರೂಪಾಕ್ಷ ಎಂದು ಹಸ್ತಾಕ್ಷರ ಹಾಕಿ ದೇವರೇ ವಿಜಯನಗರದ ಅರಸ, ತಾವು ಆತನ ಪ್ರತಿನಿಧಿಗಳೆಂಬಂತೆ ರಾಜಭಾರ ಮಾಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

**ವಾಸ್ತುಶಿಲ್ಪದ ಉಲ್ಲೇಖ :**

ಹಂಪಿಯಲ್ಲಿ ಪ್ರಸ್ತುತ ಮುಖ್ಯ ವಿರೂಪಾಕ್ಷ ದೇವಾಲಯವನ್ನೊಳಗೊಂಡಂತೆ ಹೇಮಕೂಟದಲ್ಲಿ ಮೂಲವಿರೂಪಾಕ್ಷ ಮತ್ತು ಭೂಮಟ್ಟದ ಪ್ರಸನ್ನ ವಿರೂಪಾಕ್ಷವೆಂಬ ಒಟ್ಟು ಮೂರು ಗುಡಿಗಳಿದ್ದು, ಕ್ರಿ.ಶ. ೧೦೧೮ ರಲ್ಲಿ ಪಂಪಾತೀರ್ಥದ ವಿರೂಪಾಕ್ಷನ ಉಲ್ಲೇಖ ಬಂದಿರುವುದರಿಂದ ಬಹು ಹಿಂದೆಯೇ ವಿರೂಪಾಕ್ಷ ದೇವಾಲಯ ನಿರ್ಮಾಣವಾಗಿತ್ತೆಂದು ಹೇಳಬಹುದು. ರಾಣಿಬೆನ್ನೂರು ತಾಲೂಕಿನ ಇಟಗಿಯಲ್ಲಿ ಕ್ರಿ.ಶ. ೧೦೬೯ ರ ಮುಂಚೆ ವಿರೂಪಾಕ್ಷ ದೇವಾಲಯ ನಿರ್ಮಾಣವಾಗಿತ್ತು. ಈ ವಿರೂಪಾಕ್ಷ ದೇವರ ಸ್ನಾನ, ನೈವೇದ್ಯಕ್ಕೆ ೧೦೬೯ ರಲ್ಲಿ ಭೂದಾನ ನೀಡಿದ ಉಲ್ಲೇಖ ಅಲ್ಲಿಯ ಶಾಸನದಲ್ಲಿದೆ. ಮುಂದೆ ರಾಯಮುರಾರಿ ಸೋವಿದೇವ ಕಾಲದಲ್ಲಿ ಮತ್ತೊಮ್ಮೆ ದಾನ ಬಿಡಲಾಗಿದೆ.[೪೭] ಹರಪನಹಳ್ಳಿ ತಾಲೂಕಿನ ಬೆಣ್ಣೆಹಳ್ಳಿ ಗ್ರಾಮದಲ್ಲಿ ಪ್ರಾಚೀನ ಕಾಲದ ಪಂಪಾಪತಿ ದೇವಾಲಯವಿದ್ದು ಈ ದೇವಾಲಯಕ್ಕೆ ಹೊಯ್ಸಳರ ಕಾಲದಲ್ಲಿ ಅನೇಕ ದಾನದ ದತ್ತಿಗಳನ್ನು ಬಿಟ್ಟಿರುವುದರಿಂದ ಇದು ಚಾಲುಕ್ಯರ ಕಾಲದಲ್ಲಿಯೇ ನಿರ್ಮಾಣವಾಗಿರಬಹುದು. ಈ ದೇವಾಲಯದ ಕಂಬದಲ್ಲಿ ನಾಲ್ಕು ಶಾಸನಗಳಿವೆ. ಹೊಯ್ಸಳ ವೀರನರಸಿಂಹ ಕಾಲದ ಕ್ರಿ.ಶ. ೧೧೯೭ ರ ಶಾಸನದಲ್ಲಿ ಉತ್ತರಕ್ಕೆ ಹೆಗ್ಗಡೆ, ಜನಯ್ಯ ಹೆಗ್ಗಡೆಗಳು ವಿರೂಪಾಕ್ಷನ ಲಕ್ಷದಡುಗೆಗೆ, ನೈವೇದ್ಯಕ್ಕೆ ಹಾಗೂ ಬ್ರಾಹ್ಮಣರ ಭೋಜನಕ್ಕೆ ಮೂಲಿಗದರೆ, ಪಂಚಕರುದರೆ, ಮಗ್ಗದರೆ, ಗಾಣದರೆ ಮುಂತಾದ ಕಿರುದರೆಗಳನ್ನು ಕೋಗಳಿನಾಡ ಪ್ರಭುಗಳ ಮುಂದೆ ಚಂಡೇಶ್ವರ ದೇವರಿಗೆ ಬಿಟ್ಟಿದ್ದಾರೆ.[೪೮] ಕ್ರಿ.ಶ. ೧೨೮೨ ರಲ್ಲಿ ಬೆಣ್ಣೆವೂರು ವಿರೂಪಾಕ್ಷದೇವರ ಪೂಜಾರ್ಥ, ೧೨ ಜನರ ಭೋಜನಕ್ಕೆ ಉತ್ತಮ ಹಸು ಮತ್ತು ಎಮ್ಮೆಗಳನ್ನು ದಾನ ಬಿಡಲಾಗಿದೆ.[೪೯] ಅದೇ ಅವಧಿಯಲ್ಲಿ ಸೂರಭೂವನ ಮಗ ಅಯಭೋವ, ಚಿಗಟಗೆರೆಯ ಚಂದಭೋವ, ಹೊಳಗುಂದೆಯ ಗುಂಡಭೋವ, ಕೋಗಳಿಯ ನಂದಿಭೋವ, ಸೂರೆಯಸೋಮೆಯ ಸಾವಂತನ ಮಗ ಮಸನೆಯ ಸಾವಂತ ಇವರೆಲ್ಲರೂ ಸೇರಿ ಬೆಣ್ಣೆನೂರ ಸ್ಥಳದಲ್ಲಿ ಮಹಾನಾಡಾಗಿ ನೆರೆದು, ಆ ಊರ ಶ್ರೀ ಸ್ವಯಂಭು ವಿರೂಪಾಕ್ಷನಿಗೆ, ೧೨ ಮಹಾಜನರಿಗೆ ತಮ್ಮ ಬಿಲುವಡಿಕೆ ಮುಖ್ಯವಾಗಿ ಕಬ್ಬಲದಡಿಕೆಯ ಆದಾಯವನ್ನು ಸರ್ವನಮಸ್ಯವಾಗಿ ಬಿಟ್ಟಿದ್ದಾರೆ.[೫೦] ವೀರಪಾಂಡ್ಯದೇವನು ಉಚ್ಚಂಗಿಯಲ್ಲಿ ಆಳುತ್ತಿದ್ದಾಗ, ಬಾಡಬೆಣ್ಣೆವೂರ ಮಲ್ಲರಸ ಮತ್ತು

ಕೊಟ್ಟೂರಿನ ರಾಮದೇವರು ವಿರೂಪಾಕ್ಷನಿಗೆ ಕೆಲವು ಸಾಮ್ಯಗಳನ್ನು ಬಿಟ್ಟಿದ್ದಾರೆ.[೩೧] ಅದೇ ದೇವಾಲಯದಲ್ಲಿರುವ ವೀರರಾಮಚಂದ್ರದೇವನ ಕ್ರಿ.ಶ. ೧೨೮೦ ರ ಶಾಸನದ ಕೊನೆಯಲ್ಲಿ ಶ್ರೀ ವಿರೂಪಾಕ್ಷ ಎಂದು ಬರೆಯಲಾಗಿದೆ.[೩೨] ಈ ಎಲ್ಲ ಶಾಸನಗಳ ಉಲ್ಲೇಖಗಳಿಂದ ೧೧-೧೨ ನೆಯ ಶತಮಾನದಲ್ಲಿ ಇದು ಈ ಭಾಗದ ಪ್ರಮುಖ ದೇವಾಲಯವಾಗಿರುವುದನ್ನು ಗಮನಿಸಬಹುದು.

ಕಲ್ಯಾಣದ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣವಾದ ಪಂಪಾಪತಿ ದೇವಾಲಯಗಳು ಹಂಪಿ ಪರಿಸರದ ಹನಮನಹಳ್ಳಿ, ಕನಕಗಿರಿ ಮತ್ತು ಶಿರಿಗೆರೆಗಳಲ್ಲಿವೆ. ಹಂಪಿಯ ತುಂಗಭದ್ರಾ ನದಿಯ ಎಡದಂಡೆಯ ಮೇಲೆ ಅಂಜನಹಳ್ಳಿ ಮತ್ತು ಹನುಮನಹಳ್ಳಿ ಹತ್ತಿರದಲ್ಲಿ ಗರ್ಭಗೃಹ, ಅರ್ಧಮಂಟಪ, ಸಭಾಮಂಟಪಗಳಿಂದ ಕೂಡಿದ ಪಂಪಾಪತಿ ದೇವಾಲಯವಿದೆ. ಇದೆ ಮಾದರಿಯಲ್ಲಿರುವ ಕನಕಗಿರಿಯ ಪಂಪಾಪತಿ ದೇವಾಲಯಕ್ಕೆ ಗರ್ಭಗೃಹದ ಮೇಲೆ ದ್ರಾವಿಡ ಶಿಖರವಿದೆ. ಶಿರಿಗೇರೆಯಲ್ಲಿ ಈ ಹೆಸರಿನ ದೇವಾಲಯ ಹಾಳಾಗಿದ್ದು, ಗರ್ಭಗೃಹ ಮತ್ತು ಅಂತರಾಳ ಮಾತ್ರ ಉಳಿದುಕೊಂಡಿದೆ.

ವಿಜಯನಗರ ಕಾಲಾವಧಿಯಲ್ಲಿ ನಿರ್ಮಾಣವಾದ ಪಂಪಾಪತಿ ದೇವಾಲಯಗಳು ಕುರೆಕುಪ್ಪ, ಕಂಪ್ಲಿ, ಕನಕಗಿರಿ, ಹಳೆ ಅಯೋಧ್ಯ, ಚಿಕ್ಕಜಂತಕಲ್ಲು, ಹಿರೇಜಂತಕಲ್ಲು ಮತ್ತು ಹಚ್ಚೊಳ್ಳಿ ಗ್ರಾಮಗಳಲ್ಲಿವೆ.

ಸಂಡೂರು ತಾಲ್ಲೂಕಿನ ಕುರೆಕುಪ್ಪ ಗ್ರಾಮದಲ್ಲಿ ನಿರ್ಮಾಣವಾದ ವಿರೂಪಾಕ್ಷ ದೇವಾಲಯ ವಿಜಯನಗರ ಶೈಲಿಯಲ್ಲಿದೆ. ಇದು ಗರ್ಭಗೃಹ ಹಾಗೂ ವಿಶಾಲವಾದ ಸಭಾಮಂಟಪಗಳಿಂದ ಕೂಡಿದೆ. ಸಭಾಮಂಟಪದ ಕಂಬದ ಮೇಲಿರುವ ವಿಜಯನಗರ ಅರಸರ ಕೃಷ್ಣದೇವರಾಯನ ಕಾಲದ ಕ್ರಿ.ಶ. ೧೫೨೩ ರ ಶಾಸನದಲ್ಲಿ[೩೩], ಅನಂತಸೇತು ಎಂಬ ಪ್ರತಿನಾಮದ ಕುರೆಕುಪ್ಪದಲ್ಲಿ ಹೆಗ್ಗರಸರ ಮಕ್ಕಳು ಘಳಿಯಾರದ ಬಾಗಿಲ ಬೆನಕರಸರು ದೇವಾಲಯವನ್ನು ಕಟ್ಟಿಸಿ ವಿರೂಪಾಕ್ಷ ದೇವರ ಪ್ರತಿಷ್ಠೆಯನ್ನು ಮಾಡಿ, ಆ ದೇವರ ನೈವೇದ್ಯ, ಪೂಜೆ, ಪುನಸ್ಕಾರ ನಿತ್ಯ ಸೇವೆಗಳಿಗೆ ಬಸವಾದಿ ದೀಕ್ಷಿತರ ಆಗ್ನಾಕ್ರಯದ ವೃತ್ತಿಗಳೊಳಗೆ ಮಹಾಜನಗಳ ಕೈಯಲ್ಲಿ ಕ್ರಮ ದಾನವಾಗಿಕೊಂಡು ಧಾರಾಪೂರ್ವಕವಾಗಿ ಸಮರ್ಪಿಸಿದರೆಂದಿದೆ. ಈ ಪರಿಸರದ ಕಂಪ್ಲಿಯ ಪಂಪಾಪತಿ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು ದ್ವಿಕೂಟಾಚಲದಲ್ಲಿದೆ. ದೇವಾಲಯದ ಆವರಣದಲ್ಲಿ ಕ್ರಿ.ಶ. ೧೫೫೨ ರ ಶಾಸನವಿದ್ದು[೩೪] ಅದರಲ್ಲಿ ಆದವಾನಿಯ ಮೂಡನಾಡ ಸುಂಕದ ಬನದರಸನ ಮಗನಾದ ಕರಿಬೇಡ ಸಂಕರಸನು ಕಂಪ್ಲಿ ಮಾಗಣಿಯ ವಿರೂಪಾಕ್ಷ ದೇವರ ಗುಡಿಯಲ್ಲಿ ಹಂಪಾದೇವಿಗಾಗಿ ಒಂದು ಅಂಕಣ ಕಲ್ಲುಮಾಳಿಗೆಯನ್ನು ಕಟ್ಟಿಸಿ ದೇವಿಯ ಪೂಜೆಗಾಗಿ ಕರಿಬೇಡ ಅಗ್ರಹಾರದ ಉತ್ತಳೆಯಲ್ಲಿ ಕೆಲವು ವೃತ್ತಿಗಳನ್ನು ದಾನ ನೀಡಿದ ಉಲ್ಲೇಖವಿದೆ. ಗಂಗಾವತಿ ತಾಲೂಕಿನ ಹಿರೇಜಂತಕಲ್ ಗ್ರಾಮದಲ್ಲಿ ಬೃಹತ್ ಪ್ರಮಾಣದ ವಿರೂಪಾಕ್ಷ ದೇವಾಲಯವಿದೆ. ಅದು ವಿಶಾಲವಾದ ಪ್ರಾಕಾರದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮಹಾಮಂಟಪಗಳಿಂದ ಕೂಡಿದೆ. ಗರ್ಭಗೃಹದಲ್ಲಿ ಸುಮಾರು ೩ ಅಡಿ ಎತ್ತರದ ಶಿವಲಿಂಗ, ಸಭಾಮಂಟಪದಲ್ಲಿ ೬ ಅಡಿ ಎತ್ತರದ ನಂದಿ ಮತ್ತು ಬೃಹತ್ ಪ್ರಮಾಣದ ದ್ವಾರಪಾಲಕರ ವಿಗ್ರಹಗಳಿವೆ. ಇದು ವಾಸ್ತುಶಿಲ್ಪ ರಚನೆಯಲ್ಲಿ ಹಂಪಿಯ ದೇವಾಲಯಗಳಿಗೆ ಸರಿಸಮನಾಗಿದೆ. ಈ ಪ್ರಮುಖ ದೇವಾಲಯಗಳಲ್ಲದೇ ಹೊಸಪೇಟೆ ತಾಲೂಕಿನ ಹಚ್ಚೊಳ್ಳಿ, ಹಂಪದೇವನಹಳ್ಳಿ, ಗಂಗಾವತಿ ತಾಲೂಕಿನ

ಚಿಕ್ಕಜಂತಕಲ್ಲು, ಹಳೇ ಅಯೋಧ್ಯ ಗ್ರಾಮಗಳಲ್ಲಿ ಪಂಪಾಪತಿ ದೇವಾಲಯಗಳು ನಿರ್ಮಾಣವಾಗಿರುವುದು ಕಂಡುಬರುತ್ತದೆ.

ಹೀಗೆ ಶಾಸನ, ಸ್ಥಳಪುರಾಣ, ಸಾಹಿತ್ಯ ಮತ್ತು ದೇವಾಲಯ ವಾಸ್ತುಶೈಲಿಯ ಸೂಕ್ಷ್ಮ ಅಧ್ಯಯನದ ಮೂಲಕ ಹಂಪಿಯ ವಿರೂಪಾಕ್ಷನ ಚರಿತ್ರೆಯನ್ನು ಇನ್ನೂ ಪ್ರಾಚೀನ ಕಾಲಕ್ಕೆ ಕೊಂಡೊಯ್ಯಬಹುದು ಅಲ್ಲದೆ ಜನಪದರಲ್ಲಿ ಬೇರೂರಿದ್ದ ಪಂಪಾತೀರ್ಥದ ಮಹತ್ವ ಹಂಪಿಯ ವಿರೂಪಾಕ್ಷನನ್ನು ಇತರ ಗ್ರಾಮಗಳಿಗೆ ಕರೆದೊಯ್ದು ದೇವಾಲಯ ಕಟ್ಟಿಸಿ ಆರಾಧಿಸುವ ಪದ್ಧತಿಯನ್ನು ಗಮನಿಸಬಹುದು. ಅಂತೆಯೇ ವಿಜಯನಗರ ಕಾಲದಿಂದಲೂ ವ್ಯವಸ್ಥಿತವಾದ ಒಂದು ಧಾರ್ಮಿಕ ಕೇಂದ್ರವಾಗಿ ರೂಪುಗೊಂಡ ವಿರೂಪಾಕ್ಷ ದೇವಾಲಯದಲ್ಲಿ ಪೂಜಾ ಪದ್ಧತಿಗಳು, ಆಚರಣೆ, ಉತ್ಸವಗಳು ವ್ಯವಸ್ಥಿತವಾಗಿ ನಡೆದುಕೊಂಡು ಬರಲಾರಂಬಿಸಿದವು. ನಿತ್ಯೋತ್ಸವಗಳು, ಪಕ್ಷೋತ್ಸವ, ಮಾಸೋತ್ಸವಗಳು, ವಾರ್ಷಿಕ ಉತ್ಸವಗಳು ರೂಢಿಗೊಂಡವು. ಅವೆಲ್ಲಾ ಇಂದಿಗೂ ನಡೆದುಕೊಂಡು ಬಂದಿದ್ದು ಅವುಗಳ ವಿವರಗಳನ್ನು ಈ ಮುಂದಿನಂತೆ ಗಮನಿಸಬಹುದು.

**ಧಾರ್ಮಿಕ ಆಚರಣೆಗಳು :**

ಹಂಪಿ ಸಹಿತ ಎಲ್ಲ ವಿರುಪಾಕ್ಷ ದೇವಾಲಯಗಳಲ್ಲಿ ವರ್ಷದುದ್ದಕ್ಕೂ ಹಲವಾರು ವೈವಿಧ್ಯಮಯಾದ ಪೂಜೆ ಪುನಸ್ಕಾರಗಳು, ಉತ್ಸವಾದಿ ಧಾರ್ಮಿಕ ಆಚರಣೆಗಳು ನೆರವೇರುತ್ತವೆ. ವಿಶೇಷವಾಗಿ ಹಂಪಿಯ ವಿರೂಪಾಕ್ಷ ದೇವಾಲಯದಲ್ಲೇ ಇಂಥ ಆಚರಣೆಗಳು ಅಧಿಕವಾಗಿದ್ದು ಶಾಸ್ತ್ರೋಕ್ತವಾಗಿ ನೆರವೇರುತ್ತವೆ. ಧಾರ್ಮಿಕ ಆಚರಣೆಗಳನ್ನು ಭಕ್ತ ಸಮುದಾಯದ ಧಾರ್ಮಿಕ ಹಾಗೂ ಸಾಮಾಜಿಕ ಬದುಕಿನ ಭಾಗವಾಗಿ ರೂಪುಗೊಂಡಿವೆ ಎಂದು ಹೇಳಬಹುದು. ವೈವಿಧ್ಯಮಯವಾದ ಮತ್ತು ವೈಶಿಷ್ಟ್ಯಪೂರ್ಣವಾಗಿರುವ ಆಚರಣೆಗಳು ಇಂತಿವೆ.

**ನಿತ್ಯದ ಆಚರಣೆಗಳು**

**ದೈವ ಜಾಗೃತಿ :**

ಸೃಷ್ಟಿಕರ್ತನು, ಪಾಲಕನೂ ಆದ ವಿರೂಪಾಕ್ಷನು ದಿನವೆಲ್ಲಾ ಭಕ್ತ ಕೋಟಿಯ ಪಾಲನೆಯನ್ನು ಮಾಡಿ ರಾತ್ರಿ ವಿರಮಿಸುತ್ತಾನೆಂಬ ನಂಬಿಕೆ ಭಕ್ತ ಸಮುದಾಯದಲ್ಲಿದೆ. ಅದಕ್ಕಾಗಿ ಸುಪ್ರಭಾತ ಸಮಯದಲ್ಲಿ ದೇವನನ್ನು ನಿದ್ರೆಯಿಂದ ಎಬ್ಬಿಸಿ ಜಾಗೃತಿಗೊಳಿಸುವ ಕಾರ್ಯ ಪುರೋಹಿತರಿಂದ ನೆರವೇರುತ್ತದೆ.

ಶಯನಗೃಹದಿಂದ ವಿರೂಪಾಕ್ಷ ಮತ್ತು ಪಂಪಾದೇವಿಯರ ಉತ್ಸವ ಮೂರ್ತಿಗಳನ್ನು ತಂದು ಪುರೋಹಿತರು ಗರ್ಭಗೃಹದ ಲಿಂಗದ ಮುಂದೆ ಇರಿಸುತ್ತಾರೆ. ಈಗ ದೈವಿ ಚೇತನ ಜಾಗೃತಗೊಂಡು ಮೂರ್ತಿಗಳಿಂದ ಲಿಂಗ ಪ್ರವೇಶಿಸುತ್ತದೆಂದು ಭಾವಿಸಲಾಗಿದೆ. ನಂತರ ಉತ್ಸವ ಮೂರ್ತಿಗಳನ್ನು ಅರ್ಧಮಂಟಪದ ದೇವ ಕೋಷ್ಠಗಳಲ್ಲಿ ಇರಿಸಲಾಗುತ್ತದೆ.

ಹಿರೇಜಂತಕಲ್, ಬೆಣ್ಣಿಹಳ್ಳಿ ಮತ್ತು ಕುರೇಕುಪ್ಪ ದೇವಾಲಯಗಳಲ್ಲಿ ಇದೇ ರೀತಿಯ ಆಚರಣೆ ನಡೆಯುತ್ತದೆ.

**ಕುಂಭಾಭಿಷೇಕ (ಬಿಂದಿಗೆ ಸೇವೆ) :**

ಶಯನಗೃಹದಿಂದ ದೇವ, ದೇವಿಯರನ್ನು ಹೊರತಂದು ಜಾಗೃತಗೊಳಿಸಿದ ನಂತರ ಪ್ರಾತಃ ಕರ್ಮವಿಧಿಯಂತೆ ಅವರಿಗೆ ಮಜ್ಜನವಾಗಬೇಕು. ಅದಕ್ಕಾಗಿ ಕಿರಿಯ ಪುರೋಹಿತರು ತುಂಗಭದ್ರಾ ನದಿಯಿಂದ 'ದೇವರ ಅಭಿಷೇಕಕ್ಕಾಗಿ' ಬಿಂದಿಗೆ ಸೇವೆಯನ್ನು ಪ್ರಾರಂಭಿಸುತ್ತಾರೆ. ದೀವಟಿಗೆಯ ಬೆಳಕಿನಲ್ಲಿ ದೇವಾಲಯದ ವಾದ್ಯಗಾರರ ಮಂಗಲ ನಾದದೊಂದಿಗೆ ಪುರೋಹಿತರು ಕನಕಗಿರಿ ಗೋಪುರದ ಮೂಲಕ ತುಂಗಭದ್ರೆಯ ತಟಕ್ಕೆ ತೆರಳುತ್ತಾರೆ. ಭಕ್ತಿಭಾವದಿಂದ ಬಿಂದಿಗೆಯಲ್ಲಿ ಪವಿತ್ರಜಲವನ್ನು ಸಂಗ್ರಹಿಸಿಕೊಂಡು ಪೂರ್ವದಿಕ್ಕಿನ ಮಹಾದ್ವಾರದ ಮೂಲಕ ದೇವಾಲಯಕ್ಕೆ ಆಗಮಿಸುತ್ತಾರೆ.

ಬಿಂದಿಗೆ ಜಲದಿಂದ ವಿರೂಪಾಕ್ಷ ಲಿಂಗಕ್ಕೆ ಅಭಿಷೇಕ ನಡೆಯುತ್ತದೆ. ಇದೇ ವೇಳೆಗೆ ಇತರ ಪುರೋಹಿತರು ದೇವಾಲಯದ ಆವರಣದೊಳಗಿನ ಬಾವಿಯಿಂದ ಜಲವನ್ನ ಸಂಗ್ರಹಿಸಿ ದೇವಾಲಯದ ಉಪಗುಡಿಗಳ ಎಲ್ಲಾ ದೇವತಾ ಮೂರ್ತಿಗಳಿಗೆ ಅಭಿಷೇಕ ನೆರವೇರಿಸುತ್ತಾರೆ.

**ನಂದಾದೀಪ ಬೆಳಗುವುದು :**

ಬೆಳಗಿನ ಅಭಿಷೇಕದ ನಂತರ ದೇವ ಸನ್ನಿಧಿಯಲ್ಲಿ ನಂದಾ ದೀಪವನ್ನು ಬೆಳಗಿ ಆ ಬೆಳಕಿನಲ್ಲಿ ದೇವರನ್ನು ಕಾಣುವುದು ಮತ್ತು ದೈವಿ ಚೇತನವು ಬೆಳಕಿನೋಪಾದಿಯಲ್ಲಿ ಹೊರಸೂಸುತ್ತದೆಂಬ ಭಾವನೆಯನ್ನು ಹೊಂದಿದ ಆಚರಣೆಯೇ ನಂದಾದೀಪ ಆಚರಣೆ.

ಹಂಪಿ ವಿರೂಪಾಕ್ಷ ದೇವಾಲಯದ ಗರ್ಭಗೃಹ, ಅಂತರಾಳ, ನವರಂಗ ಮತ್ತು ಆವರಣದೊಳಗಿನ ಪಂಪಾದೇವಿ, ಭುವನೇಶ್ವರಿ, ನವಗೃಹ, ಆಂಜನೇಯ, ಚಂಡಿಕೇಶ್ವರ ದೇವಾಲಯಗಳಲ್ಲೆಲ್ಲಾ ನಂದಾದೀಪವನ್ನು ಬೆಳಗಿಸಲಾಗುತ್ತದೆ.

**ಮೊದಲ ಪೂಜೇ ಗಣಪನಿಗೆ :**

ವಿರೂಪಾಕ್ಷ ಸಹಿತ ಎಲ್ಲ ದೇವರುಗಳಿಗೆ ನಂದಾದೀಪ ಬೆಳಗಿದ ನಂತರ ಪೂಜಾ ಪ್ರಕ್ರಿಯೆಗಳು ಪ್ರಾರಂಭವಾಗುತ್ತವೆ. ಶಾಸ್ತ್ರದಂತೆ ಅಗ್ರಪೂಜೆ ಗಣಪತಿಗೆ ಸಲ್ಲಬೇಕು. ಅಂತೆಯೇ ಇಲ್ಲಿ ಕೂಡ ವರದ ಗಣಪತಿಯ ಪೂಜೆಯೊಂದಿಗೆ ಪ್ರಾರಂಭವಾಗುತ್ತದೆ. ಅಭಿಷೇಕದ ನಂತರ ವಿನಾಯಕನನ್ನು ಗಂಧ, ಪುಷ್ಪಗಳಿಂದ ಪೂಜಿಸಿ ಅಲಂಕರಿಸಲಾಗುತ್ತದೆ. ನಂತರ ಕ್ರಮವಾಗಿ ಚಾಮುಂಡಿ, ಆಂಜನೇಯ, ಸೂರ್ಯನಾರಾಯಣ ದೇವರುಗಳ ಪೂಜೆಯನ್ನು ಒಬ್ಬ ಪುರೋಹಿತರು ನೆರವೇರಿಸುತ್ತಾರೆ.

**ಮುಖ್ಯ ಪೂಜೆ ವಿರೂಪಾಕ್ಷನಿಗೆ :**

ಸುಪ್ರಭಾತ ಸಮಯ, ಮದ್ಯಾಹ್ನ ಮತ್ತು ಸಂಜೆ ಹೀಗೆ ತ್ರಿಕಾಲದಲ್ಲಿ ವಿರೂಪಾಕ್ಷ ಲಿಂಗಕ್ಕೆ ಮುಖ್ಯ ಪೂಜೆ ಜರುಗುತ್ತದೆ. ಮುಖ್ಯ ಪುರೋಹಿತನ ಜೊತೆಗೆ ಹಲವಾರು ಪರಿಣಿತ ಪುರೋಹಿತರು ಇವನ್ನು ನೆರವೇರಿಸುತ್ತಾರೆ. ಪೂಜಾ ಸಮಯದಲ್ಲಿ ಪುರೋಹಿತರು ವಿರೂಪಾಕ್ಷ ಅಷ್ಟೋತ್ತರ ನಾಮಾವಳಿಯನ್ನು ವೇದ ಮಂತ್ರಗಳನ್ನು ನಿರಂತರವಾಗಿ ಪಠಿಸುತ್ತಿರುತ್ತಾರೆ.

ಪುರೋಹಿತರು ಗರ್ಭಗೃಹವನ್ನು ಸ್ವಚ್ಛಗೊಳಿಸಿದ ನಂತರ ಪ್ರಾಣ ಪ್ರತಿಷ್ಠಾಪನದೊಂದಿಗೆ ಪೂಜೆ ಪ್ರಾರಂಭಗೊಳ್ಳುತ್ತದೆ. ಅಷ್ಟದಿಕ್ಪಾಲಕರಿಗೂ ಪೂಜೆ ನೆರವೇರುತ್ತದೆ. ನಂತರ ಹಾಲು, ಸಕ್ಕರೆ, ಜೇನು, ತುಪ್ಪ

ಮತ್ತು ಮೊಸರಿನಿಂದ ಲಿಂಗಕ್ಕೆ ಪಂಚಾಮೃತ ಅಭಿಷೇಕ. ಅಭಿಷೇಕದ ನಂತರ ಜಲದಿಂದ ಲಿಂಗವನ್ನು ತೊಳೆದು ಶ್ರೀಗಂಧವನ್ನು ಲೇಪಿಸಿ ವಿವಿಧ ಪುಷ್ಪ ಪಾತ್ರೆಗಳಿಂದ, ಮಾಲೆಗಳಿಂದ ಶೃಂಗರಿಸಲಾಗುತ್ತದೆ.

ಜಾತ್ರೆ ಮತ್ತು ವಿಶೇಷ ಸಂದರ್ಭಗಳಲ್ಲಿ ಬಂಗಾರದ ಮುಖವಾಡ ಹಾಗೂ ಆಭರಣಗಳಿಂದ ವಿರೂಪಾಕ್ಷನನ್ನು ಅಲಂಕರಿಸುತ್ತಾರೆ. ನಂತರ ಆರತಿ ಎತ್ತಿ ಅಕ್ಕಿ, ಹಣ್ಣು ಮತ್ತು ಸಿಹಿಯ ಭಕ್ಷ್ಯವನ್ನು ಸಮರ್ಪಿಸಲಾಗುತ್ತದೆ.

**ನೈವೇದ್ಯ :**

ಮುಖ್ಯ ಪೂಜೆಯ ನಂತರ ವಿರೂಪಾಕ್ಷ ಸಹಿತ ದೇವಾಲಯದ ಎಲ್ಲ ದೇವತೆಗಳಿಗೆ ನೈವೇದ್ಯ ಸಮರ್ಪಣೆ ನೆರವೇರುತ್ತದೆ. ಅಕ್ಕಿಯಿಂದ ಮಾಡಿದ ನೈವೇದ್ಯವನ್ನು ವಿರೂಪಾಕ್ಷನಿಗೆ ಮೊದಲು ಸಮರ್ಪಿಸಿದ ನಂತರ ಅರ್ಚಕರು ಸಹಾಯಕರೊಂದಿಗೆ ಆವರಣಕ್ಕೆ ತೆರಳುತ್ತಾರೆ. ವಾದ್ಯಮೇಳದೊಂದಿಗೆ ಪಂಜಿನ ಬೆಳಕಿನಲ್ಲಿ ಎಲ್ಲ ದೇವಾಲಯಗಳಿಗೂ ನೈವೇದ್ಯ ಸಮರ್ಪಿಸಲಾಗುತ್ತದೆ.

**ಬಲಿಪೂಜಾ :**

ದೇವಾಲಯದ ಪ್ರದಕ್ಷಿಣಾ ಪಥ ಸುತ್ತಲಿನ ಆವರಣದ ವಿವಿಧ ವೇದಿಕೆಯಲ್ಲಿ ಬಲಿಪೂಜೆಯನ್ನು ನೆರವೇರಿಸಲಾಗುತ್ತದೆ. ನೈವೇದ್ಯದಂತೆ ಈ ಸಂದರ್ಭದಲ್ಲಿ ವಾದ್ಯಗಾರರು ಪಂಜು ಸೇವಕರು ಇರುತ್ತಾರೆ.

**ಪಾದುಕಾ ಸೇವೆ :**

ಬಲಿಪೂಜೆಯ ನಂತರ ಪಾದುಕಾ ಸೇವೆ ಪ್ರಾರಂಭವಾಗುತ್ತದೆ. ವಿಜಯನಗರದ ಸ್ಥಾಪನೆಗೆ ಆಶೀರ್ವಾದಿಸಿದ ಶ್ರೀ ವಿದ್ಯಾರಣ್ಯರಿಗೆ ಗೌರವ ಸಲ್ಲಿಸುವುದಕ್ಕಾಗಿ ಸಾಂಕೇತಿಕವಾದ ಅವರ ಬೆಳ್ಳಿ ಪಾದುಕೆಗಳ ಪೂಜೆ ಇದಾಗಿದೆ. ಗರ್ಭಗೃಹದಲ್ಲಿರುವ ಈ ಪಾದುಕೆಗಳನ್ನು ರಂಗಮಂಟಪಕ್ಕೆ ತಂದು ಬೆಳ್ಳಿಯ ತಟ್ಟೆಯಲ್ಲಿರಿಸಿ ಪಲ್ಲಕ್ಕಿಯಲ್ಲಿ ಇಡಲಾಗುತ್ತದೆ.

ದೀವಟಿಗೆ, ಸಕಲ ವಾದ್ಯಮೇಳದೊಂದಿಗೆ ದೀಪಸ್ತಂಭದಿಂದ ಪಲ್ಲಕ್ಕಿ ಹೊರಡುತ್ತದೆ. ಅರ್ಚಕರ ಮಂತ್ರ ಘೋಷದೊಂದಿಗೆ ದೇವಾಲಯಕ್ಕೆ ಮೂರುಭಾರಿ ಪ್ರದಕ್ಷಿಣೆ ಹಾಕಲಾಗುತ್ತದೆ. ತದನಂತರ ಪಲ್ಲಕ್ಕಿಯನ್ನು ರಂಗಮಂಟಪಕ್ಕೆ ತಂದು ಮಂಗಳಾರತಿ ಬೆಳಗಿ ಪಾದುಕೆಗಳನ್ನು ಪುನಃ ಗರ್ಭಗೃಹದಲ್ಲಿರಸಲಾಗುತದೆ.

**ಏಕಾಂತ ಸೇವೆ :**

ಪಾದುಕಾ ಸೇವೆಯ ನಂತರ ಪ್ರತಿ ಮಂಗಳವಾರ ಹಾಗೂ ಶುಕ್ರವಾರಗಳಂದು ಏಕಾಂತ ಸೇವೆಯನ್ನು ನೆರವೇರಿಸಲಾಗುತ್ತದೆ. ಆದಿಶೇಷ ದೇವಾಲಯದಲ್ಲಿರುವ ಪಂಪಾಪತಿ ಹಾಗೂ ಪಂಪಾಂಬಿಕೆಯರ ವಿಗ್ರಹಗಳನ್ನು ಉತ್ಸವದಲ್ಲಿ ಮೆರವಣಿಗೆ ಕೊಂಡೊಯ್ಯಲಾಗುತ್ತದೆ. ಈ ಸಂದರ್ಭದಲ್ಲಿ ಅನೇಕ ಭಕ್ತಾದಿಗಳು ಶ್ರದ್ಧೆ ಭಕ್ತಿಯಿಂದ ಉತ್ಸವದಲ್ಲಿ ಭಗಿಗಳಾಗುತ್ತಾರೆ.

**ಗಿರಿ ಪ್ರದಕ್ಷಿಣೆ :**

ವರ್ಷದಲ್ಲಿ ಎರಡು ಬಾರಿ ಗಿರಿ 'ಪ್ರದಕ್ಷಿಣೆ' ಉತ್ಸವನ್ನು ಆಚರಿಸಲಾಗುತ್ತದೆ. ಮಕರ ಸಂಕ್ರಾಂತಿಯ ದಿನ ಹಾಗೂ ವೈಶಾಖ ಶುದ್ಧ ಪೂರ್ಣಿಮೆಯ ದಿನಗಳಂದು ಈ ಉತ್ಸವ ನೆರವೇರುತ್ತದೆ.

ಬಲಿ ಪೂಜೆಯ ನಂತರ ವಿರೂಪಾಕ್ಷ ಹಂಪಮ್ಮರ ವಿಗ್ರಹಗಳನ್ನು ಮೆರವಣಿಗೆಯ ಮೂಲಕ ಕೊಂಡೊಯ್ದು ವಿರೂಪಾಕ್ಷಪುರದಲ್ಲಿ ಸಂಚರಿಸಲಾಗುತ್ತದೆ. ಅರ್ಚಕರು, ವಾದ್ಯಮೇಳದವರು, ಪಂಜು ಸೇವೆಯವರೊಂದಿಗೆ ಹೊರಡುವ ಉತ್ಸವದಲ್ಲಿ ಅನೇಕ ಭಕ್ತಾದಿಗಳು ಕೂಡಿಸುತ್ತಾರೆ. ಅಲ್ಲಲ್ಲಿ ತೆಂಗಿನಕಾಯಿ ಸಮರ್ಪಿಸುತ್ತಾರೆ. ಗಿರಿ ಪ್ರದಕ್ಷಿಣೆಯ ನಂತರ ದೇವಾಲಯಕ್ಕೆ ಹಿಂದಿರುಗಿ ರಂಗಮಂಟಪದಲ್ಲಿ ಕೊನೆಗೊಳ್ಳುತ್ತದೆ. ನಂತರ ಭಕ್ತಾದಿಗಳು ಹಣ್ಣು ಕಾಯಿ ಸಮರ್ಪಿಸುತ್ತಾರೆ.[೨೨]

**ಫಲ ಪೂಜಾ :**

ವಿರೂಪಾಕ್ಷ ದೇವಾಲಯದಲ್ಲಿ ನೆರವೇರುವ ಪ್ರಮುಖ ಪೂಜೆಗಳಲ್ಲಿ ಇದು ಮಹತ್ವದ್ದಾಗಿದೆ. ಪ್ರತಿವರ್ಷದ ಮಾಘಮಾಸದಲ್ಲಿ ೪ ದಿನಗಳ ಕಾಲ ಉತ್ಸವ ನೆರವೇರುತ್ತದೆ. ಮಾಘ ಶುದ್ಧ ಚತುರ್ದಶಿಯಂದು ಪಂಪಾದೇವಿ ಮತ್ತು ಪಂಪಾಪತಿಯರ ವಿಗ್ರಹಗಳನ್ನು ಫಲಪೂಜಾ ಮಂಟಪದಲ್ಲಿರಿಸಿ ಭಕ್ತಾದಿಗಳ ದರ್ಶನ, ಪೂಜೆಗೆ ಅನುವು ಮಾಡಿಕೊಡಲಾಗುತ್ತದೆ.

ಪೂರ್ಣಿಮೆ (ಹುಣ್ಣಿಮೆ) ರಾತ್ರಿಯಲ್ಲಿ ವಿಗ್ರಹವನ್ನು ಪಲ್ಲಕ್ಕಿಯಲ್ಲಿರಿಸಿ ದೇವಾಲಯದ ಸುತ್ತೆಲ್ಲಾ ಮೆರವಣಿಗೆ ಹೊರಡಿಸಲಾಗುತ್ತದೆ. ಕನಕಗಿರಿ ಗೋಪುರದ ಮೂಲಕ ಸಾಗುವ ಮೆರವಣಿಗೆ ಐದುಬಾರಿ ಮನ್ಮಥ ಹೊಂಡಕ್ಕೆ ಪ್ರದಕ್ಷಿಣೆ ಹಾಕಿ ರಥ ಬೀದಿಗೆ ತೆರಳುತ್ತದೆ. ಅಲ್ಲಿಂದ ಹಿಂದಿರುಗಿದ ನಂತರ ವಿಗ್ರಹಗಳನ್ನು ಫಲಪೂಜಾ ಮಂಟಪದಲ್ಲಿ ಕೂರಿಸಲಾಗುತ್ತದೆ.

ಹುಣ್ಣಿಮೆಯ ಮೂರನೆಯ ದಿನವೂ ಕೂಡ ವಿಗ್ರಹಗಳನ್ನು ಪಲ್ಲಕ್ಕಿಯಲ್ಲಿರಿಸಿ ದೇವಾಲಯದ ಸುತ್ತಲೂ ಮೆರವಣಿಗೆಯ ಮೂಲಕ ಕೊಂಡೊಯ್ಯಲಾಗುತ್ತದೆ. ಹಿಂದಿರುಗಿದ ನಂತರ ವಿಗ್ರಹಗಳನ್ನು ಫಲಪೂಜಾಮಂಟಪದಲ್ಲಿರಿಸಿ ಕುಂಕುಮಾರ್ಚನೆ ನೆರವೇರಿಸಲಾಗುತ್ತದೆ.

ಶುಕ್ರವಾರದ ದಿನದಂದು ದೇವಾಲಯದ ಉಳಿದ ಎಲ್ಲ ದೇವತೆಗಳಿಗೂ ಈ ಸೇವೆ ಸಲ್ಲುತ್ತದೆ. ದೇವಾಲಯದ ಪ್ರಧಾನ ಅರ್ಚಕರು ದೀವಟಿಗೆ ವಾದ್ಯ ಮೇಳದೊಂದಿಗೆ ತೆರಳಿ ದುರ್ಗಾದೇವಿ, ಚಾಮುಂಡೇಶ್ವರಿ, ಲಕ್ಷ್ಮೀ, ವೆಂಕಟೇಶ್ವರ, ಶಾರದಾ ದೇವಿಯವರಿಗೆ ಕಾಯಿ (ತೆಂಗಿನ) ಮತ್ತು ಕುಂಕುಮವನ್ನು ಸಮರ್ಪಿಸುತ್ತಾರೆ. ದುರ್ಗಾದೇವಿ ಮತ್ತು ಪಂಪಾದೇವಿಯ ದರ್ಶನದೊಂದಿಗೆ ಈ ಸೇವೆ ಕೊನೆಗೊಳ್ಳುತ್ತದೆ.

ಹುಣ್ಣಿಮೆಯ ನಾಲ್ಕನೆಯ ದಿನದ ಸೇವೆ ವಿಶೇಷವಾಗಿರುತ್ತದೆ. ವಿದ್ಯಾರಣ್ಯ ಶ್ರೀಗಳ ಅನುಮತಿಯನ್ನು ಪಡೆದು ದೇವಸ್ಥಾನ ವಿಶ್ವಸ್ಥ ಮಂಡಳಿಯ ಇಬ್ಬರು ಸದಸ್ಯರನ್ನು ಆಹ್ವಾನಿಸಲಾಗುತ್ತದೆ. ವಿರೂಪಾಕ್ಷ, ಪಂಪಾದೇವಿಯರ ಉತ್ಸವ ಮೂರ್ತಿಗಳನ್ನು ವಸ್ತ್ರ ಹೂಗಳಿಂದ ಅಲಂಕೃತವಾದ ಛತ್ರ ಚಾಮರಗಳಿಂದ ಜೊತೆಗೂಡಿಸಿದ ಪಲ್ಲಕ್ಕಿಯಲ್ಲಿ ಇರಿಸಲಾಗುತ್ತದೆ.

ಪಲ್ಲಕ್ಕಿಯನ್ನು ದೇವಾಲಯದ ಸುತ್ತಲೂ ಪ್ರದಕ್ಷಿಣೆಗಾಗಿ ನಂತರ ವಿರೂಪಾಕ್ಷ ಬಝಾರ್‌ನಲ್ಲಿ ಕೊಂಡೊಯ್ಯಲಾಗುತ್ತದೆ. ಬಝಾರ್‌ದಲ್ಲಿ ಅರ್ಧದಾರಿಯವರೆಗೆ ಮಾತ್ರ ತೆರಳಿದ ಪಲ್ಲಕ್ಕಿ ಅಲ್ಲಿಂದ ಹಿಂತಿರುಗುತ್ತದೆ.

ಪಲ್ಲಕ್ಕಿಯ ಮುಂದೆ ದೀವಟಿಗೆಯವರು, ವಾದ್ಯಮೇಳದವರಿರುತಾರೆ. ಮೆರವಣಿಗೆಯ ಮೂಲಕ ತೆರಳಿ ಅರ್ಚಕರು ವಿದ್ಯಾರಣ್ಯ ಸ್ವಾಮಿ ದೇವಾಲಯಕ್ಕೆ ತೆರಳಿ ಅನುಮತಿಯನ್ನು ಪಡೆಯುತ್ತಾರೆ. ನಂತರ

ಮೆರವಣಿಗೆ ವಿಶ್ವಸ್ಥ ಮಂಡಳಿಯ ಕಾರ್ಯಾಲಯಕ್ಕೆ ತೆರಳಿ ಕಾರ್ಯಕಾರಿ ಸದಸ್ಯರು ಆಹ್ವಾನಿಸಿ ಅವರನ್ನು ಮೆರವಣಿಗೆಯ ಜೊತೆ ಕರೆದುಕೊಂಡು ಬರಲಾಗುತ್ತದೆ. ಪಾಲಕಿ ಪ್ರದಕ್ಷಿಣಾ ಪಥದಲ್ಲಿ ಹಾದು ಆದಿಕೇಷ ಗುಡಿಯನ್ನು ತಲುಪುತ್ತದೆ. ಅಲ್ಲಿ ಏಕಾಂತ ಸೇವೆಯನ್ನು ಮಾಡಿ ಆರತಿ ಎತ್ತಲಾಗುತ್ತದೆ. ನಂತರ ಪ್ರಸಾದವನ್ನು ಭಕ್ತಾದಿಗಳಿಗೆ ಹಂಚುತ್ತಾರೆ. ನಂತರ ದೇವ ದೇವತೆಯನ್ನು ಮೆರವಣಿಗೆಯ ಮೂಲಕ ಶಯನೋತ್ಸವ ಮಂಟಪಕ್ಕೆ ಕೊಂಡೊಯ್ದು ಅಲ್ಲಿ ಇರಿಸಲಾಗುತ್ತದೆ. ಇದು ಪ್ರತಿದಿನದ ಕೊನೆಯ ಆಚರಣೆಯಾಗಿರುತ್ತದೆ. ಫಲಪೂಜಾ ಉತ್ಸವಕ್ಕೆ ವಿಶೇಷ ಮಹತ್ವವಿದ್ದು ಹಂಪಿ ಪರಿಸರದಲ್ಲಿ "ಪಾಪಿಗೆ ಹಂಪಿ ಜಾತ್ರೆ ಪುಣ್ಯವಂತರಿಗೆ ಫಲಪೂಜೆ" ಎಂಬ ಜಾಣ್ನುಡಿ ಪ್ರಚಲಿತವಿದ್ದು, ಫಲಪೂಜೆಯು ಮಹತ್ವವನ್ನು ಬಿಂಬಿಸುತ್ತದೆ.[೫೬]

ಹಂಪಿಯ ವಿರೂಪಾಕ್ಷನಿಗೆ ಸಂಬಂಧಿಸಿದಂತೆ ನೆಡೆಯುವ ವಿಶಿಷ್ಟ ಆಚರಣೆಗಳಲ್ಲಿ ಫಲಪೂಜೆಯು ಅತಿ ಪ್ರಮುಖವಾದುದು. ಡಿಸೆಂಬರ್ ತಿಂಗಳ ಮೊದಲ ಅಥವಾ ಎರಡನೇ ವಾರದಲ್ಲಿ ಹಂಪಿಯಲ್ಲಿ ಒಡೆಯ ಪಂಪಾಪತಿ ಒಡತಿ ಹಂಪಮ್ಮ ಅಥವಾ ಪಂಪಾಂಬಿಕೆಗೆ ಸಂಬಂಧಿಸಿದ ಈ ಆಚರಣೆಗೆ ಮೂಲವಾಗಿರುವುದು ದಕ್ಷಬ್ರಹ್ಮನ ಕತೆಯೆಂದು ಜನರು ಅಭಿಪ್ರಾಯಪಡುತ್ತಾರೆ.

ದಕ್ಷನ ಯಜ್ಞಕುಂಡದಲ್ಲಿ ಬಿದ್ದು ಸತ್ತ ದಾಕ್ಷಾಯಿಣಿಯು ಪರ್ವತರಾಜನ ಮಗಳಾಗಿ ಹುಟ್ಟುತ್ತಾಳೆ. ಆಕೆ ಪ್ರಾಪ್ತವಯಸ್ಕಳಾದಾಗ ಶಿವ ಆಕೆಯನ್ನು ವಿವಾಹಕ್ಕಾಗಿ ಕೇಳಲು ಹೋಗುತ್ತಾನೆ. ಪುರಾಣದ ಈ ಭಾಗವೇ ಫಲಪೂಜೆಯಲ್ಲಿ ಪುನರ್ ಸೃಷ್ಟಿಯಾಗಿದೆ.

ಗಂಡಿನ ಕಡೆಯವರು ಹೆಣ್ಣು ಕೇಳಲು ಹೋಗುವಾಗ ಏನೇನು ಆಚರಣೆಗಳನ್ನು ಮಾಡುತ್ತಾರೋ ಅವೆಲ್ಲವನ್ನು ಫಲಪೂಜೆಯಲ್ಲಿ ಮಾಡುವರು. ಮೊದಲು ಶುಭದಿನವನ್ನು ನಿಗದಿಪಡಿಸಲಾಗುತ್ತದೆ. ಆ ದಿನದಂದು ಪಂಪಾಪತಿಯನ್ನು ಸ್ನಾನ ಮಾಡಿಸಿ, ಹೊಸ ಉಡುಪು ಧರಿಸಿ, ಅವನನ್ನು ಮೆರವಣಿಗೆಯಲ್ಲಿ ಹಂಪಿ ಹೊಳೆಯ ದಂಡೆಯಲ್ಲಿರುವ ಕೋದಂಡರಾಮ ದೇವಸ್ಥಾನದ ಅಂಗಣಕ್ಕೆ ಕರೆದೊಯ್ಯುತ್ತಾರೆ. ಈ ಸಂದರ್ಭದಲ್ಲಿ ಪಂಪಾಪತಿಯ ಪರವಾಗಿ ಐದು ಜನ ಬ್ರಾಹ್ಮಣ ಪೂಜಾರಿಗಳು ದೀಕ್ಷೆ ವಹಿಸಿರುತ್ತಾರೆ. ಕೋದಂಡರಾಮ ದೇವಸ್ಥಾನದಲ್ಲಿ ಪಂಪಾಂಬಿಕೆಯ ಪರವಾಗಿ ಐದು ಜನ ಬ್ರಾಹ್ಮಣ ಪೂಜಾರಿಗಳೇ ಇರುತ್ತಾರೆ. ದೇವಸ್ಥಾನದ ಅಂಗಣದಲ್ಲಿ ಎರಡೂ ಕಡೆಯವರು ಪರಸ್ಪರ ಭೇಟಿ ಮಾಡಿ ವೀಳ್ಯ ಕೊಟ್ಟು ಪಂಪಾಂಬಿಕೆ-ಪಂಪಾಪತಿಯವರ ನಡುವೆ ಮದುವೆ ನಿಶ್ಚಿತಾರ್ಥ ನಡೆಸುತ್ತಾರೆ. ಆಗ ಎರಡೂ ತಂಡಗಳ ನಡುವೆ ನಡೆಯುವ ಮಾತುಕತೆಯ ಒಂದು ಭಾಗ ಇಂತಿದೆ:

ಗಂಡಿನ ಕಡೆಯವರು : ನೋಡ್ರಪ್ಪ ಹಂಪಮ್ಮನ ಕಡೆಯೋರೆ ನಮ್ಮ ಪಂಪಾಪತಿಗೆ ಮುಕ್ಕಣ್ಣ ಶ್ರೇಷ್ಠ ಭೂಪಾಲನಿಗೆ ನಿಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿ ಅಂತ ಕೇಳ್ತಿದ್ವೀವಿ. ಆತ ನಿಮ್ಮ ಮಗಳನ್ನು ಒಪ್ಪಿಕೊಂಡಿದ್ದಾನೆ. ನಿಮ್ಮ ಅಭಿಪ್ರಾಯವೇನು?

ಹೆಣ್ಣಿನ ಕಡೆಯವರು : ಹೋಗ್ರಿ ಸ್ವಾಮಿ, ಮಲ್ಕಳಕ ಮನಿ ಇಲ್ಲ, ಒದಿಯಾಕ ಕಂಬ್ಳಿಲ್ಲ, ವರಾಕ ಕುಡಿಲಿಲ್ಲ. ನಮ್ಮ ಪಂಪಮ್ಮನ್ನ ಅಂತಾರಗೆಲ್ಲ ಕೊಟ್ಟು ಹ್ಯಾಗ ಮದುವಿ ಮಾಡಾದು? ಸಾಧ್ಯವಿಲ್ಲ.

ಗಂಡಿನ ಕಡೆಯವರು : ನಮ್ಮ ಗಂಡ್ಮಗನಿಗೆ ಏನೂ ಇಲ್ಲಾಂತ ಹೇಳರೇನು ನೋಡ್ರಿ ಬಂಗಾರ ಗಟ್ಟಿ ಹೇಮಕೂಟ ಕೊಡ್ತೀವಿ. ಬೆಳ್ಳಿ ಬಸವನ್ ಕೊಡ್ತೀವಿ. ನೀವು ಏನೇ ಕೇಳಿದ್ರೂ ಕೊಡ್ತೀವಿ ನಿಮ್ಮ ಮಗಳ ಒಪ್ಪಿಗೆ ಕೇಳಿ.

ಹೆಣ್ಣಿನ ಕಡೆಯವರು : ನೋಡಮ್ಮ ಹಂಪಮ್ಮ, ಪಂಪಾಪತಿ ಬಹಳ ಶ್ರೀಮಂತನಂತೆ ಬೆಳ್ಳಿ ಬಸವ, ಬಂಗಾರದ ಗಟ್ಟಿ ಹೇಮಕೂಟ ಕೊಡ್ತಾರಂತೆ ನಿಮ್ಮ ಅಭಿಪ್ರಾಯ ಏನಮ್ಮ?

ಹೀಗೆ ಸುಮಾರು ಮೂರು ನಾಲ್ಕು ಗಂಟೆಗಳವರೆಗೆ ಚರ್ಚೆ ನಡೆಯುತ್ತದೆ. ಮುಂಜಾವವಾಗುತ್ತಲೆ ಎರಡೂ ಕಡೆಯವರು ಪರಸ್ಪರ ಒಪ್ಪಂದಕ್ಕೆ ಬಂದು ಪರಸ್ಪರ ವೀಳ್ಯ ಕೊಟ್ಟು, ಮದುವೆ ದಿನ ನಿರ್ಧಾರ ಮಾಡುತ್ತಾರೆ. ಅದನ್ನು ಅಲ್ಲಿ ಸೇರಿದ ಜನರಿಗೆ ಸಾರುತ್ತಾರೆ. ಆಗ ಜನರು ದೇವರ ಮದುವೆಗೆ ಮುಯ್ಯಿ ಹಣ ನೀಡುತ್ತಾರೆ. ಕೊನೆಗೆ ಎಲ್ಲರೂ ವಿರೂಪಾಕ್ಷನ ಗುಡಿಗೆ ಹಿಂದಿರುಗಿ ಬರುತ್ತಾರೆ. ಅದೇ ದಿನ ತೆಪ್ಪೋತ್ಸವ ನಡೆಯುತ್ತದೆ.[೫೭]

**ಡೋಲೋತ್ಸವ (ಉಯ್ಯಾಲೋತ್ಸವ)**

ಡೋಲೋತ್ಸವವನ್ನು ವಾರದಲ್ಲಿ ಸೋಮವಾರ ಮತ್ತು ಶುಕ್ರವಾರ ೨ ಬಾರಿ ನಡೆಸಲಾಗುತ್ತದೆ. ಉತ್ಸವ ಮೂರ್ತಿಗಳನ್ನು ರಂಗಮಂಟಪದ ಉಯ್ಯಾಲೆಯಲ್ಲಿ ಇರಿಸಲಾಗುತ್ತದೆ. ಪಾದುಕಾ ಸೇವೆ, ಏಕಾಂತ ಸೇವೆಯ ನಂತರ ವಿದ್ಯಾರಣ್ಯರ ಮತ್ತು ದೇವಸ್ಥಾನ ವಿಶ್ವಸ್ಥ ಮಂಡಳಿಯ ಅನುಮತಿಯ ಮೇರೆಗೆ ದೇವತೆಯನ್ನು ಉಯ್ಯಾಲೆಯಲ್ಲಿರಿಸಿ ಅರ್ಚಕರು ತೂಗುತ್ತಾರೆ. ಈ ಸಂದರ್ಭದಲ್ಲೂ ಕೂಪಾ ವಾದ್ಯ ಮೇಳದವರು, ದೀವಟಿಗೆಯವರು ಉಪಸ್ಥಿತರಿರುತ್ತಾರೆ. ನಂತರ ದೇವರುಗಳನ್ನು ಏಕಾಂತಸೇವೆ ಹಾಗೂ ಭಕ್ತಾದಿಗಳ ದರ್ಶನಕ್ಕಾಗಿ ಆದಿಶೇಷ ಮಂಟಪದಲ್ಲಿ ಇರಿಸಲಾಗುತ್ತದೆ.

**ಮಾಘ ಬಹುಳ ಬಿದಿಗೆ ಪೂಜಾ :**

ಮಾಘ ಮಾಸದ ಬಹುಳ ಬಿದಿಗೆಯ ದ್ವಿತೀಯ ದಿನದಂದು ಈ ಪೂಜೆ ನೆರವೇರಿಸಲಾಗುತ್ತದೆ. ಪಂಪಾಪತಿ ಮತ್ತು ಪಂಪಾದೇವಿಯರ ಉತ್ಸವ ಮೂರ್ತಿಗಳನ್ನು ವಾದ್ಯಮೇಳ, ದೀವಟಿಗೆಯವರೊಂದಿಗೆ ಎಲ್ಲ ಅರ್ಚಕರು ಸೇರಿ ಕೋದಂಡರಾಮ ದೇವಾಲಯದ ಮುಂದಿನ ನದಿಗೆ ಕೊಂಡೊಯ್ಯುತ್ತಾರೆ. ಅಲ್ಲಿ ಉತ್ಸವ ಮೂರ್ತಿಗಳಿಗೆ ಸುರುಗಿನೀರು ಹುಯ್ಯಲಾಗುತ್ತದೆ. ವರದಕ್ಷಿಣೆ ಮುಂತಾದ ವಿವಾಹದ ಕಾರ್ಯಗಳನ್ನು ನಡೆಸುತ್ತಾರೆ. ಇಲ್ಲಿ ಒಂದು ಊರಿನವರು ಗಂಡಿನ ಮತ್ತೊಂದು ಊರಿನವರು ಹೆಣ್ಣಿನ ಕಡೆಯವರಾಗಿ ಮದುವೆಯ ಕೊಡು ಕೊಳ್ಳುವಿಕೆಯ ಸಂಬಂಧ ಚರ್ಚೆಗಳನ್ನು ನಡೆಸುತ್ತಾರೆ.

ಕೆಲವು ಸಲ ವಿದ್ಯಾರಣ್ಯ ಸ್ವಾಮಿಗಳು ತಮ್ಮ ಸಾಂಪ್ರದಾಯಿಕ ಉಡುಪಿನಲ್ಲಿ ಹಾಜರಿರುತ್ತಾರೆ. ನಂತರ ಉತ್ಸವ ಮೂರ್ತಿಗಳನ್ನು ದೇವಾಲಯಕ್ಕೆ ತಂದು ಭಕ್ತಾದಿಗಳ ದರ್ಶನಕ್ಕಾಗಿ ರಂಗಮಂಟಪದಲ್ಲಿ ಇರಿಸಲಾಗುತ್ತದೆ. ತದನಂತರ ಮೂರ್ತಿಗಳನ್ನು ಶಯನಮಂಟಪಕ್ಕೆ ಕೊಂಡೊಯ್ಯುತ್ತಾರೆ. ಅಲ್ಲಿಗೆ ಫಲಪೂಜಾ ಉತ್ಸವ ಕೊನೆಗೊಳ್ಳುತ್ತದೆ.

**ಕಲ್ಯಾಣೋತ್ಸವ :**

ದೇವಾಲಯದಲ್ಲಿ ಹಮ್ಮಿಕೊಳ್ಳಲಾಗುವ ಎಲ್ಲಾ ಹಬ್ಬಗಳ ಉತ್ಸವಗಳಲ್ಲಿಯೇ ಕಲ್ಯಾಣೋತ್ಸವ ಅತ್ಯಂತ ದೊಡ್ಡ ಉತ್ಸವವಾಗಿದೆ. ಇದು ಶುಕ್ಲ ಪಕ್ಷದ ೯ ನೇ ದಿನದಂದು ಆಚರಿಸಲ್ಪಡುತ್ತದೆ.

ಶುಕ್ಲಪಕ್ಷದ ನವಮಿಯಲ್ಲಿ (ರಾಮನವಮಿ) ಕಲ್ಯಾಣೋತ್ಸವ ನೆರವೇರುತ್ತದೆ. ದೇವಾಲಯದಲ್ಲಿರುವ ಶಿವನ ಆಯುಧ ತ್ರಿಶೂಲವನ್ನು ತೆಗೆದುಕೊಂಡು ದೇವಾಲಯದ ಸುತ್ತಲೂ ಪ್ರದಕ್ಷಿಣೆ ಹಾಕಲಾಗುತ್ತದೆ. ನಂತರ ದಿನದಲ್ಲಿ ಮೂರು ಬಾರಿ ಬಲಿಪೂಜೆಯನ್ನು ನಡೆಸಲಾಗುತ್ತದೆ.

**ದಶಮಿ :**

ದಶಮಿಯಂದು ನಿತ್ಯಪೂಜೆಯ ನಂತರ ಕಾಳಮ್ಮ ದೇವಾಲಯದ ವರೆಗೆ ಬಲಿಪೂಜೆಯನ್ನು ನೆರವೇರಿಸಲಾಗುತ್ತದೆ. ತ್ರಿಶೂಲವನ್ನು ಪಲ್ಲಕ್ಕಿಯಲ್ಲಿರಿಸಿ ಎರಡು ಬಾರಿ ಉತ್ಸವವನ್ನು ಆಚರಿಸಲಾಗುತ್ತದೆ. ಜೊತೆಗೆ ಡೋಲೋತ್ಸವ ಹಾಗೂ ಪಾದುಕಾ ಸೇವೆಗಳು ಕೂಡ ನಡೆಯುತ್ತವೆ.

**ಏಕಾದಶಿ :**

ಏಕಾದಶಿಯಂದು ಕೂಡ ನಿತ್ಯಪೂಜೆಯ ನಂತರ ರಥಬೀದಿಯ ವರೆಗೆ ಬಲಿಪೂಜಾ ಉತ್ಸವವನ್ನು ನಡೆಸಲಾಗುವುದು.

**ದ್ವಾದಶಿ :**

ದ್ವಾದಶಿಯಂದು ಬಲಿಪೂಜಾ ಉತ್ಸವವನ್ನು ರಥಬೀದಿಯಲ್ಲಿ ಮತ್ತಷ್ಟು ದೂರದ ವರೆಗೆ ನಡೆಸಲಾಗುವುದು. ತ್ರಯೋದಶಿಯಂದು ನಿತ್ಯದ ಪೂಜಾ ಆಚರಣೆಗಳ ನಂತರ ಬಲಿಪೂಜೆ ಮಾಡಿ ರಾತ್ರಿಯಲ್ಲಿ ಪಂಪಾದೇವಿ ಮತ್ತು ಪಂಪಾಪತಿಯವರ ಕಲ್ಯಾಣೋತ್ಸವವನ್ನು ಹಮ್ಮಿಕೊಳ್ಳುತ್ತಾರೆ. ಮಧ್ಯರಾತ್ರಿಯ ವರೆಗೂ ವಿವಾಹದ ಸಾಂಪ್ರದಾಯಿಕ ಪ್ರಕ್ರಿಯೆಗಳು ನೆರವೇರುತ್ತವೆ. ಕಲ್ಯಾಣೋತ್ಸವದ ನಂತರ ನವದಂಪತಿಗಳನ್ನು ಪಲ್ಲಕ್ಕಿಯಲ್ಲಿ ಕೂರಿಸಿ ದೇವಾಲಯದ ಸುತ್ತಲೂ ಮೆರವಣಿಗೆ ಮಾಡಿಸಲಾಗುತ್ತದೆ.

**ಚತುರ್ದಶಿ :**

ಚತುರ್ದಶಿಯಂದು ದಶಮಿಯಂದು ಹಮ್ಮಿಕೊಂಡಂತೆ ಪೂಜಾಉತ್ಸವವನ್ನು ಅನುಸರಿಸಲಾಗುವುದು. ಆದರೆ, ಬಲಿಪೂಜೆಯ ಉತ್ಸವವನ್ನು ರಥಬೀದಿಯಲ್ಲಿ ಮತ್ತಷ್ಟು ದೂರದ ವರೆಗೆ ನಡೆಸಲಾಗುತ್ತದೆ.

**ಪೂರ್ಣಿಮೆ (ಹುಣ್ಣಿಮೆ) :**

ಹುಣ್ಣಿಮೆಯಂದು ಜಾತ್ರಾ ಮಹೋತ್ಸವ ಸಂಭ್ರಮ ಸಡಗರಗಳ ಮಧ್ಯೆ ಜರುಗುತ್ತದೆ. ಬಲಿಪೂಜೆಯ ನಂತರ ವಿದ್ಯಾರಣ್ಯ ಸ್ವಾಮಿಗಳನ್ನು ರಥದಲ್ಲಿ ದೇವಾಲಯಕ್ಕೆ ಕರೆತರಲಾಗುತ್ತದೆ. ಶ್ರೀಗಳು ಬ್ರಹ್ಮೋತ್ಸವಕ್ಕೆ ಚಾಲನೆ ನೀಡುತ್ತಾರೆ.

ಸಂಜೆ ವೇಳೆಗೆ ರಥೋತ್ಸವಕ್ಕೆ ಸಿದ್ಧತೆಗಳಾಗುತ್ತವೆ. ಉತ್ಸವ ಮೂರ್ತಿಗಳನ್ನು ಪಲ್ಲಕ್ಕಿಯಲ್ಲಿ ತಂದು ಮುಖ್ಯ ರಥದಲ್ಲಿ ಪ್ರತಿಷ್ಠಾಪಿಸಲಾಗುತ್ತದೆ. ನಂತರ ನೆರೆದಿರುವ ಸಾವಿರಾರು ಭಕ್ತಾದಿಗಳು ರಥವನ್ನು ಎಳೆಯುತ್ತಾರೆ. ನಂತರ ಪುನಃ ಹಿಂದಕ್ಕೆ ತಂದು ನಿಲ್ಲಿಸುತ್ತಾರೆ. ಈ ಸಂದರ್ಭದಲ್ಲಿ ನೆರೆದಿದ್ದ ಭಕ್ತಸ್ತೋಮ ಚಲಿಸುವ ರಥಕ್ಕೆ ಬಾಳೆಹಣ್ಣು, ಉತ್ತತ್ತಿಗಳನ್ನು ಎಸೆಯುತ್ತಾರೆ.

ರಥವನ್ನು ಜಿನಗಾರರು ತಯಾರಿಸಿದ ಸುಂದರವಾದ ಮೂರ್ತಿಗಳಿಂದ ಅಲಂಕರಿಸಲಾಗಿರುತ್ತದೆ. ಕೆಳಗಿನ ಗಡ್ಡಿ ಅಥವಾ ಚಟ್ಮನ ಭಾಗವನ್ನು ಹೊರತುಪಡಿಸಿ ಮೇಲಿನ ಗೋಪುರವನ್ನು ಬಣ್ಣದ ಬಾವುಟ, ವಸ್ತ್ರಗಳಿಂದ ಅಲಂಕರಿಸಲಾಗಿರುತ್ತದೆ. ರಥೋತ್ಸವದಲ್ಲಿ ಬಲಿಪೂಜೆಗೆ ಮಹತ್ವವಿದೆ.

ರಥೋತ್ಸವದ ನಂತರ ಉತ್ಸವ ಮೂರ್ತಿಗಳನ್ನು ಯಜ್ಞಶಾಲೆಯಲ್ಲಿರಿಸಿ ಏಕಾಂತ ಸೇವೆಯನ್ನು ಸಲ್ಲಿಸಲಾಗುತ್ತದೆ.

ಪ್ರತಿಪದೆಯಂದು ನಿತ್ಯದ ಪೂಜೆಯ ಜೊತೆಗೆ ಬಲಿಪೂಜೆಯನ್ನು ನೆರವೇರಿಸಲಾಗುತ್ತದೆ. ಎರಡನೇ ದಿನ (ದ್ವಿತೀಯ)ದಂದು ವಿರೂಪಾಕ್ಷ ಬಜಾರಿನ ಎದುರು ನಂದಿಯವರೆಗೂ ಬಲಿಪೂಜೆಯ ಉತ್ಸವವನ್ನು ನೆರವೇರಿಸಲಾಗುತ್ತದೆ. ಫಲಪೂಜೆಯ ನಂತರ ಉತ್ಸವ ಮೂರ್ತಿಗಳನ್ನು ಕೋದಂಡ ರಾಮ ದೇವಾಲಯಕ್ಕೆ ಒಯ್ಯಲಾಗುತ್ತದೆ. ಅಂದು ರಾಮ, ಸೀತೆ ಮತ್ತು ಲಕ್ಷ್ಮಣರ ರಥೋತ್ಸವಗಳನ್ನು ಆಚರಿಸಲಾಗುತ್ತದೆ.



ರಾತ್ರಿ ದೇವಾಲಯದ ಪುಷ್ಕರಣಿಯಲ್ಲಿ ತೆಪ್ಪೋತ್ಸವವನ್ನು ನಡೆಸಲಾಗುತ್ತದೆ. ತದನಂತರ ಉತ್ಸವ ಮೂರ್ತಿಗಳನ್ನು ರಂಗಮಂಟಪದಲ್ಲಿರಿಸಿ ಡೋಲೋತ್ಸವ ಮತ್ತು ಏಕಾಂತ ಸೇವೆಗಳನ್ನು ಸಲ್ಲಿಸಲಾಗುತ್ತದೆ. ಅಂತಿಮವಾಗಿ ಅವುಗಳನ್ನು ಭುವನೇಶ್ವರಿ ಗುಡಿಯಲ್ಲಿ ಇರಿಸಲಾಗುತ್ತದೆ.

ಹಂಪಿಯ ವಿರೂಪಾಕ್ಷ ದೇವಾಲಯದ ಈ ರೀತಿಯ ಆಚರಣೆಗಳು ಮತ್ತು ಸಂಪ್ರದಾಯಗಳು ಹಂಪಿ ಪರಿಸರದ ಉಳಿದ ವಿರೂಪಾಕ್ಷ ದೇವಾಲಯದಲ್ಲಿ ಆಚರಣೆಯಲ್ಲಿದ್ದು ಸ್ವಲ್ಪ ಮಟ್ಟಿಗೆ ಸ್ಥಳೀಯ ನಂಬಿಕೆ, ಸಂಪ್ರದಾಯಗಳನ್ನು ಒಳಗೊಂಡಿದ್ದು, ಭಿನ್ನವೆನಿಸುತ್ತವೆ.

**ಹಿರೇಜಂತಕಲ್ ಪ್ರಸನ್ನ ಶ್ರೀ ಪಂಪಾವಿರೂಪಾಕ್ಷೇಶ್ವರ ದೇವಸ್ಥಾನದಲ್ಲಿ ವರ್ಷದುದ್ದಕ್ಕೂ ನಡೆಯುವ ಕೆಲ ವಿಶೇಷ ಧಾರ್ಮಿಕ ವಿಧಿ–ವಿಧಾನಗಳು :**

**ಶಿವರಾತ್ರಿ ಆಚರಣೆ** : ಪ್ರತಿವರ್ಷ ಮಾಘಮಾಸದ ಕೃಷ್ಣಪಕ್ಷದಲ್ಲಿ ಮಹಾಶಿವರಾತ್ರಿ ಆಚರಣೆ ನಡೆಸಲಾಗುವುದು. ರಾತ್ರಿ ವಿಶೇಷ ಯಾಮಪೂಜೆಯನ್ನು ನೆರವೇರಿಸಲಾಗುವುದು. ಹಾಗೆಯೇ ಶಿವರಾತ್ರಿ ಜಾಗರಣೆ ನಿಮಿತ್ಯ ವಿಶೇಷ ಸಂಗೀತ ನೃತ್ಯಾದಿ ಕಾರ್ಯಕ್ರಮಗಳು ಜರುಗುವವು.

ಚೈತ್ರ ಮಾಸದಲ್ಲಿ ನೂತನ ಸಂವತ್ಸರದ ಯುಗಾದಿ (ಪಾಡ್ಯ) ದಿನ ಇಲ್ಲಿ ಪಂಚಾಂಗ ಶ್ರವಣ ಮಾಡಲಾಗುವುದು. ಪ್ರತಿಪದದಿಂದ ವೈಶಾಖ ಶುಕ್ಲ ಅಕ್ಷ ತೃತೀಯ / ತದಿಗೆ ವರೆಗೆ ಧಾರಾಪಾತ್ರೆ / ಜಲಧಾರೆಯನ್ನು ಶ್ರೀ ಪಂಪಾವಿರೂಪಾಕ್ಷನಿಗೆ ಅರ್ಪಿಸುವುದು.

ಈ ದೇವಾಲಯದಲ್ಲಿ ಕಳೆದ ೬–೭ ವರ್ಷಗಳಿಂದ ಪ್ರತಿ ಹುಣ್ಣಿಮೆಯ ದಿನ ಶ್ರೀ ಸತ್ಯನಾರಾಯಣ ಪೂಜಾ ನೆರವೇರುವುದು.

ವೈಶಾಖ ಶುದ್ಧ ಪಂಚಮಿ ದಿನದಂದು ಶಂಕರಾಚಾರ್ಯರ ಜಯಂತಿಯನ್ನು ಆಚರಿಸಲಾಗುವುದು.

ಶ್ರಾವಣ ಮಾಸದಲ್ಲಿ ಶ್ರೀ ಪಂಪಾವಿರೂಪಾಕ್ಷನಿಗೆ ನಿತ್ಯ ಅಭಿಷೇಕ ಜರುಗುತ್ತಿದ್ದು, ಅದರಲ್ಲು ಸೋಮವಾರ ದಿನಗಳಂದು ವಿಶೇಷ ಪೂಜೆ, ಅಲಂಕಾರವಿರುವುದು. ಕಳೆದ ೩ ವರ್ಷಗಳಿಂದ ಶಿವನಿಗೆ

ಲಕ್ಷ ಬಿಲ್ವಾರ್ಚನೆ ಅರ್ಪಣೆಯಾಗುತ್ತಿದೆ. ಹಾಗೆಯೇ ಕಳೆದ ವರ್ಷ ಕಡೇ ಸೋಮವಾರದಂದು ೧೦೮ ಕುಂಭಗಳ ಕ್ಷೀರಾಭಿಷೇಕ ನೆರವೇರಿಸಲಾಯಿತು.

ಆಶ್ವೀಜ ಮಾಸ ಶುಕ್ಲಪಕ್ಷ ಪ್ರತಿಪದ (ನವರಾತ್ರಿಯಲ್ಲಿ) ದೇವಾಲಯದಲ್ಲಿ ಘಟಸ್ಥಾಪನೆ ಮತ್ತು ೯ ದಿನಗಳ ದೀಪಾರಾಧನೆ ಕೈಗೊಳ್ಳಲಾಗುವುದು. ಈ ಸಂದರ್ಭದಲ್ಲಿ ಶ್ರೀ ಪಾರ್ವತಿ ದೇವಿಗೆ ದುರ್ಗಾಷ್ಟಮಿ ದಿನದಂದು ಕುಂಕುಮಾರ್ಚನೆ ನೆರವೇರಿಸಲಾಗುವುದು. ಹಾಗೆಯೇ ವಿಜಯದಶಮಿಯಂದು ಈ ಭಾಗದಲ್ಲಿ ಸೀಮೋಲ್ಲಂಘನ ಮಾಡಿ, ಶಮೀಪೂಜೆ / ಬನ್ನಿಪೂಜೆ ನೆರವೇರಿಸಿದ ಬಳಿಕ ಬನ್ನಿ ಮುಡಿಯುವುದು ರೂಢಿಗತವಾಗಿ ಬಂದಿದೆ.

ಕಾರ್ತಿಕ ಮಾಸದಲ್ಲಿ ಕಾರ್ತಿಕ ಪ್ರತಿಪದದಿಂದ ಮಾರ್ಗಶೀರ್ಷ ಮಾಸದ ಚಂಪಷಷ್ಠಿ ವರೆಗೆ ಪ್ರತಿದಿನ ಸಾಯಂಕಾಲ ದೀಪೋತ್ಸವ ಜರುಗಿ ಭಕ್ತರ ಕಣ್ಮನ ಸೆಳೆಯುವುದು. ಈ ಮಾಸದ ಕೊನೆಗೆ ೧೦೦೧ ಜ್ಯೋತಿ / ಹಣತೆಗಳ ಪ್ರಖರತೆಯಲ್ಲಿ ದೇವಾಲಯದ ಅಂದ ದ್ವಿಗುಣಗೊಳ್ಳುವುದು.

ಮಾರ್ಗಶೀರ್ಷ ಮಾಸದ ಶುಕ್ಲ ಹುಣ್ಣಿಮೆ ದಿನದಂದು ದತ್ತ ಜಯಂತಿಯನ್ನು ಆಚರಿಸಲಾಗುವುದು.

**ಜೆಣ್ಣೆಹಳ್ಳಿ ಶ್ರೀ ಪಂಪಾಪತಿ ದೇವಸ್ಥಾನದಲ್ಲಿ ವರ್ಷದುದ್ದಕ್ಕೂ ಜರುಗುವ ಕೆಲ ವಿಶೇಷ ಆಚರಣೆಗಳು :**

ಜೆಣ್ಣೆಹಳ್ಳಿಯ ಪಂಪಾಪತಿ ದೇವಸ್ಥಾನದಲ್ಲಿ ಡಿಸೆಂಬರ್ ಕೊನೆ ಅಥವಾ ಜನವರಿಯಲ್ಲಿ ಮಹೇಶ್ವರ ಜಾತ್ರೆ ಎಂಬುದಾಗಿ ಜರುಗುವುದು. ಈ ಸಂದರ್ಭದಲ್ಲಿ ಮುರು ದಿನಗಳ ಕಾಲ ಶ್ರೀ ರೇವಣ ಸಿದ್ದೇಶ್ವರ ಪುರಾಣ ಪ್ರವಚನವನ್ನು ನಡೆಸಲಾಗುವುದು. ಬಳಿಕ ನಾಲ್ಕನೇ ದಿನ ಊರೆಲ್ಲಾ ಉತ್ಸವ ಮಾಡಿ ಮರಳಿ ದೇವಸ್ಥಾನಕ್ಕೆ ಕರೆತರಲಾಗುವುದು.

ಮಹಾಶಿವರಾತ್ರಿ : ಮಹಾಶಿವರಾತ್ರಿ ನಿಮಿತ್ಯ ವಿಶೇಷ ಶಿವರಾತ್ರಿ ಪುರಾಣ ಪ್ರವಚನವನ್ನು ಹಮ್ಮಿಕೊಳ್ಳಲಾಗುವುದು. ಅಂತೆಯೇ ಶಿವರಾತ್ರಿ ಜಾಗರಣೆ ಪ್ರಯುಕ್ತ ವಿಶೇಷ ಪೂಜೆ, ಅಭಿಷೇಕದೊಂದಿಗೆ ಭಕ್ತಾದಿಗಳಿಗೆ ಮುಕ್ತದರ್ಶನ ಕಲ್ಪಿಸಿಕೊಡಲಾಗುವುದು.

**ಶ್ರಾವಣ ಮಾಸ :** ಪವಿತ್ರ ಶ್ರಾವಣ ಮಾಸದಲ್ಲಿ ನಿತ್ಯ ಅಭಿಷೇಕ, ಪೂಜಾದಿ ಕ್ರಮಗಳು ಜರುಗುವವು. ವಿಶೇಷವಾಗಿ ಸೋಮವಾರದಂದು ವಿಶೇಷ ಪೂಜೆ ನಡೆಯುತ್ತಿದ್ದು, ಕಡೆ ಸೋಮವಾರದಂದು ಇಲ್ಲಿಂದ ೩ ಕಿ.ಮೀ. ಅಂತರದಲ್ಲಿರುವ ಕವಳೆಬಸಪ್ಪ ದೇವಸ್ಥಾನಕ್ಕೆ ಶ್ರೀ ಪಂಪಾಪತಿಯ ಉತ್ಸವ ಮೂರ್ತಿಯನ್ನು ಕೊಂಡೊಯ್ದು ಕರೆತರಲಾಗುವುದು.

**ಕಾರ್ತಿಕ ಮಾಸ :** ಕಾರ್ತಿಕ ಮಾಸದಲ್ಲಿ ದೇವಾಲಯದಲ್ಲಿ ಭಕ್ತಾದಿಗಳಿಂದ ದೀಪೋತ್ಸವ ಕಾರ್ಯಕ್ರಮ ಜರುಗುವುದು.[೫೮]

**ಅಡಿಟಿಪ್ಪಣಿ :**

೧. ಋಗ್ವೇದ ಸಂಹಿತಾಮಂಡಲ ೧ ಸೂಕ್ತ ೧೬೯.

೨. ಎಚ್.ಸಿ. ದಾಸ್, ತಾಂತ್ರಿಸಿಸಮ್, ಪುಟ ೨೮.

೩. ಆಲ್ಲ ಚಿರಂಜೀವಿ, ೧೯೯೬: "ಸಾಯಣ ಭಾಷ್ಯಾ ಮತ್ತು ತಂತ್ರದಲ್ಲಿ ವಿರೂಪಾಕ್ಷ ಕಲ್ಪನೆ", ಹಂಪಿ ಪರಂಪರೆ, ಹೊಸಪೇಟೆ.

೪. ಸಿದ್ದಲಿಂಗೇಶ್ವರ ಸ್ವಾಮಿ, ೧೯೮೩; ಶ್ರೀ ಪಂಪಾ ಮಹಾತ್ಮೆ, ವೃಷಭಾಶ್ರಮ, ಹೊಳಗುಂದಿ.

೫. ಇಂಡಿಯನ್ ಆ್ಯಂಟಿಕ್ವೆರಿ, ಸಂ.೬, ಪುಟ ೮೫.

೬. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೯, ನಂ. ೭೯೧, ಗೋನಾಳ, ಹೊಸಪೇಟೆ ತಾ.

೭. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೨, ನಂ. ೧೮, ಮರ, ಕುಷ್ಟಗಿ ತಾಲೂಕು.

೮. ಕಲಬುರ್ಗಿ ಎಂ.ಎಂ. (ಸಂ), "ವಿರೂಪಾಕ್ಷ", ಮಾರ್ಗ ಸಂಪುಟ ೩

೯. ಆಲ್ಲ ಚಿರಂಜೀವಿ, ೧೯೯೬; ಪೂರ್ವೋಕ್ತ.

೧೦. ದೇವರ ಕೊಂಡಾರೆಡ್ಡಿ, ೧೯೯೮; "ತುಂಗಭದ್ರ ಪ್ರದೇಶದ ವಿರೂಪಾಕ್ಷ ದೇವಾಲಯಗಳು", ಇತಿಹಾಸ ದರ್ಶನ, ಸಂ. ೧೩, ಪುಟ ೯೮-೧೦೨, ಬೆಂಗಳೂರು.

೧೧. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೧೮, ನಂ.೧೮೮.

೧೨. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೧, ನಂ. ೧೯೮, ಬೆಣ್ಣೆಹಳ್ಳಿ, ಹರಪನಹಳ್ಳಿ ತಾ.

೧೩. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೯, ನಂ. ೭೯೧, ಗೋನಾಳ, ಹೊಸಪೇಟೆ ತಾ.

೧೪. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೯, ನಂ. ೭೯೧, ಗೋನಾಳ, ಹೊಸಪೇಟೆ ತಾ.

೧೫. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೬, ನಂ. ೭೯೧, ಹಂಪಿ, ಹೊಸಪೇಟೆ ತಾ.

೧೬. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೩, ಹಂಪಿ ಶಾಸನಗಳು, ಹಂಪಿ, ನಂ. ೩೪.

೧೭. ಕಲಬುರ್ಗಿ ಎಂ.ಎಂ., ೧೯೯೯; "ಹಂಪಿಯರಸನ ರಗಳೆಗಳು", ಹರಿಹರನ ರಗಳೆಗಳು. ಕ.ವಿ.ವಿ., ಹಂಪಿ.

೧೮. ಬಸಪ್ಪ .ಎಸ್. (ಸಂ), ೧೯೭೭; ಲಕ್ಕಣ್ಣ ದಂಡೇಶ ವಿರಚಿತ ಶಿವತತ್ವ ಚಿಂತಾಮಣಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೯. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೯, ನಂ. ೮೧, ಬಾಗಳಿ, ಹರಪನಹಳ್ಳಿ ತಾ.

೨೦. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್, ಸಂ.೯, ನಂ. ೧೦೪, ಮೋರಿಗೇರಿ, ಹರಬೊಮ್ಮನಹಳ್ಳಿ ತಾ.

೨೧. ಐ.ಕೆ., ಸಂ.೩, ನಂ.೩೬೦, ಕುಕನೂರು, ಯಲಬುರ್ಗ ತಾ.

೨೨. ವಾಸುದೇವ ಬಡಿಗೇರ, "ಹಂಪಿ ಪರಿಸರದ ಪಂಪಾಪತಿ (ವಿರೂಪಾಕ್ಷ) ದೇವಾಲಯಗಳು". ವಿಜಯನಗರ ಅಧ್ಯಯನ, ಸಂ. ೧೨.

೨೩. ಆರಿಇಂಎ, ೧೯೩೪-೩೫, ಸಂ.ಬಿ. ೩೫೫.

೨೪. ಎಕ (ಪರಿಷ್ಕೃತ), VIII, ಹೊಳೇನರಸೀಪುರ ೭೧.

೨೫. ಎಕ, XII, ಗುಬ್ಬಿ ೩೦.

೨೬. ಪಿ.ಬಿ. ದೇಸಾಯಿ, ಶ್ರೀನಿವಾಸ ರಿತ್ತಿ ಮತ್ತು ಜಿ.ಆರ್. ಗೋಪಾಲ್, ೧೯೮೧: ಎ ಹಿಸ್ಟರಿ ಆಫ್ ಕರ್ನಾಟಕ, ಧಾರವಾಡ, ಪು. ೩೩೨.

೨೭. ಎಕ V, ಚನ್ನರಾಯ ಪಟ್ಟಣ, ೨೫೬.

೨೮. ಎಕ XI, ದಾವಣಗೆರೆ ೩೪.

೨೯. ಎಕ (ಪರಿಷ್ಕೃತ) V, ಕೃಷ್ಣರಾಜನಗರ ೭೭.

೩೦. ಎಕ (ಪರಿಷ್ಕೃತ) VIII, ಹಾಸನ, ೧೧೫.

೩೧. ಎಕ X, ಶ್ರೀನಿವಾಸಪುರ, ೫೪.

೩೨. ಎಕ (ಪರಿಷ್ಕೃತ) VIII, ಹಾಸನ ೧೧೫

೩೩. ಎಕ VII, ಶಿವಮೊಗ್ಗ ೭೦.

೩೪. ಅದೇ; VII, ಶಿವಮೊಗ್ಗ ೭೧.

೩೫. ಎಕ XII, ತುಮಕೂರು ೧೧.

೩೬. ಅದೇ; X, ಗೌರಿಬಿದನೂರು ೭೭.

೩೭. ಅದೇ; XVI, ಮಧುಗಿರಿ ೧೩೧.

೩೮. ಎಕ (ಪರಿಷ್ಕೃತ) III, ಗುಂಡ್ಲುಪೇಟೆ ೧.

೩೯. ಎಕ (ಪರಿಷ್ಕೃತ) VI, ಕೃಷ್ಣರಾಜಪೇಟೆ ೭೧.

೪೦. ಎಕ (ಪರಿಷ್ಕೃತ) VIII, ಹಾಸನ ೯.

೪೧. ಎಕ XII, ಪಾವಗಡ ೪.

೪೨. ಅದೇ ; XII, ತಿಪಟೂರು ೧೩೯.

೪೩. ಅದೇ ; XII, ಕುಣಿಗಲ್ಲು ೪೩.

೪೪. ಎಕ (ಪರಿಷ್ಕೃತ) III, ಹೆಗ್ಗಡದೇವನಕೋಟೆ ೧೪೯.

೪೫. ಎಕ XI, ದಾವಣಗೆರೆ ೩೪.

೪೬. ಅದೇ ; XII, ಶಿರಾ ೭೬.

೪೭. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂ.೧೮, ನಂ. ೧೮೮.

೪೮. Ibid, No. 324, Bennehalli, Harapanahalli Tq.

೪೯. Ibid, No. 349.

೫೦. Ibid, No. 350.

೫೧. ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೧, ಸಂಖ್ಯೆ ೧೯೮, ಬೆಣ್ಣೆಹಳ್ಳಿ, ಹರಪನಹಳ್ಳಿ ತಾ.

೫೨. Ibid, No. 379.

೩೨. Ibid, Pt. 11. No. 514, Kurekuppe, Sandur Tq.

೩೪. Ibid, Pt. 11. No. 648, Kampli, Hospet Tq.

೩೩. Balasubramanya, 2004; "Virupaksha Temple at Hampi - A Study (P.hd. Thesis), Mysore University, Mysore.

೩೬. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ.

೩೭. ಪುರುಷೋತ್ತಮ ಬಿಳಿಮಲೆ, ಚಲುವರಾಜು, ೧೯೯೯; ಹಂಪಿ ಜಾನಪದ, ಕ.ವಿ.ವಿ., ಹಂಪಿ.

೩೮. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ.'

# ಅಧ್ಯಾಯ ೫

೫. ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ

೫.೧ ಹಂಪಿ ಪರಿಸರದ ಪ್ರಮುಖ ವಿರೂಪಾಕ್ಷ ದೇವಾಲಯಗಳು

೫.೨ ಮೂರ್ತಿ ಶಿಲ್ಪಗಳು

೫.೩ ವರ್ಣಚಿತ್ರಕಲೆ

## ಅಧ್ಯಾಯ ೫

**ವಾಸ್ತು ಶಿಲ್ಪ ಹಿನ್ನೆಲೆ :**

ಧಾರ್ಮಿಕ ಶ್ರದ್ಧೆಯು ಜೀವನದ ಒಂದು ಪ್ರಮುಖ ಅಂಶ ಎನಿಸಿರುವ ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ದೇವಾಲಯಗಳನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ವಾಸ್ತುಶಿಲ್ಪ ಎಂದರೆ ಕಟ್ಟಡಗಳ ನಿರ್ಮಾಣ (Architecture) ಎಂಬ ಅರ್ಥವಿದ್ದು ಎಲ್ಲಾ ಕಲೆಗಳಿಗೂ ಹೇಳುವಂತೆ ವಾಸ್ತುಶಿಲ್ಪಕ್ಕೂ ನಮ್ಮ ಶಾಸ್ತ್ರ ಗ್ರಂಥಗಳು ದೈವಿಕವಾದ ಮೂಲವನ್ನೇ ಹೇಳುತ್ತವೆ. ವಾಸ್ತು ಶಿಲ್ಪದ ಹುಟ್ಟನ್ನು 'ಮಾನಸಾರ' ನಿರ್ದೇಶಿಸಿದ ರೀತಿ ಹೀಗಿದೆ – ಬ್ರಹ್ಮನ ನಾಲ್ಕು ಮುಖಗಳಿಂದ ವಿಶ್ವಕರ್ಮ, ಮಯ, ತಷ್ಟ ಮತ್ತು ಮನು ಹುಟ್ಟಿದರು. ಇವರ ನಾಲ್ಕು ಮಕ್ಕಳು ಕ್ರಮವಾಗಿ ಸ್ಥಪತಿ, ಸೂತ್ರಗ್ರಾಹಿ, ವರ್ಧಕಿ, ತಕ್ಷಕ ಎಂಬುವರು ಇವರಿಂದ ವಾಸ್ತುಕಲೆ ಬೆಳೆಯಿತು ಎನ್ನುತ್ತದೆ ಮಾನಸಾರ.[೧]

ಚಿತ್ರ, ಶಿಲ್ಪ, ಕಾವ್ಯ, ನಾಟಕ ಮೊದಲಾದ ಕಲೆಗಳು ಜೀವನದ ವಿವಿಧ ಅನುಭವಗಳಿಗೆ ರೂಪಧಾರಣೆ ಮಾಡಲು ಪ್ರಯತ್ನಿಸಿದರೆ ವಾಸ್ತುಶಿಲ್ಪ ನಿರಾಕಾರವಾದ ಆಕಾಶವನ್ನೇ ವ್ಯವಸ್ಥೆಗೊಳಿಸಿ ಅದಕ್ಕೊಂದು ರೂಪ ಕೊಡುವ ಕಲೆ. ಗೋಡೆಗಳನ್ನು ಹಾಕಿ ಮೇಲೆ ಛಾವಣಿಗಳನ್ನು ನಿರ್ಮಿಸಿ ಅನಂತವಾದ ಆಕಾಶವನ್ನು ಸಾಂತಗೊಳಿಸಿ ಅದನ್ನು ಉಪಯೋಗಕ್ಕಾಗಿ ಹಿಡಿದಿಡುತ್ತದೆ ಮತ್ತು ಆ ಮೂಲಕ ಸಂಪೂರ್ಣವಾಗಿ ಹೊಸ ರೂಪಗಳನ್ನು ಸೃಷ್ಟಿಸುತ್ತದೆ. ವಾಸ್ತುಶಿಲ್ಪಿ ತನ್ನ ಕಲಾ ರೂಪಗಳ ನಿರ್ಮಾಣಕ್ಕೆ ತಾನೇ ಕಾರಣನಾದ ಸಾಮ್ರಾಟ. ಗೋಡೆಗಳು, ಛಾವಣಿಗಳು ಮತ್ತು ಗೋಪುರಗಳ ವ್ಯತ್ಯಾಸದಿಂದ ಆಕಾಶಕ್ಕೆ ಆತ ಅನಂತ ರೂಪಗಳನ್ನು ಕೊಡಬಲ್ಲನು. ಅಂತೆಯೇ ಕರ್ನಾಟಕದ ಚರಿತ್ರೆಯಲ್ಲಿ ಕಾಲ ಕಾಲಕ್ಕೆ ಆದ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳಿಗೆ ಅನುಗುಣವಾಗಿ ವಾಸ್ತುಶಿಲ್ಪ ಬೆಳೆದುಬಂದಿದೆ. ಈ ಅಧ್ಯಾಯದಲ್ಲಿ ಹಂಪಿಯನ್ನೊಳಗೊಂಡು ಈ ಪರಿಸರದ ವಿರೂಪಾಕ್ಷ ದೇವಾಲಯಗಳ ವಾಸ್ತು ಲಕ್ಷಣಗಳನ್ನು ಅನುಲಕ್ಷಿಸಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ.

### ೫.೧ ಹಂಪಿಯ ಪರಿಸರದ ಪ್ರಮುಖ ವಿರೂಪಾಕ್ಷ ದೇವಾಲಯಗಳು :

#### ೫.೧.೧ ವಿರೂಪಾಕ್ಷ ದೇವಾಲಯ–ಹಂಪಿ.

**ತಲವಿನ್ಯಾಸ :**

ಈ ವಿರೂಪಾಕ್ಷ ದೇವಾಲಯದಲ್ಲಿ ಗರ್ಭಗೃಹ ಒಂದರ ನಂತರ ಒಂದರಂತೆ ಒಟ್ಟು ಮೂರು ಅಂತರಾಳಗಳು ನವರಂಗ ಮತ್ತು ಮುಖಮಂಟಪ ಅಥವಾ ರಂಗಮಂಟಪಗಳಿವೆ.

**ವಾಸ್ತು ವಿವರ :**[೨]

**ಮುಖಮಂಟಪ / ರಂಗ ಮಂಟಪ :** ವಿರೂಪಾಕ್ಷ ದೇವಾಲಯವ ಮುಖ್ಯ ರಂಗಮಂಟಪವನ್ನು ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ನೆನಪಿಗೋಸ್ಕರ ಕ್ರಿ.ಶ. ೧೫೧೦ ರಲ್ಲಿ ನಿರ್ಮಿಸಿದನು. ಈ ರಂಗಮಂಟಪ ಎತ್ತರವಾದ ಅಧಿಷ್ಠಾನವನ್ನು ಹೊಂದಿದೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಪಟ್ಟಿಕುಮುದ, ಕಂಠ, ತ್ರಿಪಟ್ಟಿಕುಮುದ, ಕಂಠ ಮತ್ತು ಕಪೋತ ಭಾಗಗಳಿವೆ. ಕಪೋತದಲ್ಲಿ ಚೈತ್ಯಗಳಿವೆ. ಈ ರಂಗಮಂಟಪದಲ್ಲಿ ಕಂಬಗಳನ್ನು ಆರು ಸಾಲುಗಳಲ್ಲಿ ನಿಲ್ಲಿಸಲಾಗಿದೆ. ಮಧ್ಯದ ಎರಡು ಸಾಲಿನ

ಪ್ರತಿಯೊಂದರಲ್ಲಿ ಕೇವಲ ನಾಲ್ಕು ಕಂಬಗಳಿವೆ. ಈ ಮಧ್ಯದ ಎರಡು ಸಾಲುಗಳ ಪಕ್ಕದಲ್ಲಿರುವ ಸಾಲಿನಲ್ಲಿ ಏಳು-ಏಳು ಕಂಬಗಳಿದ್ದರೆ ಉಳಿದ ಎರಡು ಸಾಲುಗಳಲ್ಲಿ ಎಂಟು-ಎಂಟು ಕಂಬಗಳಿವೆ. ಮಧ್ಯದ ಎರಡು ಸಾಲಿನಲ್ಲಿ ಕಡಿಮೆ ಕಂಬಗಳಿರುವುದರಿಂದ ಮಧ್ಯದ ಭುವನೇಶ್ವರಿ ವಿಶಾಲವಾಗಿದ್ದು ಇಲ್ಲಿ ವರ್ಣಚಿತ್ರಗಳಿವೆ. ಇಲ್ಲಿಯ ಕಂಬಗಳು ಹೆಚ್ಚು ಅಲಂಕೃತವಾಗಿವೆ. ರಂಗ ಮಂಟಪದ ಎರಡೂ ಬದಿಗಳಲ್ಲಿರುವ ಕಂಬಗಳಲ್ಲಿನ ಎರಡು ನೇರ ಭಾಗಗಳಾಗಿ ವಿಭಾಗಿಸಿ ಮೊದಲನೆಯದರಲ್ಲಿ ಚಚ್ಚೌಕಾಕಾರದ ಕಾಂಡಭಾಗವಿದ್ದರೆ ಇನ್ನೊಂದು ನೇರ ಭಾಗದಲ್ಲಿ ಚಿಕ್ಕ ಉಪಕಂಬಗಳಿದ್ದು, ಈ ಕಂಬಗಳನ್ನು ಸಿಂಹಗಳು ಹೊತ್ತು ನಿಂತಿವೆ. ಚಚ್ಚೌಕಾಕಾರದ ಭಾಗದಲ್ಲಿ ಮೂರ್ತಿ ಶಿಲ್ಪಗಳನ್ನು ಕಂಡರಿಸಿದ್ದಾರೆ. ಮುಖ್ಯವಾದ ಕೆಲವನ್ನು ಇಲ್ಲಿ ಹೆಸರಿಸಲಾಗಿದೆ.

ಕುಳಿತಿರುವ ಸಿಂಹಗಳು, ಶಿವಲಿಂಗವನ್ನು ಪೂಜಿಸುತ್ತಿರುವ ಹಲ್ಲಿ, ಬೇಡರ ಕಣ್ಣಪ್ಪ ತನ್ನ ಕಣ್ಣುಗಳನ್ನು ಶಿವನಿಗೆ ಅರ್ಪಿಸುವ ದೃಶ್ಯ, ಪರಶುವನ್ನು ಹಿಡಿದಿರುವ ಅರ್ಧ ಮನುಷ್ಯ, ಅರ್ಧ ಪಕ್ಷಿ ರೂಪದ ವಾನರ, ಪರಶು, ಪಾಶ, ಮೋದಕ ಮತ್ತು ಕೋರೆ ಹಲ್ಲನ್ನು ಹಿಡಿದಿರುವ ಚತುರ್ಭುಜ ಗಣೇಶ, ನೃತ್ಯಗಾರರು, ಆನೆಯೊಂದು ಶಿವಲಿಂಗವನ್ನು ಪೂಜಿಸುತ್ತಿರುವ ದೃಶ್ಯ, ಧನುರ್ಧಾರಿ ಕಾಮ, ಗಂಧರ್ವರು, ಸುಂದರ ಪುಕ್ಕಗಳನ್ನುಳ್ಳ ಹಂಸ, ಶಿವಲಿಂಗವನ್ನು ತನ್ನ ಬಾಲದಿಂದ ಕಿತ್ತೊಗೆಯುವ ಸಾಹಸ ಮಾಡುತ್ತಿರುವ ಕಪಿ, ಬೆಣ್ಣೆಯನ್ನು ಕದಿಯುತ್ತಿರುವ ಬಾಲಕೃಷ್ಣ, ಅಂಜಲಿ ಮುದ್ರೆಯಲ್ಲಿರುವ ಶಂಕರಾಚಾರ್ಯ, ಮುಕ್ಕಣ್ಣ ಶಿವ, ಭೈರವ, ನೃತ್ಯ ಬಾಲಕೃಷ್ಣ, ವ್ಯಾಖ್ಯಾನ ಮುದ್ರೆಯಲ್ಲಿರುವ ಋಷಿ, ಆಕಾಶದಲ್ಲಿ ಹಾರುತ್ತಿರುವ ಹನುಮಂತ, ಗರುಡ, ದಂಡವನ್ನು ಹಿಡಿದಿರುವ ಋಷಿಯೊಬ್ಬನು ಮೊಸಿಸನ ಮೇಲೆ ಕುಳಿತಿರುವ ದೃಶ್ಯ, ವರಾಹ, ರಾಮ-ಲಕ್ಷ್ಮಣ, ವೀರಭದ್ರ, ಗಿಳಿಯಿಂದ ಎಳೆಯಲ್ಪಡುತ್ತಿರುವ ರಥದಲ್ಲಿ ಕುಳಿತಿರುವ ಮನ್ಮಥ ಮತ್ತು ಮಹಿಷ ಮರ್ಧಿನಿ ಮುಂತಾದವು.

**ನವರಂಗ** : ನವರಂಗದ ಅಧಿಷ್ಠಾನ ಎತ್ತರವಾಗಿದ್ದು, ಗರ್ಭಗೃಹ ಮತ್ತು ಅಂತರಾಳಗಳ ಅಧಿಷ್ಠಾನಕ್ಕಿಂತಲೂ ಭಿನ್ನವಾಗಿವೆ. ಈ ಅಧಿಷ್ಠಾನ ಎತ್ತರದಲ್ಲಿ, ಗೋಡೆಯ ಕೆಳಗಿನ ಅರ್ಧಭಾಗದ ವರೆಗೆ ಇದೆ. ಇಲ್ಲಿ ಉಪಾನಪದ್ಮ, ಕಂಠ, ಪಟ್ಟಿಕೆ ಇವುಗಳನ್ನು ಅನೇಕ ಗೋಡೆಗಳಾಗಿ ವಿಂಗಡಿಸಿದ್ದು ಅವರಲ್ಲಿ ಆನೆಗಳು, ಸೈನಿಕರು ಮುಂತಾದ ಶಿಲ್ಪಗಳನ್ನು ಕಂಡರಿಸಿದ್ದಾರೆ. ಚೈತ್ಯಗಳಿಂದ ಅಲಂಕರಿಸಿದ ಕಪೋತ, ಪದ್ಮಯುಕ್ತ ಪಟ್ಟಿಕೆ, ಕಂಠ ಮತ್ತೊಂದು ಕಂಠ ಕಲಾತ್ಮಕವಾಗಿ ಕೆತ್ತಿರುವ ತ್ರಿಪಟ್ಟ ಕುಮುದ ಅಥವಾ ಬಹುಮುಖ ಕುಮುದ ಚೌಕಗಳಾಗಿ ವಿಂಗಡಿಸಿದ ಎತ್ತರವಾದ ಕಂಠ ಮತ್ತೊಂದು ಎತ್ತರವಾದ ಚೌಕಗಳಿಂದ ಕೂಡಿದ ಕಂಠ ಮತ್ತು ಪಟ್ಟಿಕೆಗಳಿವೆ. ಈ ಪಟ್ಟಿಕೆಯ ಕೆಳಭಾಗವನ್ನು ಪದ್ಮದಂತೆ ಅಲಂಕರಿಸಲಾಗಿದೆ. ನವರಂಗದ ಹೊರಗೋಡೆಯ ಕೆಳಭಾಗ ಮೇಲೆ ಕಾಣಿಸಿದಂತೆ ಅಧಿಷ್ಠಾನದ ವಿವಿಧ ಭಾಗಗಳಿಂದ ಕೂಡಿದೆ. ಮೇಲ್ಭಾಗದಲ್ಲಿ ಅರ್ಧಗಂಭಗಳು, ಮೂಲೆಗಂಭಗಳು, ಶಾಲಾ ಶಿಖರಗಳಿಂದ ಅಲಂಕೃತವಾದ ಕೋಷ್ಠಗಳು, ಕುಂಭ ಪಂಜರಗಳು, ಅರ್ಧಗಂಬಗಳ ಮೇಲೆ ಕುಳಿತ ಭಂಗಿಯಲ್ಲಿರುವ ಸಿಂಹಗಳ ಶಿಲ್ಪಗಳಿವೆ. ಕುಂಬಪಜರದ ಮೇಲೆ ಕೂಟಶಿಖರವಿದೆ. ಅರ್ಧಗಂಭಗಳ ಪಂಜರಗಳ ಮತ್ತು ಕೋಷ್ಠಗಳ ಪಕ್ಕದಲ್ಲಿ ಚಿಕ್ಕ ಆಕಾರದ ಮೂರ್ತಿ ಶಿಲ್ಪಗಳಿವೆ. ಇವುಗಳಲ್ಲಿ ಬಾಲಕೃಷ್ಣನು ಕಾಳಿಂಗಸರ್ಪವನ್ನು ಮರ್ಧಿಸುತ್ತಿರುವುದು, ಬೇಡರಕಣ್ಣಪ್ಪನು ತನ್ನ ಬಲಗಣ್ಣನ್ನು ಕಿತ್ತುಕೊಳ್ಳುತ್ತಿರುವುದು, ಋಷಿಗಳು, ನಾಗ,

ಲಿಂಗ, ನಂದಿ, ಶಿವಭಕ್ತನೊಬ್ಬನು ತನ್ನ ಶಿರವನ್ನು ಶಿವಲಿಂಗಕ್ಕೆ ಅರ್ಪಿಸುತ್ತಿರುವುದು, ವೃಷಭ ವಾಹನ ಶಿವಪಾರ್ವತಿಯರು, ಮಾರ್ಕಾಂಡೇಯನನ್ನು ರಕ್ಷಿಸಲು ಲಿಂಗದಿಂದ ಉದ್ಭವಿಸುತ್ತಿರುವ ಶಿವ ಮುಂತಾದ ಮೂರ್ತಿ ಶಿಲ್ಪಗಳು ಗಮನಾರ್ಹ ಇಲ್ಲಿಯ ಬಹುತೇಕ ಶಿಲ್ಪಗಳು ಶೈವ ಸಂಪ್ರದಾಯಕ್ಕೆ ಸೇರಿದವುಗಳಾಗಿವೆ.

ಚಚ್ಚೌಕವಾದ ನವರಂಗಕ್ಕೆ ಮೂರು ಕಡೆ ಪ್ರವೇಶದ್ವಾರಗಳಿವೆ. ನವರಂಗದ ಮಧ್ಯೆ ಸುಮಾರು ೬ ಅಂಗುಲದ ಎತ್ತರದ ಜಗಲಿ ಇದ್ದು, ಅದರ ನಾಲ್ಕೂ ಮೂಲೆಗಳಲ್ಲಿ ಕಂಬಗಳಿವೆ. ಈ ಕಂಬಗಳ ಕಾಂಡಭಾಗದಲ್ಲಿ ಮೂರು ಚೌಕಾಕಾರದ ಭಾಗಗಳಿವೆ. ಇವುಗಳ ಮಧ್ಯಭಾಗದಲ್ಲಿ ಎಂಟು ಮತ್ತು ಹದಿನಾರು ಮುಖಗಳ ಪಟ್ಟಿಗಳಿವೆ. ಕೆಳಗಿನ ಚೌಕಾಕಾರದ ಮೇಲ್ಭಾಗದಲ್ಲಿ ನಾಗಬಂಧಗಳಿವೆ. ಚೌಕಾಕಾರದ ಭಾಗಗಳ ಮೇಲೆ ವಿವಿಧ ಬಗೆಯ ಮೂರ್ತಿಗಳನ್ನು ಕಟೆದಿದ್ದಾರೆ. ಯಕ್ಷರು, ಮದ್ದಲೆ ಮೃದಂಗ ಬಾರಿಸುವವರು, ಬೇಡರಕಣ್ಣಪ್ಪ, ಶಿವಲಿಂಗವನ್ನು ಪೂಜಿಸುತ್ತಿರುವ ಹಸು, ಕುಳಿತಿರುವ ಸಿಂಹ, ದ್ವಾರಪಾಲ, ಗಣೇಶ, ಶಂಖ ಚಕ್ರಧಾರಿಯಾದ ಯೋಗ, ನರಸಿಂಹ, ಅಂಜಲಿ ಹಸ್ತದಲ್ಲಿರುವ ಹನುಮಂತ ಇತ್ಯಾದಿ ಶಿಲ್ಪಗಳನ್ನು ಈ ಕಂಬಗಳ ಮೇಲೆ ಕಂಡರಿಸಿದ್ದಾರೆ. ನವರಂಗದಲ್ಲಿ ಒಂಬತ್ತು ಅಂಕಣಗಳಿದ್ದು ಮಧ್ಯದ ಭುವನೇಶ್ವರಿಯನ್ನು ಸುಂದರವಾಗಿ ಅಲಂಕರಿಸಲಾಗಿದೆ. ಇಲ್ಲಿ ಕಲಾತ್ಮಕ ಪದ್ಮವೊಂದಿದ್ದು ಇದನ್ನು ಚೌಕಾಕಾರದ ಲತಾ ಪಟ್ಟಿಕೆಯ ಮಧ್ಯದಲ್ಲಿ ಕೆತ್ತಿದ್ದಾರೆ. ಮೂಲೆಗಳಲ್ಲಿ ಕೀರ್ತಿ ಮುಖಗಳಿವೆ. ನವರಂಗದಲ್ಲಿ ಎರಡು ಆಳವಾದ ಕೋಷ್ಠಗಳಿವೆ. ಕೋಷ್ಠದ ಮೇಲ್ಭಾಗದಲ್ಲಿ ಶಾಲಾ ಇದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇಲ್ಲಿ ಗೋಡೆಗಳ ಮೇಲೆ ಅರ್ಧಗಂಭಗಳಿಲ್ಲ. ಆದರೆ ಗೋಡೆಗಳಲ್ಲಿ ಪದ್ಮದ ಮೊಗ್ಗಿನಾಕಾರದ ಬೋದಿಗೆಗಳಿವೆ. ಮಧ್ಯದ ಭುವನೇಶ್ವರಿಯು ನಾಲ್ಕು ಕಂಬಗಳ ಮೇಲೆ ಕಟ್ಟಿರುವ ತೊಲೆಗಳ ಮೆಲೆ ರಚಿಸಲಾಗಿದೆ. ನವರಂಗದ ಎರಡೂ ಬದಿಗಳಲ್ಲಿ ಚಿಕ್ಕ ಮಂಟಪಗಳಿದ್ದು ಇವುಗಳನ್ನು ಎರಡು ಕಂಬಗಳ ಸಹಾಯದಿಂದ ರಚಿಸಲಾಗಿದೆ. ಈ ಕಂಬಗಳು ಚಚ್ಚೌಕಾಕಾರವಾಗಿದ್ದು ಇದರಲ್ಲಿ ಚಿಕ್ಕ ಚಿಕ್ಕ ಗೂಡುಗಳ ಮಾದರಿಗಳನ್ನು ಕೆತ್ತಿದ್ದಾರೆ.

**ಅಂತರಾಳ :** ಮೊದಲನೆಯ ಮತ್ತು ಮೂರನೆಯ ಅಂತರಾಳಗಳು ದೀರ್ಘ ಚತುರಸ್ರಾಕಾರದವುಗಳಾಗಿದ್ದು ಎರಡನೇ ಅಂತರಾಳವು ಚಚ್ಚೌಕವಾಗಿದೆ. ಇದರಲ್ಲಿ ಎಂಟು ಅರ್ಧಗಂಬಗಳಿವೆ. ಹಗೆಯೇ ಈ ಕಂಬಗಳು ಸರಳವಾದ ಬೋದಿಗೆಗಳನ್ನು ಹೊಂದಿವೆ.

**ಗರ್ಭಗೃಹ :** ಗರ್ಭಗೃಹವು ಚಚ್ಚೌಕಾಕಾರದಲ್ಲಿದ್ದು ಮಧ್ಯದಲ್ಲಿ ವಿರೂಪಾಕ್ಷ ಉದ್ಭವಲಿಂಗವನ್ನು ಕಾಣಬಹುದು. ವಿರೂಪಾಕ್ಷ ಲಿಂಗವು ಪೀಠರಹಿತವಾಗಿದೆ.

**ದೇವಾಲಯದ ಹೊರಭಾಗ :**

ವಿರೂಪಾಕ್ಷ ದೇವಾಲಯದ ಸಂಕೀರ್ಣದ ವಿವಿಧ ಭಾಗಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ನಮಗೆ ತಿಳಿದುಬರುವ ಅಂಶವೆಂದರೆ ಇವು ಬೇರೆ ಬೇರೆ ಕಾಲದಲ್ಲಿ ರಚಿತವಾಗಿರುವುದು. ಕೆಲವು ಭಾಗಗಳು ಜೀರ್ಣೋದ್ಧಾರಗೊಂಡಿವೆ. ವಿರೂಪಾಕ್ಷ ದೇವಾಲಯದ ಸಂಕೀರ್ಣದ ವಿವಿಧ ಭಾಗಗಳು ಮೂರು ಬೇರೆ ಬೇರೆ ಕಾಲಗಳಲ್ಲಿ ನಿರ್ಮಾಣಗೊಂಡಿವೆ. ಮೊದಲನೆಯ ಅಂದರೆ ಮೂಲತಃ ವಿರೂಪಾಕ್ಷ ದೇವಾಲಯ ಒಂದು ಚಿಕ್ಕ ದೇವಾಲಯವಾಗಿದ್ದು ಅದು ಏಳನೇ ಶತಮಾನದಲ್ಲಿ ಬಹುಶಃ

ಅಸ್ತಿತ್ವದಲ್ಲಿರಬೇಕು. ಎಂಟನೇ ಶತಮಾನದಲ್ಲಿ ಕೆಂಪು ಉಸುಕುಕಲ್ಲಿನಲ್ಲಿ ಎರಡು ಚಿಕ್ಕ ದೇವಾಲಯಗಳ ನಿರ್ಮಾಣವಾಯಿತು. ಈ ಕೆಂಪು ಉಸುಕುಕಲ್ಲಿನ ದೇವಾಲಯಗಳೂ ಮನ್ಮಥ ಹೊಂಡದ ಅಂಚಿನಲ್ಲಿವೆ.[೩]

ಎರಡನೇ ಹಂತದಲ್ಲಿ ಮನ್ಮಥ ಹೊಂಡದ ಅಂಚಿನಲ್ಲಿ ೧೨ ರಿಂದ ೧೪ ನೇ ಶತಮಾನದ ವರೆಗೆ ಅನೇಕ ಚಿಕ್ಕ ದೇವಾಲಯಗಳ ನಿರ್ಮಾಣವಾಯಿತು. ಇವುಗಳಲ್ಲಿ ಶಾಸನೋಕ್ತ ಪಂಪಾದೇವಿ ದೇವಾಲಯವೂ ಒಂದು. ಈ ಹೊತ್ತಿಗಾಗಲೇ ವಿರೂಪಾಕ್ಷ ದೇವಾಲಯ ಸುಪ್ರಸಿದ್ಧ ದೇವಾಲಯವಾಗಿದ್ದಲ್ಲದೆ ಹೊಯ್ಸಳ ರಾಜ್ಯದ ಉತ್ತರ ಮೇರೆಯಲ್ಲಿಯ ರಾಜಕೀಯ ಜೀವನದಲ್ಲಿ ಸಕ್ರಿಯ ಪಾತ್ರ ವಹಿಸಿ ೧೩೪೦ ರಲ್ಲಿ ಮೂರನೇ ಬಲ್ಲಾಳನು ತನ್ನ ಪುತ್ರ ವಿರೂಪಾಕ್ಷ ಬಲ್ಲಾಳನ ಯುವರಾಜ ಪಟ್ಟಮಹೋತ್ಸವವನ್ನು ದೇವಾಲಯದಲ್ಲಿಯೇ ನೆರವೇರಿಸಿದ. ೩ ನೇ ಹಂತದಲ್ಲಿ ವಿಜಯನಗರ ಕಾಲದಲ್ಲಿ ವಿರೂಪಾಕ್ಷ ದೇವಾಲಯ ಬಹಳಷ್ಟು ವಿಸ್ತೀರ್ಣಗೊಂಡಿತು. ಸಂಗಮರ ಕಾಲದಲ್ಲಿ ಈ ದೇವಾಲಯ ಕೇವಲ ಗರ್ಭಗೃಹ, ನವರಂಗ, ಪ್ರಾಕಾರ ಮತ್ತು ಮುಖ್ಯ ಗೋಪುರವನ್ನು ಮಾತ್ರ ಒಳಗೊಂಡಿತ್ತು. ಕೃಷ್ಣದೇವರಾಯನು ೧೫೧೦ ರಲ್ಲಿ ರಂಗಮಂಟಪವನ್ನು ಕಟ್ಟಿಸಿ ಅದರ ಮುಂದಣ ಚಿಕ್ಕ ಗೋಪುರವನ್ನು ನಿರ್ಮಿಸಿದ್ದಲ್ಲದೆ ಮುಖ್ಯ ಗೋಪುರವನ್ನು ಜೀರ್ಣೋದ್ಧಾರ ಮಾಡಿದ.

**ಬಿಷ್ಟಪ್ಪಯ್ಯಗೋಪುರ :**

ವಿರೂಪಾಕ್ಷ ದೇವಾಲಯದ ಪ್ರಧಾನ ಪ್ರವೇಶ ಗೋಪುರಕ್ಕೆ ಬಿಷ್ಟಪ್ಪಯ್ಯ ಗೋಪುರವೆಂದು ಹೆಸರು. ಶಾಸನದಲ್ಲಿ ಹಿರಿಯ ಗೋಪುರವೆಂದು ಕರೆಯಲ್ಪಡುವ ೧೦ ಅಂತಸ್ತುಗಳ ಸುಮಾರು ೧೬೫ ಅಡಿ ಎತ್ತರದ ಈ ಗೋಪುರದ ನಿಲುವು ಆಕರ್ಷಣೀಯವಾಗಿದೆ. ಇದನ್ನು ಎರಡನೆಯ ದೇವರಾಯನ (೧೪೨೪-೪೬) ಕಾಲದಲ್ಲಿ ಬಿಷ್ಟಪ್ಪಯ್ಯ ಎಂಬುವವನು ನಿರ್ಮಿಸಿದನು.[೪] ತಳಪಾಯದ ಎರಡು ಅಂತಸ್ತುಗಳನ್ನು ಕಟ್ಟಿ ಮೇಲ್ಭಾಗವನ್ನೆಲ್ಲ ಇಟ್ಟಿಗೆ ಗಾರೆಯಿಂದ ನಿರ್ಮಿಸಲಾಗಿದೆ. ಒಳಭಾಗ ಟೊಳ್ಳಾಗಿದ್ದು, ಹೊರಮಗ್ಗಲು ತಿಳಿಗಚ್ಚಿನ ಮೂರ್ತಿಗಳು, ಮಂಟಪಗಳು ಇವೆ. ಕೃಷ್ಣದೇವರಾಯನು ೧೫೧೦ ರಲ್ಲಿ ಇದನ್ನು ದುರಸ್ತಿಗೊಳಿಸಿದ.

**ರಾಯರ ಗೋಪುರ :**

ದೇವಾಲಯದ ಎರಡನೇ ಗೋಪುರಕ್ಕೆ ರಾಯರ ಗೋಪುರವೆಂದು ಹೆಸರು ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ನೆನಪಿಗಾಗಿ ೧೫೧೦ ರಲ್ಲಿ ಇದನ್ನು ಕಟ್ಟಿಸಿದನು.[೫] ಈ ಗೋಪುರ ಪ್ರವೇಶಕ್ಕೆ ಮೊದಲು ಬಲಬದಿಗೆ ಫಲಪೂಜಾ ಮಂಟಪವಿದೆ. ಇದರಲ್ಲಿ ವರ್ಷಕ್ಕೊಮ್ಮೆ ವಿರೂಪಾಕ್ಷ-ಪಂಪಾದೇವಿಯರ ವಿವಾಹ ನೆರವೇರಿಸುತ್ತಾರೆ.

**ಕನಕಗಿರಿ ಗೋಪುರ :**

ದೇವಾಲಯದ ಉತ್ತರ ದಿಕ್ಕಿನ ದೊಡ್ಡ ಗೋಪುರಕ್ಕೆ ಕನಕಗಿರಿ ಗೋಪುರವೆಂದು ಹೆಸರು. ಕನಕಗಿರಿ ನಾಯಕ ನವಾಬ ಉಡಚಪ್ಪ ನಾಯಕನು ಕಟ್ಟಿಸಿದ್ದಾನೆ.[೬] ಇದರ ನಿಲುವು ಭಂಗಿಗಳು ಬಿಷ್ಟಪ್ಪಯ್ಯನ ಗೋಪುರವನ್ನು ಬಹಳಷ್ಟು ಹೋಲುತ್ತವೆ. ಗಾರೆಯಿಂದ ನಿರ್ಮಿಸಿದ ಆಕರ್ಷಕ ಮೂರ್ತಿಗಳು ಈ ಗೋಪುರಕ್ಕೆ ಹೆಚ್ಚಿನ ಕಳೆ ತಂದಿವೆ. ಕೆಳಗಿನ ಪ್ರವೇಶ ಭಾಗದಲ್ಲಿ ಹಿರಣ್ಯಗರ್ಭ ಗಣಪತಿ ಮತ್ತು ಮಹಿಷಾಸುರ ಮರ್ಧಿನಿಯರ ಮೂರ್ತಿಗಳಿವೆ. ಗೋಪುರ ದಾಟಿ ಹೊರಗೆ ಬಂದರೆ

ಮನ್ಮಥಕೊಂಡ ಎಂಬ ಕಲ್ಯಾಣಿ ಇದ್ದು ಫಲಪೂಜೆಯ ಉತ್ಸವದ ದಿನ ಇಲ್ಲಿ ತೆಪ್ಪ ತೇಲಿಬಿಡುತ್ತಾರೆ. ಎಡಗಡೆಗೆ ಚಿಕ್ಕಚಿಕ್ಕ ಗುಡಿಗಳ ಸಾಲಿದೆ.

**ವಿರೂಪಾಕ್ಷ ಬಜಾರು :**

ವಿರೂಪಾಕ್ಷ ದೇವಾಲಯದ ಪೂರ್ವ ಗೋಪುರದ ಮುಂಭಾಗದಿಂದ ಎದುರು ಬಸವಣ್ಣ ಮಂಟಪದ ವರೆಗೆ ಇರುವ ಬೀದಿಯೇ ವಿರುಪಾಕ್ಷ ಬಜಾರು. ಬಜಾರದ ಉದ್ದ ೭೧೭ ಮೀ., ಅಗಲ ದೇವಾಲಯದ ಬಳಿ ೩೦ ಮೀ. ಇದ್ದು ಕೊನೆಯಲ್ಲಿ ೩೮ ಮೀ.ಗಳಷ್ಟು ವಿಸ್ತಾರವಾಗಿದೆ. ಕ್ರಿ.ಶ. ೧೯೭೯-೮೩ ರ ಉತ್ಖನನದ ವರದಿಯ ಪ್ರಕಾರ ಬಜಾರದ ಉದ್ದ ೭೩೦ ಮೀ ಅಗಲ ೫೫ ಮೀ. ಬಜಾರದ ಇಕ್ಕೆಗಳಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಕಟ್ಟಿಸಿರುವ ಸಾಲು ಮಂಟಪಗಳು ೩ ಅಡಿ ಎತ್ತರದ ಅಧಿಷ್ಠಾನದ ಮೇಲಿವೆ. ಸಾಲು ಮಂಟಪಗಳು ಎರಡು ಅಂಕಣಗಳಿಂದ ಕೂಡಿದ್ದು ಕೆಲವು ಮಂಟಪಗಳು ಎರಡಕ್ಕಿಂತ ಹೆಚ್ಚು ಅಂಕಣಗಳನ್ನು ಹೊಂದಿವೆ. ವಿರೂಪಾಕ್ಷ ಬಜಾರನ್ನು ವಿರೂಪಾಕ್ಷಪುರ, ಪಂಪಾರಥಬೀದಿ, ಹಂಪಿ ಬಜಾರ, ತೇರುಬೀದಿ ಇತ್ಯಾದಿಯಾಗಿ ಕರೆಯಲಾಗಿದೆ. ಇಲ್ಲಿಯ ಬಜಾರು ವಿರೂಪಾಕ್ಷ ದೇವಾಲಯದಷ್ಟೇ ಹಳೆಯದು. ಆದರೆ ಆರಂಭದಲ್ಲಿ ಇದು ಕಾರ್ಯನಿರ್ವಹಿಸುತ್ತಿದ್ದುದು ಕೇವಲ ತೇರುಬೀದಿಯಾಗಿ ಮಾತ್ರ. ಪ್ರೌಢದೇವರಾಯನು ಈ ಬೀದಿಯಲ್ಲಿದ್ದ ಕಲ್ಲುಮುಳ್ಳಗಳನ್ನು ತೆಗೆಸಿ ವಿಶಾಲವಾಗಿಸಿದುದನ್ನು ಕುರಿತು ಲಕ್ಕಣ್ಣದಂಡೇಶನು ಶಿವತತ್ವ ಚಿಂತಾಮಣಿಯಲ್ಲಿ ಹೀಗೆ ಹೇಳಿದ್ದಾನೆ.

ತ್ರಿಪುರ ವಿಜಯಿತ ವಿರೂಪಾಕ್ಷನ ಮನೋರಥಕೆ
ಸುಪಥವಾದುದು ದೇವರಾಜೇಂದ್ರನುದಯದಿಂ
ವಿಪುಳೆಯೊಳು ದೃಷ್ಟವಿದೆಯಿಂದೆಂಬ ಮಾಳ್ಕೆಯಿಂ ಪಂಪಾಪುರದೊಳನುದಿನಂ
ಅಪರಿಮಿತ ಗೋಪುರಂಗಳ ಮಧ್ಯವೀಥಿಯಂ
ರಿಪುಕಂಟಕಂಗಳಂ ಸವರುವಂದದಿ ಸವರಿ
ಸುಪವಿತ್ರವೆನಿಸಿದಂ ರಥಪಥವನರುವವರ ಚರಣಾಂಬುಜಕ್ಕೆ ಶರಣು.[೭]

ಈ ಬೀದಿಯನ್ನು ಯಾವ ಉದ್ದೇಶಕ್ಕಾಗಿ ನಿರ್ಮಿಸಲಾಯಿತೆಂಬುದೂ ಸಹ ಇದೇ ಗ್ರಂಥದಿಂದ ಹೇಳಲಾಗಿದೆ.

ಪ್ರಾಚೀನ ಕಾಲದಿಂದಲೂ ಕೇವಲ ತೇರುಬೀದಿಯಾಗಿ ಕಾರ್ಯನಿರ್ವಹಿಸುತ್ತಿದ್ದ ವಿರೂಪಾಕ್ಷ ಬಜಾರು ವಿಜಯನಗರಾವಧಿಯಲ್ಲಿ ವ್ಯವಸ್ಥಿತವಾದ ಸಾಲುಮಂಟಪಗಳ ನಿರ್ಮಾಣದ ಮೂಲಕ ಪ್ರಮುಖ ವ್ಯಾಪಾರ ಕೇಂದ್ರವಾಗಿ ಬೆಳವಣಿಗೆ ಹೊಂದಿದ್ದಿತು. ಆರ್ಥಿಕವಾಗಿ ಪ್ರಸಿದ್ಧಿ ಹೊಂದಿದ ಈ ಬಜಾರು ಧಾರ್ಮಿಕವಾಗಿಯೂ ಪ್ರಾಮುಖ್ಯತೆ ಪಡೆದಿದ್ದುದು ಅಂದಿನ ಮತಮಾನ್ಯಗಳು ಹಾಗು ಪ್ರವಾಸಿಗರ ಹೇಳಿಕೆಗಳಿಂದ ತಿಳಿದುಬರುವ ಸಂಗತಿ. ಅಂತೆಯೇ ವಿಜಯನಗರ ಕಾಲದ ಉತ್ಸವಾಚರಣೆಗಳು ಇಂದಿಗೂ ಜೀವಂತವಾಗಿದ್ದು ಅಂದಿನ ಆಚರಣೆಗಳನ್ನು ನೆನಪಿಸಿಕೊಡುತ್ತಿರುವುದನ್ನು ಹಂಪಿಯಲ್ಲಿ ಕಾಣಬಹುದಾಗಿದೆ.

೫.೧.೨ ಪ್ರಸನ್ನ ವಿರೂಪಾಕ್ಷ ದೇವಾಲಯ : ಹಂಪಿ

**ತಲವಿನ್ಯಾಸ :**

ಪ್ರಸನ್ನ ವಿರೂಪಾಕ್ಷ ದೇವಾಲಯವು ಗರ್ಭಗೃಹ, ಅದಕ್ಕೆ ಸುತ್ತಲೂ ಮುಚ್ಚಿದ ಪ್ರದಕ್ಷಿಣಾಪಥ, ಅಂತರಾಳ, ಸಭಾಮಂಟಪ, ಮಹಾಮುಖಮಂಟಪಗಳನ್ನು ಹೊಂದಿದೆ. ಈ ಪ್ರಧಾನ ದೇವಾಲಯಕ್ಕೆ ಸುತ್ತಲೂ ಕಲ್ಯಾಣ ಮಂಟಪ, ಪರಿವಾರ ದೇವತೆಗಳ ಗುಡಿಗಳು, ಇತರ ಅಕ್ಷ ಮಂಟಪಗಳು ಹಾಗೂ ಬೃಹತ್ತಾದ ಮಹಾದ್ವಾರ ಮಂಟಪಗಳಿವೆ.

**ಶಾಸನದ ಮಾಹಿತಿ :**

ಕ್ರಿ.ಶ. ೧೫೧೩ ರ ಕೃಷ್ಣದೇವರಾಯನ ಕಾಲದ ಶಾಸನವು ಪ್ರಸನ್ನ ವಿರೂಪಾಕ್ಷನಿಗೆ ಕನ್ನಕೀಯ ತಟಿ, ಬಂಕಾಪುರ, ನಾಗಲಾಪುರ, ಗೌರಾಜಿಯ ಕೆರೆ, ಮೂರು ತೋಟ ಮತ್ತು ಭೂಮಿಗಳನ್ನು ದಾನ ನೀಡಿದ ಉಲ್ಲೇಖವಿದೆ.[೮]

**ವಾಸ್ತು ವಿವರ :**

**ಗರ್ಭಗೃಹ** : ಗರ್ಭಗೃಹವು ಮಧ್ಯಮ ಪ್ರಮಾಣದಲ್ಲಿದ್ದು, ನಾಲ್ಕು ಮೂಲೆಗಂಬಗಳನ್ನು ಹೊಂದಿದೆ. ಅದರ ಗೋಡೆಗಳನ್ನು ಮಟ್ಟಸಗೊಳಿಸಿದ ಬೃಹತ್ ಅಳತೆಗಲ್ಲುಗಳಿಂದ ನಿರ್ಮಿಸಲಾಗಿದೆ. ಗರ್ಭಗೃಹದ ಮಧ್ಯದಲ್ಲಿ ಶಿವಲಿಂಗವಿದೆ.

**ಅಂತರಾಳ** : ಗರ್ಭಗೃಹದ ಮುಂದಿರುವ ಅಂತರಾಳವು ಗರ್ಭಗೃಹದಷ್ಟೆ ಉದ್ದ ಮತ್ತು ಅಗಲದ ಅಳತೆಯಲ್ಲಿದೆ. ಇಲ್ಲಿ ಮುಂಭಾಗದಲ್ಲಿ ಎರಡು ಮೂಲೆ ಗಂಬಗಳಿವೆ. ಅಂತರಾಳದ ಗೋಡೆಯನ್ನು ಸಹ ಮಟ್ಟಸಗೊಳಿಸಿದ ಬೃಹತ್ ಅಳತೆಕಲ್ಲುಗಳಿಂದ ನಿರ್ಮಿಸಲಾಗಿದೆ.

**ಪ್ರದಕ್ಷಿಣಾ ಪಥ** : ಪ್ರದಕ್ಷಿಣಾ ಪಥ ಈ ದೇವಾಲಯದ ವಿಶಿಷ್ಟವಾದ ವಾಸ್ತುಭಾಗವಾಗಿದೆ. ಅಂತರಾಳ ಮತ್ತು ಗರ್ಭಗೃಹದ ಸುತ್ತಲೂ ಮುಚ್ಚಿದ ಪ್ರದಕ್ಷಿಣಾ ಪಥ ನಿರ್ಮಿಸಲಾಗಿರುವುದು ಗಮನಾರ್ಹ ಅಂಶವಾಗಿದೆ. ಅಂತರಾಳ ಮತ್ತು ಗರ್ಭಗೃಹ ಹೊರಭಿತ್ತಿಯಿಂದ ಸ್ವಲ್ಪ ಅಂತರದಲ್ಲಿ ಗೋಡೆಯನ್ನು ನಿರ್ಮಿಸಿ, ಸುತ್ತಲೂ ಪ್ರದಕ್ಷಿಣಾ ಪಥವನ್ನು ನಿರ್ಮಿಸಲಾಗಿದೆ.

ಈ ಪ್ರದಕ್ಷಿಣಾ ಪಥದ ಹೊರ ಬದಿಯ ಭಿತ್ತಿಯನ್ನು ಬೃಹತ್ತಾದ ಅಳತೆಕಲ್ಲುಗಳಿಂದ ನಿರ್ಮಿಸಲಾಗಿದ್ದು, ಗರ್ಭಗೃಹ ಮತ್ತು ಅಂತರಾಳದ ಛಾವಣಿ ಪ್ರದಕ್ಷಿಣಾ ಪಥದ ಮೇಲೂ ಆವರಿಸಿರುವುದರಿಂದ ಪ್ರದಕ್ಷಿಣ ಪಥ ಅಂತರಾಳ ಮತ್ತು ಗರ್ಭಗೃಹಗಳು ಗೂಢ ಮಂಟಪದಂತೆ ಕತ್ತಲೆಯಿಂದಾವರಿಸಿವೆ. ಬೆಳಕಿಗಾಗಿ ಪ್ರದಕ್ಷಿಣಾ ಪಥದ ಬಾಹ್ಯ ಭಿತ್ತಿಯಲ್ಲಿ ಅಲ್ಲಲ್ಲಿ ಚಿಕ್ಕದಾದ ಜಾಲರಂದ್ರಗಳನ್ನು ಮಾಡಲಾಗಿದೆ.

**ಸಭಾ ಮಂಟಪ** : ಸಭಾಮಂಟಪವು ೯ ಅಂಕಣಗಳಲ್ಲಿದೆ. ಇಲ್ಲಿ ಮಧ್ಯದಲ್ಲಿ ನಾಲ್ಕು ಸ್ತಂಭಗಳಿವೆ. ಸುತ್ತಲೂ ನಾಲ್ಕು ಮೂಲೆಗಂಬಗಳೂ, ಎಂಟು ಅರ್ಧಗಂಬಗಳಿವೆ. ಸಭಾ ಮಂಟಪದ ಮಧ್ಯದ ನಾಲ್ಕು ಕಂಬಗಳು ಪೀಠ, ಕಾಂಡ, ಕುಂಭ, ಕಳಸ, ಫಲಕಗಳನ್ನು ಹೊಂದಿವೆ. ಕಾಂಡದ ಕೆಳಗೆ ಮತ್ತು ಮೇಲೆ ಅಸಮವಾದ ಚೌಕಭಾಗಗಳಿದ್ದು, ಮಧ್ಯದಲ್ಲಿ ಎಂಟು ಮತ್ತು ಹದಿನಾರು ಮುಖಗಳ ಅಡ್ಡ ಪಟ್ಟಿಕೆಗಳಿವೆ. ಕೆಳ ಚೌಕಭಾಗದ ನಾಲ್ಕು ಮೂಲೆಗಳನ್ನು ಎಲೆಯ ಆಕಾರದಲ್ಲಿ ಕೆತ್ತಿ ಅಲಂಕರಿಸಲಾಗಿದೆ. ಕೆಳಗಿನ ಪಟ್ಟಿ

ಮೇಲಿನ ಚೌಕಭಾಗಗಳಲ್ಲಿ ಪುಷ್ಪಾಕೃತಿ ಮತ್ತು ಇತರೆ ಉಬ್ಬುಶಿಲ್ಪಗಳಿವೆ. ಸಭಾಮಂಟಪದ ಭಿತ್ತಿಯನ್ನು ಕೂಡ ಬೃಹತ್ ಆಳತೆಗಲ್ಲುಗಳಿಂದ ಕಟ್ಟಲಾಗಿದೆ. ಇಲ್ಲಿಯ ಛತ್ತು ಸಮತಟ್ಟಾಗಿದೆ.

**ಮೂಲ ಮುಖ ಮಂಟಪ** : ಸಭಾ ಮಂಟಪದ ಮುಂಭಾಗದಲ್ಲಿ ಒಂದು ಅಂಕಣದ ಮೂಲ ಮುಖ ಮಂಟಪವಿದೆ. ಇದು ಮುಂಭಾಗದಲ್ಲಿ ತೆರದಿದ್ದು, ಎರಡು ಕಂಬಗಳನ್ನು ಹೊಂದಿದೆ. ಈ ಕಂಬಗಳು ಕಾಂಡದಲ್ಲಿ ಎಂಟು ಮುಖದ ಲಂಬ ಪಟ್ಟಿಕೆಗಳನ್ನು ಹೊಂದಿವೆ. ಈ ಎಲ್ಲಾ ಭಾಗಗಳು ಕೆಳಭಾಗಗಳು ಕೆಳಭಾಗದಲ್ಲಿ ನೀರಿನಿಂದ ಆವೃತವಾಗಿವೆ. ಈ ಪುಟ್ಟ ಮುಖ ಮಂಟಪ, ಸಭಾ ಮಂಟಪ, ಅಂತರಾಳ, ಗರ್ಭಗೃಹ, ಪ್ರದಕ್ಷಿಣಾ ಪಥ ದೇವಾಲಯದ ಮೂಲ ವಾಸ್ತು ಭಾಗಗಳಾಗಿವೆ.

**ಮಹಾ ಮುಖ ಮಂಟಪ :**

ಮೂಲ ಮುಖ ಮಂಟಪದ ಮುಂದೆ ಮಹಾ ಮುಖ ಮಂಟಪವನ್ನು ಕಟ್ಟಲಾಗಿದೆ. ಇದು ಸಾಲಾಗಿ ಏಳು ಕಂಬಗಳಲ್ಲಿದ್ದು, ವಿಸ್ತಾರವಾಗಿದೆ. ಇದರ ವಾಸ್ತು ಲಕ್ಷಣ ಗಮನಿಸಿದಾಗ ಇದು ನಂತರದ ಸೇರ್ಪಡೆ ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ಎತ್ತರವಾದ ಕಂಬಗಳಿವೆ. ಈ ಕಂಬಗಳು ಏಕಕಾಂಡದ ರುಚಕ ಸ್ತಂಭಗಳಾಗಿವೆ. ಕಾಂಡದ ಕೆಳಭಾಗದಲ್ಲಿ ಆಯತಾಕಾರದ ಚೌಕ ಭಾಗವಿದ್ದು, ಅದರ ನಾಲ್ಕು ಮೂಲೆಗಳನ್ನು ಎಲೆಯ ಆಕಾರದಲ್ಲಿ ಕಂಡರಿಸಲಾಗಿದೆ. ಮೇಲೆ ಅಷ್ಟಮುಖದ ಕಿರುಭಾಗವಿದ್ದು, ಉಳಿದಂತೆ ಇಡಿ ಕಾಂಡವು ಹದಿನಾರು ಮುಖಗಳ ದೀರ್ಘ ಲಂಬ ಪಟ್ಟಿಗಳನ್ನು ಹೊಂದಿದೆ. ಕಂಬಗಳ ಮೇಲ್ಭಾಗದಲ್ಲಿ ಅಷ್ಟೇನೂ ಆಕರ್ಷಕವಲ್ಲದ ಬೋದಿಗೆಗಳಿವೆ. ಈ ಮುಖಮಂಟಪದ ಮಧ್ಯದಲ್ಲಿ ಎತ್ತರವಾದ ದೀಪಸ್ತಂಭವಿದೆ. ಇದರಿಂದ ಸ್ಪಷ್ಟವಾಗುವ ಸಂಗತಿಯೆಂದರೆ, ಮೂಲತಃ ಬಯಲಿನಲ್ಲಿದ್ದ ಈ ಸ್ತಂಭವು ಮಹಾಮಂಟಪವನ್ನು ಕಟ್ಟುವ ಸಂದರ್ಭದಲ್ಲಿ ಆ ಕಂಬವನ್ನು ತೆಗೆಯದೇ ಅದರ ಸುತ್ತಲೂ ಆವರಿಸಿ, ಮಹಾ ಮುಖಮಂಟಪ ರಚಿಸಿರುವುದು. ಇದು ಮುಖಮಂಟಪದ ನಂತರ ರಚನೆ ಎಂಬುದಾಗಿ ಪುಷ್ಠೀಕರಿಸುತ್ತದೆ. ಈ ಮುಖಮಂಟಪದಲ್ಲಿ ಮೂಲ ಮುಖ ಮಂಟಪದ ಎರಡೂ ಬದಿಗೆ ದೇವತಾ ಕೋಷ್ಠಗಳನ್ನು ಕಟ್ಟಲಾಗಿದೆ. ಮಹಾಮುಖಮಂಟಪವು ದೇವಾಲಯದ ಸಭಾಮಂಟಪದ ವರೆಗೆ ಉತ್ತರ ಮತ್ತು ದಕ್ಷಿಣ ಬದಿಗೆ ವಿಸ್ತರಿಸಿದೆ.

**ಕಲ್ಯಾಣ ಮಂಟಪ :**

ಪ್ರಧಾನ ದೇವಾಲಯದ ಎಡ ಮೂಲೆಯಲ್ಲಿ ಆಕರ್ಷಕವಾದ ಕಲ್ಯಾಣ ಮಂಟಪವಿದ್ದು, ಮಧ್ಯದಲ್ಲಿ ಎತ್ತರವಾದ ವೇದಿಕ ಅದರ ನಾಲ್ಕೂ ಮೂಲೆಗೆ ಕಂಬಗಳು ಮತ್ತು ವೇದಿಕೆ ಸುತ್ತಲೂ ವಿಶಾಲವಾದ ಸಭಾಂಗಣವಿದೆ. ಇಲ್ಲಿನ ಕಂಬಗಳು ವಿಜಯನಗರದ ವಿಶಿಷ್ಠಶೈಲಿಯಾದ ಕೆಳಗೆ, ಮಧ್ಯ, ಮೇಲೆ ಮೂರು ಅಸಮ ಚೌಕಭಾಗಗಳನ್ನು ಹೊಂದಿದ ಶೈಲಿಯಲ್ಲಿದೆ. ಈ ಚೌಕಭಾಗಗಳ ಮೇಲೆಲ್ಲಾ ಉಬ್ಬುಶಿಲ್ಪಗಳಿವೆ. ಈ ಕಂಬಗಳ ಮೇಲೆ ಪುಷ್ಪಬೋದಿಗೆಗಳಿವೆ. ವಾಸ್ತುಶೈಲಿಯಿಂದ ಈ ಕಲ್ಯಾಣ ಮಂಟಪ ೧೬ ನೇ ಶತಮಾನದ ಪೂರ್ವಕಾಲದ್ದೆಂದು ತೋರುತ್ತದೆ.

**ಇತರ ಮಂಟಪಗಳು / ಅಕ್ಷ ಮಂಟಪಗಳು :**

ದೇವಾಲಯದ ಹಿಂಬದಿಯಲ್ಲಿ ಕಂಬಗಳ ಮಂಟಪ / ಅಕ್ಷ ಮಂಟಪ ಮತ್ತು ಚಿಕ್ಕ ಏಕ ಅಂಕಣದ ಗುಡಿಗಳಿದ್ದು, ಬಹುಮಟ್ಟಿಗೆ ಶಿಥಿಲವಾಗಿವೆ.

**ಪ್ರವೇಶ ದ್ವಾರಗಳು :**

ದೇವಾಲಯಕ್ಕೆ ಎರಡು ಪ್ರವೇಶ ದ್ವಾರಗಳಿವೆ. ಮಹಾಮುಖ ಮಂಟಪದ ಎದುರಿನಲ್ಲಿ ಒಂದು ಚಿಕ್ಕ ದ್ವಾರ ಮಂಟಪವಿದೆ. ಇದು ಭಿತ್ತಿರಹಿತವಾದ ಕೇವಲ ಕಂಬಗಳ ಮಂಟಪವಾಗಿದೆ. ಈ ಕಂಬಗಳು ಯಾವುದೇ ಅಲಂಕರಣೆ ಹೊಂದಿರದೆ ತೀರಾ ಸರಳವಾಗಿವೆ. ಈ ಮಂಟಪದ ಛತ್ತು ಸಮತಟ್ಟಾಗಿದ್ದು, ಮಾಡಿನಲ್ಲಿ ಸುತ್ತಲೂ ಇಳಿಜಾರಾದ ಮುಂಜೂರು ಇದೆ. ಈ ಮಂಟಪದ ಮುಖಭಾಗದಲ್ಲಿ ಎರಡೂ ಕಡೆಗೆ ಪ್ರಕಾರ ಗೋಡೆಯನ್ನು ನಿರ್ಮಿಸಲಾಗಿದ್ದಿತು. ಆದರೆ ಈಗ ಈ ಗೋಡೆ ಶಿಥಿಲವಾಗಿದ್ದು, ಕೆಳಗಿನ ಕಲ್ಲುಗಳು ಮಾತ್ರ ಗೋಚರಿಸುತ್ತವೆ.

**ಪ್ರಧಾನ ಪ್ರವೇಶ ದ್ವಾರ :**

ಚಿಕ್ಕ ಪ್ರವೇಶ ದ್ವಾರದಿಂದ ಸ್ವಲ್ಪ ದೂರದಲ್ಲಿ ಬೃಹತ್ತಾದ ದ್ವಾರ ಮಂಟಪವಿದೆ. ಇದು ಹಂಪಿಯ ಎಲ್ಲ ಬೃಹತ್ ದೇವಾಲಯಗಳ ದ್ವಾರ ಮಂಟಪದಂತಿದ್ದು, ವಿಜಯನಗರದ ವಾಸ್ತು ಶಿಲ್ಪ ಔನತ್ಯ ಕಾಲದ ರಚನೆಯಾಗಿದೆ. ಈ ದ್ವಾರ ಮಂಟಪದ ಒಳಭಾಗದಲ್ಲಿ ಕಂಬಗಳ ಗೂಡು ಮಂಟಪಗಳಿವೆ. ಮೂಲ ಅಧಿಷ್ಠಾನ, ಅದರ ಮೇಲೆ ಮತ್ತೊಂದು ಉಪ ಅಧಿಷ್ಠಾನವಿದ್ದು, ಮೇಲೆ ಭಿತ್ತಿ ಇದೆ. ಭಿತ್ತಿಯಲ್ಲಿ ಅರ್ಧ ಕಂಬಗಳ ಕುಂಬ ಪಂಜರಗಳ ಅಲಂಕರಣೆಗಳಿವೆ. ಈ ದ್ವಾರಮಂಟಪದ ಛತ್ತಿನ ಮೇಲೆ ಯಾವುದೇ ಶಿಖರಗಳಿಲ್ಲ. ಪ್ರಾಯಶಃ ಕಲ್ಯಾಣ ಮಂಟಪ ಮತ್ತು ಈ ಪ್ರವೇಶ/ದ್ವಾರ ಮಂಟಪಗಳು ಕೃಷ್ಣದೇವರಾಯನ ಕಾಲದ ರಚನೆಗಳೆಂದು ತೋರುತ್ತವೆ.

**೫.೧.೩ ಮೂಲ ವಿರೂಪಾಕ್ಷ ದೇವಾಲಯ (ಹಂಪಿ / ಹೇಮಕೂಟ)**

**ತಲವಿನ್ಯಾಸ :**

ಹೇಮಕೂಟದ ಸುಂದರ ಬೆಟ್ಟದ ಪ್ರಾಚೀನ ದೇವಾಲಯ ಸಮುಚ್ಚಯಗಳಲ್ಲೊಂದಾದ ಮೂಲ ವಿರೂಪಾಕ್ಷ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ತೆರೆದ ಸಭಾ ಮಂಟಪಗಳಿಂದ ಕೂಡಿದೆ.

**ವಾಸ್ತು ವಿವರ :**

**ಸಭಾ ಮಂಟಪ :** ಈ ದೇವಾಲಯವು ತೆರೆದ ಸಭಾ ಮಂಟಪವನ್ನು ಹೊಂದಿದ್ದು ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ದೇವಾಲಯ ಪ್ರವೇಶಿಸಲು ಸೋಪಾನಗಳನ್ನು ನಿರ್ಮಿಸಲಾಗಿದೆ. ಮಧ್ಯದ ವೇದಿಕೆಯಲ್ಲಿ ಪ್ರಮುಖವಾದ ನಾಲ್ಕು ಕಂಬಗಳು, ಸುತ್ತಲೂ ಎಂಟು ಕಂಬಗಳು ಹಾಗು ನಾಲ್ಕೂ ಗೋಡೆಗೆ ಹೊಂದಿಕೊಂಡ ಅರ್ಧಗಂಬಗಳಿವೆ. ಮಧ್ಯದ ಚೌಕಾಕಾರದ ನಾಲ್ಕು ಕಂಬಗಳು ಕೆಳಗೆ ಮೇಲೆ ಚೌಕ (ಕಾಂಡ) ಮಧ್ಯ ಎಂಟು-ಹದಿನಾರು ಭಾಗದ ಪಟ್ಟಿಕೆಗಳು ಚೌಕಾಕಾರದ ಫಲಕ ಹೊಂದಿದ್ದು ಸರಳ ಬೋದಿಗೆಗಳಿಂದ ಕೂಡಿವೆ. ಭುವನೇಶ್ವರಿ ಸರಳ ರೀತಿಯ ಅರಳು ಕಮಲಾಕೃತಿಯಿಂದ ಕೂಡಿದೆ. ಅಂತರಾಳ ದ್ವಾರದ ಎರಡೂ ಬದಿಯಲ್ಲಿ ಕೋಷ್ಠರೂಪಗಳಿದ್ದು ಯಾವುದೇ ಶಿಲ್ಪಗಳಿಲ್ಲ.

**ಅಂತರಾಳ :** ಅಂತರಾಳದ ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ದ್ವಾರದ ಇಕ್ಕೆಲಗಳಲ್ಲಿ ಕುಂಬಾಕೃತಿಯ ಚಿತ್ರಗಳಿವೆ. ಅಂತರಾಳದ ಭಾಗದಲ್ಲಿ ನಾಲ್ಕು ಅರ್ಧ ಮೂಲೆಗಳನ್ನು ಹಾಗೂ ಮಧ್ಯದಲ್ಲಿ ಪೀಠದ ಮೇಲೆ ಸುಮಾರು ಎರಡು ಅಡಿ ಎತ್ತರದ ನಂದಿಯನ್ನು ಕಾಣಬಹುದು. ಛತ್ತಿನಲ್ಲಿ ಭುವನೇಶ್ವರಿ ಸರಳವಾದ ಅರಳು ಕಮಲಾಕೃತಿಯಿಂದ ಕೂಡಿದೆ.

**ಗರ್ಭಗೃಹ :** ಗರ್ಭಗೃಹದ ಮಧ್ಯದಲ್ಲಿ ಸುಮಾರು ಎರಡೂವರೆ ಅಡಿ ಎತ್ತರದ ಶಿವಲಿಂಗವನ್ನು (ವಿರೂಪಾಕ್ಷ) ಪ್ರತಿಷ್ಠಾಪಿಸಲಾಗಿದೆ. ಇದರ ದ್ವಾರಬಾಗಿಲು ಸರಳವಾಗಿದ್ದು, ಬಾಗಿಲ ಇಕ್ಕೆಲಗಳಲ್ಲಿ ಕೆಳಭಾಗದಲ್ಲಿ ಕುಂಭಾಕೃತಿಯ ಚಿತ್ರಗಳಿಂದ ಅಲಂಕರಿಸಲಾಗಿದೆ. ಗರ್ಭಗೃಹದ ಒಳಭಾಗದಲ್ಲಿ ನಾಲ್ಕು ಅರ್ಧ ಮೂಲೆಗಂಬಗಳನ್ನು ಮತ್ತು ಒಳಭಾಗದ ಬಲಪಕ್ಕದಲ್ಲಿ ಚಿಕ್ಕ ಕೈಪಿಡಿಯನ್ನು ಕಾಣಬಹುದು. ಹಾಗೆಯೇ ಗರ್ಭಗೃಹದ ಭುವನೇಶ್ವರಿ ಕೂಡಾ ಸರಳ ಪುಷ್ಪಾಕೃತಿಯಿಂದ ಕೂಡಿದೆ.

**೫.೧.೪ ಪ್ರಸನ್ನ ಶ್ರೀ ಪಂಪಾವಿರೂಪಾಕ್ಷೇಶ್ವರ ದೇವಾಲಯ–ಹಿರೇಜಂತಕಲ್**

**ತಲವಿನ್ಯಾಸ :**

ಈ ದೇವಾಲಯವು ಪ್ರಧಾನ ಗರ್ಭಗೃಹ, ಅಂತರಾಳ, ಸಭಾ ಮಂಟಪ, ಸಭಾ ಮಂಟಪಕ್ಕೆ ಎಡಬದಿಗೆ ದೇವಿ ಗರ್ಭಗೃಹ, ಮುಖಮಂಟಪ ಮತ್ತು ಎರಡು ಮಹಾ ದ್ವಾರಮಂಪಟ ಹಾಗೂ ಎರಡು ದ್ವಾರ ಮಂಪಟಗಳ ನಡುವೆ ಎಡಬದಿಗೆ ಯಜ್ಞಶಾಲೆಯನ್ನು ಹೊಂದಿದೆ.

**ಶಾಸನದ ಮಾಹಿತಿ :**

ಹಿರೇಜಂತಕಲ್ ಆಂಜನೇಯ ದೇವಾಲಯದ ಮುಂದಿನ ಕ್ರಿ.ಶ. ೧೫೪೪ ರ ಕಾಲದ ಶಾಸನವೊಂದರಲ್ಲಿ ಸದಾಶಿವದೇವರಾಯನ ಮಹಾಮಂಡಲೇಶ್ವರ ತಿರುಮಲ ರಾಜನ ಕಾರ್ಯಕರ್ತ ಚಂದ್ರಗಿರಿಯ ದೇಮರಸಯ್ಯನು ಪ್ರಸನ್ನ ವಿರೂಪಾಕ್ಷ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ಉಲ್ಲೇಸುತ್ತದೆ.[6] ಈ ದೇವಾಲಯ ಸಂಗಮ ದೊರೆಗಳ ಕಾಲದ್ದಾಗಿದೆ.

**ವಾಸ್ತು ವಿವರ :**

**ಮುಖ್ಯ ಪ್ರವೇಶ ದ್ವಾರ / ಒಂದನೇ ಪ್ರವೇಶ ದ್ವಾರ :** ಪ್ರಧಾನ ಪ್ರವೇಶದ್ವಾರವು ಗಾತ್ರ ಮತ್ತು ಪ್ರಮಾಣದಲ್ಲಿ ಬೃಹತ್ ಆಗಿದೆ. ಇದು ಮಧ್ಯದ ಬೃಹತ್ ಬಾಗಿಲು ಚೌಕಟ್ಟಿನ ಮುಂದೆ ವಿಶಾಲವಾದ ಮತ್ತು ಅದರ ಒಳಭಾಗದಲ್ಲಿ ಪುಟ್ಟದಾದ ಎರಡು ಮಂಟಪಗಳನ್ನು ಹೊಂದಿದೆ. ಈ ಪ್ರಧಾನ ಮುಖ ಮಂಟಪವು ಮೂರು ಅಂಕಣಗಳಲ್ಲಿದ್ದು, ಮಧ್ಯದ ಅಂಕಣವು ಪ್ರವೇಶದ ಹಾದಿಯಾದರೆ ಬದಿಯ ಎರಡು ಅಂಕಣಗಳಲ್ಲಿ ಎತ್ತರವಾದ ಕಟ್ಟೆಗಳಿವೆ. ಈ ಕಟ್ಟೆಗಳ ಮುಖಭಾಗವು ಅಧಿಷ್ಠಾನ ರೂಪದಲ್ಲಿದ್ದು, ಉಪಾನ, ವೃತ್ತಕುಮುದ, ಕಪೋತಗಳನ್ನು ಹೊಂದಿದೆ. ಈ ಅಧಿಷ್ಠಾನ (ಕಟ್ಟೆ) ಮುಂಬದಿಯ ನಾಲ್ಕು ಮೂಲೆಗಳಲ್ಲಿ ಬೃಹತ್ತಾದ ನಾಲ್ಕು ಸ್ತಂಭಗಳಿವೆ. ಈ ಸ್ತಂಭಗಳು ವಿಜಯನಗರದ ವಿಶಿಷ್ಟವಾದ ದ್ವಿಕಾಂಡ ಶೈಲಿಯಲ್ಲಿದ್ದು ಪ್ರಧಾನ ಕಾಂಡದಲ್ಲಿ ಕೆಳಗೆ, ಮಧ್ಯೆ, ಮೇಲೆ ಮೂರು ಅಸಮವಾದ ಚೌಕ ಭಾಗಗಳಿವೆ. ಈ ಚಕ ಭಾಗಗಳ ಬದಿಯ ಮುಖಗಳಲ್ಲಿ ಕುಳಿತ ಸಿಂಹ, ಹಂಸ, ಸರ್ಪಧಾರಿ, ಶಂಕವಾದಕ, ಶಂಖ, ಸ್ತ್ರೀ, ಬೆಣ್ಣೆ ಕೃಷ್ಣ ಮುಂತಾದ ಉಬ್ಬು ಶಿಲ್ಪಗಳಿವೆ. ಮಧ್ಯದ ಎರಡು ಕಂಬಗಳ ಉಪಕಾಂಡದಲ್ಲಿ ಆನೆಯ ಮೇಲೆ ಹಿಂದಿನ ಕಾಲನ್ನು ಊರಿ ನಿಂತ ಗಜಶಾರ್ದೂಲಗಳ ಶಿಲ್ಪಗಳಿವೆ. ಬದಿಯ ಎರಡು ಕಂಬಗಳ ಉಪಕಾಂಡದಲ್ಲಿ ಉಪಸ್ತಂಭಗಳನ್ನು ಹೊತ್ತುನಿಂತ ಸಿಂಹದ ಶಿಲ್ಪಗಳಿವೆ. ಈ ನಾಲ್ಕು ಕಂಬಗಳ ಮೇಲೆ ಪುಷ್ಪ ಬೋದಿಗೆಗಳಿವೆ. ಕಂಬಗಳ ಮೇಲ್ಭಾಗದಲ್ಲಿ ಮುಖಭಾಗದಲ್ಲಿ ಅರೆ ವೃತ್ತಾಕಾರದ ಮುಂಚಾಚು ಇದೆ. ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಿದ ಮಾಡು ಇದೆ. ಛತ್ತು ಸರಳವಾಗಿದೆ.

ಬಾಗಿಲು ಚೌಕಟ್ಟು ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಈ ಚೌಕಟ್ಟಿನ ಬದಿಯಲ್ಲಿ ಎರಡೂ ಕಡೆ ಲತೆಯನ್ನು ಆಶ್ರಯಿಸಿ ನಿಂತ ಬಾಲಿಕೆಯರ ಶಿಲ್ಪಗಳಿವೆ. ಬಾಗಿಲು ಚೌಕಟ್ಟಿನ ಹಿಂಭಾಗದಲ್ಲಿ ಎರಡು ಕಂಬಗಳಿವೆ. ಈ ಕಂಬಗಳಿಗೂ ಮತ್ತು ಬಾಗಿಲು ಚೌಕಟ್ಟಿನ ಮಧ್ಯೆ ಸುಮಾರು ಎರಡು ಅಡಿ ಅಂತರವಿರುವುದರಿಂದ ಅಲ್ಲಿ ಪುಟ್ಟ ಮಂಟಪದಂತೆ ತೋರುತ್ತದೆ. ಇಲ್ಲಿಯ ಕಂಬಗಳು ಕೆಳಗೆ, ಮಧ್ಯೆ, ಮೇಲೆ ಮೂರು ಅಸಮ ಚೌಕಭಾಗ ಹೊಂದಿದ್ದು ಅವುಗಳ ಚೌಕಭಾಗದಲ್ಲಿ ಯಕ್ಷ, ಭಕ್ತ, ಶಿವಲಿಂಗ, ಕುಂಭ ಹೊತ್ತ ಸ್ತ್ರೀ, ಬೇಡತಿ, ಆನೆ, ಲಿಂಗ, ಸರ್ಪ, ಶಂಖ ಮುಂತಾದ ಉಬ್ಬುಶಿಲ್ಪಗಳಿವೆ.

**ಯಜ್ಞಶಾಲೆ :**

ಮೊದಲನೇ ಪ್ರವೇಶ ಮಂಟಪ ಮತ್ತು ಎರಡನೇ ಪ್ರವೇಶ ಮಂಟಪಗಳ ನಡುವೆ ಸುಮಾರು ಹತ್ತು ಅಡಿ ಅಂತರವಿದ್ದು ಮಧ್ಯದಲ್ಲಿ ಎಡಬದಿಗೆ ವಿಶಾಲವಾದ ಮಂಟಪವಿದ್ದು ಅಲ್ಲಿ ಕಲ್ಯಾಣ ಮಂಟಪ ಮತ್ತು ಯಜ್ಞಶಾಲೆ ಇದೆ. ಇದು ಪೂರ್ವಾಭಿಮುಖವಾಗಿದೆ.

**ಎರಡನೇ ದ್ವಾರ ಮಂಟಪ :**

ದೇವಾಲಯದ ಎರಡನೇ ದ್ವಾರ ಮಂಪಟವು ಕೂಡ ಬೃಹತ್ ಪ್ರಮಾಣದಲ್ಲಿದೆ. ಇಲ್ಲಿ ಪ್ರವೇಶ ಬಾಗಿಲು, ಚೌಕಟ್ಟಿನ ಮುಂದೆ ಮತ್ತು ಹಿಂದೆ ಎರಡೂ ಬದಿಯಲ್ಲಿ ಮಂಟಪಗಳಿವೆ. ಮುಂಬದಿಯ ಮಂಟಪವು ಮೂರು ಅಂಕಣಗಳಲ್ಲಿದೆ. ಮಧ್ಯದ ಅಂಕಣ ಪ್ರವೇಶ ಹಾದಿಯಾದರೆ ಎರಡು ಬದಿ ಎತ್ತರವಾದ ಕಟ್ಟೆಗಳಿವೆ. ಇವುಗಳ ಮುಖಭಾಗ ಅಧಿಷ್ಠಾನರೂಪದಲ್ಲಿದ್ದು, ಅಲ್ಲಿ ಉಪಾನ, ವೃತ್ತಕುಮುದ ಮತ್ತು ಕಪೋತಗಳಿವೆ. ಕಪೋತದ ಮೇಲೆ ಸಾಲಾಗಿ ಕೀರ್ತಿ ಮುಖದ ಅಲಂಕರಣೆಯಿದೆ. ಈ ಕಟ್ಟೆಗಳ ಒಳ ತುದಿಗಳಲ್ಲಿ ಎರಡು ಬೃಹತ್ ಕಂಬಗಳಿವೆ. ಇವು ಎರಡು ಕಾಂಬಗಳಿದ್ದು ಉಪಕಾಂಡದಲ್ಲಿ ಆನೆಗಳನ್ನು ಹಿಂಗಾಲಿನಿಂದ ತುಳಿದು ಮೇಲೆಕ್ಕೆ ಎದ್ದುನಿಂತ ಸಿಂಹ ಶಿಲ್ಪಗಳಿವೆ. ಪ್ರಧಾನ ಕಾಂಡದ ಚೌಕ ಭಾಗದಲ್ಲಿ ಪ್ರಾಯಶಃ ದೊರೆಯ ಅಂಜಲಿ ಮುದ್ರೆಯಲ್ಲಿರುವ (ತಲೆಯ ಮೇಲೆ ಎತ್ತರವಾದ ಟೊಪ್ಪಿಗೆಯಾಕಾರದ ಕಿರೀಟವಿದೆ.) ಹಾಗೇ ಗಜಾನನ, ಬೇಡರ ಕಣ್ಣಪ್ಪ, ಹಂಸ, ಕುಳಿತ ಸಿಂಹ, ಶಿವಲಿಂಗ, ಮುಂತಾದ ಶಿಲ್ಪಗಳಿವೆ. ಕಂಬಗಳ ಮೇಲೆ ಪುಷ್ಪಬೋದಿಗೆಗಳಿದ್ದು, ಅವುಗಳ ಮೇಲೆ ಮುಖಭಾಗದಲ್ಲಿ ಅರೆ ವೃತ್ತಾಕಾರದ ಮುಂಜೂರು ಇದೆ. ಈ ಮುಖಮಂಟಪವದ ೨ ಬದಿಗೆ ಭಿತ್ತಿಗಳಿವೆ. ಛತ್ತು ಸಮತಟ್ಟಾಗಿದೆ.

ಒಳಭಾಗದ ಮಂಟಪವು ಕೂಡ ಮೂರು ಅಂಕಣ ಹೊಂದಿದ್ದು, ಮಧ್ಯದಲ್ಲಿ ಎರಡು ಬದಿ ಕಟ್ಟೆಗಳ ನಡುವೆ ಕಾಂಡದಲ್ಲಿ ಮೂರು ಅಸಮ ಚೌಕ ಭಾಗ ಹೊಂದಿರುವ ಸರಳವಾದ ಕಂಬಗಳಿವೆ. ಈ ಮಂಟಪದ ಉತ್ತರ ಬದಿಗೆ ಮತ್ತೊಂದು ದ್ವಾರ ಚೌಕಟ್ಟು ಇದ್ದು ಅದರ ಎರಡೂ ಬದಿಯ ಮುಖಭಾಗದಲ್ಲಿ ಲತೆಯನ್ನು ಆಶ್ರಯಿಸಿ ನಿಂತ ಬಾಲಿಕೆಯರ ಶಿಲ್ಪಗಳಿವೆ. ಬಾಗಿಲು ಚೌಕಟ್ಟಿನ ಒಳಮುಖದಲ್ಲಿ ಎರಡು ಬದಿಗೆ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಒಂದು ಸಮಭಂಗಿಯಲ್ಲಿದ್ದರೆ ಇನ್ನೊಂದು ಪಾರ್ಶ್ವಭಂಗಿಯಲ್ಲಿದೆ. ಈ ಮಂಟಪದ ಎರಡೂ ಬದಿಗೆ ಅಧಿಷ್ಠಾನ ಆಕರ್ಷಕವಾಗಿದೆ. ಅವುಗಳಲ್ಲಿ ಉಪಾನ, ಕುಮುದ, ಗಳ, ಕಪೋತ ಭಾಗಗಳು ಇವೆ. ಹಾಗೆಯೇ ಎರಡೂ ಬದಿಗೆ ಭಿತ್ತಿಗಳೂ ಸಹ ಆಕರ್ಷಕವಾಗಿವೆ. ಇಲ್ಲಿ ಪುನಃ ಉಪಾನ, ಕುಮುದ, ಕಪೋತಗಳು ಇದ್ದು ಅವುಗಳ

ಮೇಲೆ ದೇವಕೋಷ್ಠಗಳು, ಅರ್ಧಗಂಭಗಳ ಕುಂಭ ಪಂಜರಗಳ ಅಲಂಕರಣೆ ಇದೆ. ಅಂತೆಯೇ ಮೇಲೆ ಇಟ್ಟಿಗೆ ಮತ್ತು ಗಾರೆಯ ಮಾಡಿದೆ.

**ಪ್ರಧಾನ ದೇವಾಲಯ :**

ದ್ವಾರ ಮಂಟಪ ಪ್ರಧಾನ ದೇವಾಲಯಗಳ ಮಧ್ಯದಲ್ಲಿ ಸುಮಾರು ಹನ್ನೆರಡು ಅಡಿಗಳ ಅಂತರವಿದೆ. ಪ್ರಧಾನ ದೇವಾಲಯವು ಮುಖಮಂಟಪ, ಸಭಾಮಂಟಪ, ಅದಕ್ಕೆ ಪಶ್ಚಿಮ ಬದಿಯಲ್ಲಿ ಉಪ ಗರ್ಭಗೃಹ, ದಕ್ಷಿಣ ಬದಿಯಲ್ಲಿ ಅಂತರಾಳ ಮತ್ತು ಗರ್ಭಗೃಹಗಳಿವೆ. ಸಭಾ ಮಂಟಪಕ್ಕೆ ಹೊಂದಿಕೊಂಡಿರುವ ಪಶ್ಚಿಮ ಬದಿಯ ದೇವಿ ಗರ್ಭಗೃಹದ ಎದುರಿಗೆ ಪೂರ್ವ ದಿಕ್ಕಿನಲ್ಲಿ ಉಪ ಪ್ರವೇಶದ್ವಾರವಿದೆ.

**ಮುಖಮಂಟಪ :**

**ದ್ವಾರ ಪಾಲಕರು :** ಮಂಟಪದ ದ್ವಾರ ಬಂಧದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಚಿತ್ರಗಳಿವೆ. ಈ ಬಾಗಿಲ ಎರಡೂ ಬದಿಯಲ್ಲಿ ಸುಮಾರು ಎಂಟು ಅಡಿ ಎತ್ತರದ ಬೃಹತ್ತಾದ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಚತುರ್ಭುಜದಾರಿಗಳಾಗಿರುವ ಇವರ ಹಿಂದಿನ ಕೈಗಳಲ್ಲಿ ತ್ರಿಶೂಲ, ಢಮರು ಮುಂದಿನ ಕೈಗಳಲ್ಲಿ ಅಭಯ ಮುದ್ರೆ ತಾಳಿದ್ದು, ಅದರ ಮೇಲೆ ಒಂದು ಕಾಲನ್ನು ಇರಿಸಿರುವ ಒಂದು ಶಿಲ್ಪ ಹಾಗೆಯೇ ಪಾರ್ಶ್ವ ಭಂಗಿಯಲ್ಲಿರುವ ಇನ್ನೊಂದು ಶಿಲ್ಪವನ್ನು ಇಲ್ಲಿ ಕಾಣಬಹುದು.

**ಸ್ತಂಭಗಳು :** ಮುಖಮಂಟಪ ಪ್ರತಿ ಸಾಲಿನಲ್ಲಿ ೫ ರಂತೆ ಮೂರು ಸಾಲಿನಲ್ಲಿ ಹದಿನೈದು ಅಂಕಣ ಹೊಂದಿದೆ. ಇದು ಆಯತಾಕಾರದ ತಲವಿನ್ಯಾಸದಲ್ಲಿದ್ದು ಸಭಾಮಂಟಪಕ್ಕಿಂತ ವಿಶಾಲಾವಾಗಿದೆ. ಇಲ್ಲಿ ಮುಖಭಾಗ ಸಹಿತ ಒಟ್ಟು ಮೂರು ಸಾಲುಗಳಲ್ಲಿ ಹನ್ನೆರಡು ಕಂಬಗಳಿವೆ. ಒಳಗಿನ ಎಡು ಸಾಲು ಕಂಬಗಳು ಕಾಂಡಭಾಗದಲ್ಲಿ ಕೆಳಗೆ, ಮಧ್ಯೆ, ಮೇಲೆ ಮೂರು ಅಸಮ ಚೌಕ ಭಾಗ ಹೊಂದಿದ್ದು ಈ ಚೌಕ ಭಾಗಗಳ ನಡುವೆ ಅಷ್ಟ ಮುಖಗಳ ಪಟ್ಟಿಕೆಗಳಿವೆ. ಈ ಚೌಕಭಾಗದ ಎಲ್ಲ ಬದಿಯ ಮೇಲೂ ಉಬ್ಬುಶಿಲ್ಪಗಳಿವೆ. ಅವು ನಾಗಲಿಂಗ, ನೃತ್ಯಗಾರ್ತಿ, ಕುಳಿತ ಸಿಂಹ, ಹಂಸ, ಆಸೀನನಾಗಿರುವ ಗದಾಧಾರಿ, ಕಾಳಿಂಗಮರ್ಧನಕೃಷ್ಣ, ಭಕ್ತ, ಶಿವಲಿಂಗಕ್ಕೆ ಕ್ಷೀರಧಾರೆಗೈಯುತ್ತಿರುವ ಹಸು, ಇಷ್ಟಲಿಂಗ ಆರಾಧಕ, ಜಠಾಯೋಗಿ, ತಮಟೆ ವಾದಕ, ಭಕ್ತೆ, ವಿವಿಧ ಭಂಗಿಯಲ್ಲಿ ಧ್ಯಾನ ನಿರತ ಯೋಗಿಗಳು, ಸಿಂಹ, ಹಂಸ, ಗಜಾನನ, ಬಕಪಕ್ಷಿ, ಶಂಖ, ಸೂರ್ಯ, ನರಶಾರ್ದೂಲ, ವಿದೂಶಕ, ನಂದಿವಾಹನ, ಶಿವಪಾರ್ವತಿ, ಬಾಣ ತಾಗಿದ ವರಾಹ, ನಂದಿ ಹೀಗೆ ವಿವಿಧ ಪುಷ್ಪಾಕೃತಿಯ ಉಬ್ಬು ಶಿಲ್ಪಗಳಿವೆ. ಈ ಮುಖಮಂಟಪದ ಮುಖಭಾಗದ ಮಧ್ಯದ ನಾಲ್ಕು ಮತ್ತು ಕೊನೆಯ ಎರಡು ಒಟ್ಟು ಆರು ಕಂಬಗಳು ವಿಶಿಷ್ಟವಾಗಿದ್ದು ಇವು ವಿಜಯನಗರದ ವಿಶಿಷ್ಟ ಶೈಲಿಯ ದ್ವಿಕಾಂಡದಲ್ಲಿವೆ. ಶಿಲ್ಪಿಗಳ ನೈಪುಣ್ಯತೆಗೆ ಸಾಕ್ಷಿಯಾಗಿರುವ ಈ ಕಂಬಗಳು ದ್ವಿಕಾಂಡದಲ್ಲಿ ಪ್ರಧಾನ ಕಾಂಡ ಮತ್ತು ಅದಕ್ಕೆ ಹೊಂದಿಕೊಂಡ ಉಪಕಾಂಡ ಮಧ್ಯದ ಎರಡು ಕಂಬಗಳು ಉಪಕಾಂಡದಲ್ಲಿ ಆನೆಯನ್ನು ಹಿಂಗಾಲಿನಿಂದ ತುಳಿದು ಮೇಲಕ್ಕೆ ಎದ್ದುನಿಂತ ಸಿಂಹ ಶಿಲ್ಪಗಳನ್ನು ಹೊಂದಿದ್ದರೆ, ಉಳಿದ ನಾಲ್ಕು ಕಂಬಗಳ ಉಪಕಾಂಡದಲ್ಲಿ ಸಿಂಹಗಳು ಹೊತ್ತುನಿಂತ ಉಪಸ್ತಂಭಗಳಿವೆ. ಈ ಕಂಬಗಳ ಮೇಲ್ಭಾಗದಲ್ಲಿ ಎರಡೂ ಬದಿಗೆ ಆಕರ್ಷಕ ಪುಷ್ಪಬೋದಿಗೆಗಳಿವೆ.

ಮುಖಮಂಟಪದ ಪ್ರವೇಶಕ್ಕೆ ಎರಡು ಹಂತದ ಸೋಪಾನಗಳಿದ್ದು, ಎರಡೂ ಬದಿಗೆ ಸುರುಳಿಯಾಳಿಯ ಕೈಪಿಡಿಗಳಿವೆ.

**ಸಭಾ ಮಂಟಪ :**

ದೇವಾಲಯದ ಸಭಾ ಮಂಟಪ ಒಂಬತ್ತು ಅಂಕಣಗಳಲ್ಲಿದೆ. ಮಧ್ಯದ ಅಂಕಣ ದೊಡ್ಡದಾಗಿದ್ದು, ಅಲ್ಲಿ ಸ್ವಲ್ಪ ಎತ್ತರವಾದ ವೇದಿಕೆಯಿದೆ. ಈ ವೇದಿಕೆಯ ನಾಲ್ಕೂ ಮೂಲೆಗೆ ನಾಲ್ಕು ಕಂಬಗಳಿವೆ. ಈ ಕಂಬಗಳು ಕೆಳಗೆ, ಮಧ್ಯೆ, ಮೇಲೆ ಮುರು ಅಸಮವಾದ ಚೌಕಭಾಗ ಹೊಂದಿದ್ದು, ಕೆಳಗಿನ ಚೌಕಭಾಗ ಸ್ವಲ್ಪ ಲಂಭವಾಗಿದೆ. ಅದರ ನಾಲ್ಕು ಮೂಲೆಗಳನು ಎಲೆಯಾಕಾರಾದಲ್ಲಿ ಕಂಡರಿಸಲಾಇದೆ. ಈ ಚೌಕಭಾಗಗಳ ನಡುವೆ ಕಂಬವನ್ನು ಅಷ್ಟಮುಖದಲ್ಲಿ ಕೆತ್ತಲಾಗಿದೆ. ಚೌಕ ಪಟ್ಟಿಕೆಗಳ ನಾಲ್ಕು ಮುಖಭಾಗದಲ್ಲಿ ವಿವಿಧ ರೀತಿ ಉಬ್ಬುಶಿಲ್ಪ ಕಂಡುಬರುತ್ತವೆ. ಈ ಕಂಬಗಳ ಮೇಲಿನ ಬೋದಿಕೆಗಳು ತೀರಾ ಸರಳವಾಗಿವೆ. ಛತ್ತು ಕೂಡಾ ಸಮತಟ್ಟಾಗಿದೆ. ಗರ್ಭಗೃಹದ ಮುಂದಿನ ಅಂಕಣದಲ್ಲಿ ಮಾತ್ರ ಅರಳು ಕಮಾಲಕೃತಿಯ ಉಬ್ಬು ಶಿಲ್ಪಗಳಿವೆ. ಈ ಸಭಾ ಮಂಟಪದ ಗೋಡೆ ಮಂಟಪಗಳು ಯಾವುದೇ ಉಬ್ಬುಶಿಲ್ಪ ಹೊಂದಿರದೇ ಸರಳವಾಗಿವೆ.

**ಉಪ ಗರ್ಭಗೃಹ :**

ಸಭಾ ಮಂಟಪದಲ್ಲಿ ಎಡಬದಿಗೆ ಪಂಪಾಂಬಿಕೆಯ ಉಪ ಗರ್ಭಗೃಹವಿದೆ. ಇದರ ದ್ವಾರ ಬಂಧದ ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರ ಮತ್ತು ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಈ ಗರ್ಭಗೃಹ ಚಿಕ್ಕ ಪ್ರಮಾಣದಲ್ಲಿದ್ದು ಮಧ್ಯದಲ್ಲಿ ಪೀಠದ ಮೇಲೆ ಪಂಪಾಂಬಿಕೆಯ ಚಿಕ್ಕ ವಿಗ್ರಹವಿದೆ. ಇದರ ಛತ್ತಿನಲ್ಲಿ ಮರದ ದಿನ್ನೆಗಳನ್ನು ಬಳಸಲಾಗಿರುವುದು ವಿಶೇಷ.

**ಅಂತರಾಳ :**

ಅಂತರಾಳ ಗರ್ಭಗೃಹದಷ್ಟೇ ವಿಸ್ತೀರ್ಣವಾಗಿದೆ. ಗರ್ಭಗೃಹದ ಬಾಗಿಲನ್ನು ಆಧುನಿಕ ಟೈಲ್ಸ್‌ಗಳಿಂದ ಅಲಂಕರಿಸಿರುವುದರಿಂದ ಅಲ್ಲಿ ವಿವರ ತಿಳಿಯುವುದಿಲ್ಲ: ಅಂತರಾಳದ ದ್ವಾರಬಂಧದ ಇಕ್ಕೆಲಗಳಲ್ಲಿ ತ್ರಿಶೂಲ, ಡಮರುಧಾರಿಗಳಾದ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಈ ದ್ವಾರಬಂಧಕ್ಕೆ ಲೋಹದ ತಗಡನ್ನು ಹೊದಿಸಲಾಗಿದ್ದು, ಲಲಾಟಬಿಂಬದಲ್ಲಿ ಶಿವಪಾರ್ವತಿಯರ ಪ್ರತಿಮೆ ಇದ್ದರೂ ಅದು ಮೂಲದ್ದು ಅಲ್ಲ ಎನಿಸುತ್ತದೆ.

**ಗರ್ಭಗೃಹ :**

ಗರ್ಭಗೃಹ ಚೌಕ ತಲವಿನ್ಯಾಸದಲ್ಲಿದ್ದು ಮಧ್ಯದಲ್ಲಿ ಶ್ರೀ ಪ್ರಸನ್ನ ಪಂಪಾವಿರೂಪಾಕ್ಷೇಶ್ವರ ಶಿವಲಿಂಗವಿದೆ. ಈ ಲಿಂಗವು ವೈಶಿಷ್ಟ್ಯಪೂರ್ಣವಾಗಿದ್ದು ಪೀಠವನ್ನು ಹೊಂದಿರುವ ಲಿಂಗದ ಪಾಣಿಬಟ್ಟಲು (ಜಲಹರಿ) ಬಲಭಾಗಕ್ಕಿದೆ. ಸಾಮಾನ್ಯವಾಗಿ ಎಲ್ಲ ಲಿಂಗಗಳಿಗೆ ಪಾಣಿಬಟ್ಟಲು ಎಡಭಾಗಕ್ಕಿದ್ದರೆ ಇಲ್ಲಿ ಬಲಭಾಗಕ್ಕಿರುವುದು ಲಿಂಗದ ವೈಶಿಷ್ಟ್ಯ. ಅಂತೆಯೇ ಗರ್ಭಗೃಹದ ಛತ್ತು ಆಳವಾಗಿದ್ದು, ಮಧ್ಯದಲ್ಲಿ ಅರಳುಕಮಲದ ಭುವನೇಶ್ವರಿ ಇದೆ.

**ದೇವಾಲಯದ ಹೊರಭಾಗ :**

**ಅಧಿಷ್ಠಾನ :**

ದೇವಾಲಯದ ಅಧಿಷ್ಠಾನವು ಉಪಾನ, ಕುಮುದ ಮತ್ತು ಕಪೋತಗಳನ್ನು ಹೊಂದಿದೆ. ಕಪೋತದಲ್ಲಿ ಸಾಲಾಗಿ ಕೀರ್ತಿಮುಖಗಳ ಅಲಂಕರಣೆ ಇದೆ. ಈ ವಾಸ್ತು ಭಾಗಗಳು ಮುಖಮಂಟಪದ ಮುಂಬದಿಯಲ್ಲಿ ಮಾತ್ರ ಸ್ಪಷ್ಟವಾಗಿವೆ. ಉಳಿದಂತೆ ಇಡೀ ದೇವಾಲಯದ ಹೊರಭಾಗದ ಅಧಿಷ್ಠಾನದಲ್ಲಿ ಈ ಭಾಗಗಳು ಹೆಚ್ಚು ಸ್ಪಷ್ಟವಾಗಿಲ್ಲ. ಅಂತೆಯೇ ಸಭಾಮಂಟಪ ಮತ್ತು ಗರ್ಭಗೃಹಗಳ ಅಧಿಷ್ಠಾನವನ್ನು ಮಂಚಬಂಧಶೈಲಿಯಲ್ಲಿ ನಿರ್ಮಿಸಲಾಗಿದ್ದು ತುಂಬಾ ಸರಳವಾಗಿವೆ.

**ಭಿತ್ತಿ :**

ದೇವಾಲಯದ ಹೊರಭಿತ್ತಿಯನ್ನು ಮಟ್ಟಸಗೊಳಿಸಿದ ಬೃಹತ್ ಅಳತೆ ಕಲ್ಲುಗಳಿಂದ ನಿರ್ಮಿಸಲಾಗಿದೆ. ಈ ಭಿತ್ತಿಯ ಮೇಲೆ ಯಾವುದೇ ಅಲಂಕರಣೆಗಳಾಗಲಿ, ಉಬ್ಬುಶಿಲ್ಪಗಳಾಗಲಿ ಕಂಡುಬರುವುದಿಲ್ಲ. ಭಿತ್ತಿಯ ಮೇಲಿನ ಮಾಡಿನಲ್ಲಿ ಸುತ್ತಲೂ ಇಳಿಜಾರಾದ ಮುಂಜೂರು ಇದೆ. ಮುಖಮಂಟಪದ ಮುಂಬದಿಯ ಈ ಮುಂಜೂರು ಅರ್ಧವೃತ್ತಾಕಾರದಲ್ಲಿ ಬಾಗಿದ್ದು ಹಂಪಿಯ ದೇವಾಲಯಗಳಲ್ಲಿರುವಂತೆ ಹೆಚ್ಚು ಆಕರ್ಷಕವೆನಿಸುತ್ತದೆ. ಇದನ್ನು ಬಿಡಿಬಿಡಿಯಾದ ಶಿಲಾ ಹಲಗೆಗಳಿಂದ ನಿರ್ಮಿಸಲಾಗಿದೆ. ಈ ಮುಖಮಂಟಪದ ಮಾಡಿನ ಮುಂಬದಿ ಅಂಚಿನಲ್ಲಿ ಮಾತ್ರ ದೇವಕೋಷ್ಠಗಳು ಇವೆ. ಇವುಗಳನ್ನು ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಲಾಗಿದ್ದು ಮುಖ್ಯವಾಗಿ ಮೂರು ಶಾಲಗಳು ಅವುಗಳ ಎರಡೂ ಬದಿಗೆ ಹಾರಗಳು ಇದ್ದು ಎರಡೂ ಮೂಲೆಗೆ ಗಾರೆಯ ನಂದಿಯ ಶಿಲ್ಪಗಳಿವೆ. ಮಧ್ಯದ ಮೂರು ಕೋಷ್ಠಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರ ಗಾರೆ ಶಿಲ್ಪಗಳಿದ್ದು ಈಗ ಭಗ್ನವಾಗಿವೆ. ಈ ಶಿಲ್ಪಗಳ ಲಕ್ಷಣಗಳನ್ನು ಗಮನಿಸಿದಾಗ ಇವು ನಂತರದ ರಚನೆಗಳೆಂದು ತೋರುತ್ತವೆ.

**ಶಿಖರಗಳು :**

ಪ್ರಧಾನ ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ ಮಧ್ಯಮ ಪ್ರಮಾಣದ ದ್ರಾವಿಡ ಮಾದರಿಯ ಏಕತಲದ ಶಿಖರವಿದೆ. ಇದು ತಲದಲ್ಲಿ ಗರ್ಭಗೃಹದ ಉದ್ದಗಲಕ್ಕೂ ವ್ಯಾಪಿಸಿದ್ದು ಕೆಳಗೆ ಶಾಲ, ಕೂಟ, ಪಂಜರಗಳಿವೆ. ಇವುಗಳಲ್ಲಿ ಗಾರೆ ಪ್ರತಿಮೆಗಳಿದ್ದು ಬಹುಮಟ್ಟಿಗೆ ಶಿಥಿಲವಾಗಿವೆ. ಸ್ತೂಪಿಯ ಕೆಳಗಭಾಗದಲ್ಲಿ ನಾಲ್ಕೂ ಮೂಲೆಗೆ ನಂದಿಯ ಗಾರೆ ಶಿಲ್ಪಗಳಿವೆ. ಸ್ತೂಪಿಯು ವೃತ್ತಾಕಾರವಾಗಿದ್ದು ಅದರ ನಾಲ್ಕೂ ಮೂಲೆಗೆ ಕೀರ್ತಿಮುಖಗಳ ಅಲಂಕರಣೆಗಳಿವೆ. ಸ್ತೂಪಿಯ ತುದಿಯಲ್ಲಿ ಕಳಶವಿದೆ. ದೇವಿಯ ಗರ್ಭಗೃಹ ಚೌಕಾಕಾರದಲ್ಲಿದ್ದರೂ ಅದರ ಬದಿಯಲ್ಲಿ ಒಂದು ಚಿಕ್ಕ ಸರಕು ಕೋಣೆ ಇಟ್ಟಿರುವುದರಿಂದ ಆ ಇಡೀ ಭಾಗ ಆಯತಾಕಾರದ ವಿನ್ಯಾಸ ಹೊಂದಿರುತ್ತದೆ. ಹಾಗಾಗಿ ಅದಕ್ಕೆ ಪೂರಕವಾಗಿ ಮೇಲೆ ಶಾಲಾ ಶಿಖರವನ್ನು ನಿರ್ಮಿಸಿರುವುದು ವಿಶೇಷ. ಇದು ಕೂಡ ದ್ರಾವಿಡ ಮಾದರಿಯಲ್ಲಿದ್ದು ಕೆಳಭಾಗದಲ್ಲಿ ಸ್ತಂಭಗಳ ಅಲಂಕರಣೆಯಿದೆ. ಸ್ತೂಪಿಯ ಕೆಳಭಾಗದಲ್ಲಿ ನಾಲ್ಕೂ ಮೂಲೆಗೆ ನಂದಿಯ ಶಿಲ್ಪವಿದೆ. ಸ್ತೂಪಿಯು ಶಾಲಾ ಮಾದರಿಯಲ್ಲಿದೆ. ಅದರ ಎರಡೂ ಮುಖದಿಕ್ಕಿಗೆ ಬೃಹತ್ ಕೀರ್ತಿ ಮುಖಗಳು ಮತ್ತು ಉಳಿದ ಎರಡೂ ಕಡೆ ಚಿಕ್ಕ ಕೀರ್ತಿಮುಖ ಅಲಂಕರಣೆಯಿದ್ದು ಮೇಲೆ ಕಳಶವಿದೆ.

**ಪರಿವಾರ ದೇವತೆ :**

ಪ್ರಧಾನ ಗರ್ಭಗೃಹದ ಬಲಭಾಗದಲ್ಲಿ ಪರಿವಾರ ದೇವತೆ ಚಂಡಿಕೇಶ್ವರ ದೇಗುಲವಿದೆ. ಹಾಗೆಯೇ ದೇವಾಲಯದ ಸುತ್ತಲು ಇತ್ತೀಚಿಗೆ ಪ್ರಾಕಾರ ನಿರ್ಮಿಸಲಾಗಿದೆ.

**ದೀಪಸ್ತಂಭ :**

ದೇವಾಲಯದ ಹೊರಭಾಗದಲ್ಲಿ ಎದುರಿಗೆ ಸುಮಾರು ೧೮ ಅಡಿ ಎತ್ತರದ ದೀಪಸ್ತಂಭವನ್ನು ಕಾಣಬಹುದು.

**೫.೧.೫ ಪಂಪಾಪತಿ ದೇವಾಲಯ-ಪಂಪಾ ಸರೋವರ**

ಈ ದೇವಾಲಯವು ಆನೆಗೊಂದಿಗೆ ಸಮೀಪದ ಪಂಪಾಸರೋವರದ ತೀರದ ಮೇಲೆ ಇದೆ.

**ತಲವಿನ್ಯಾಸ :**

ಈ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ಸಭಾ ಮಂಟಪಗಳನ್ನು ಹೊಂದಿದೆ.

**ವಾಸ್ತು ವಿವರ :**

**ಗರ್ಭಗೃಹ :** ಗರ್ಭಗೃಹದ ಮಧ್ಯದಲ್ಲಿ ಶಿವಲಿಂಗವಿದೆ. ಈ ಗರ್ಭಗೃಹವನ್ನು ಆಧುನಿಕವಾಗಿ ಟೈಲ್ಸ್‌ಗಳಿಂದ ನವೀಕರಿಸಲಾಗಿದೆ. ಗರ್ಭಗೃಹದ ಒಳಭಿತ್ತಿಯ ಸುತ್ತಲೂ ಕೈಪಿಡಿ ಇರುವುದನ್ನು ಕಾಣಬಹುದು.

**ಅಂತರಾಳ :** ಗರ್ಭಗೃಹದಂತೆ ಈ ಅಂತರಾಳ ಭಾಗವನ್ನು ಸಹ ಆಧುನಿಕ ಟೈಲ್ಸ್‌ಗಳಿಂದ ನವೀಕರಿಸಲಾಗಿದೆ. ಈ ಅಂತರಾಳದಲ್ಲಿ ಗರ್ಭಗುಡಿ ದ್ವಾರದ ಇಕ್ಕೆಲಗಳಲ್ಲಿ ವೀರಭದ್ರ ಮತ್ತು ಭೈರವನ ಸುಂದರ ಮೂರ್ತಿ ಶಿಲ್ಪಗಳಿವೆ. ಹಾಗೆಯೇ ಪಂಪಾಪತಿ ಶಿವಲಿಂಗಕ್ಕೆ ಎದುರಾಗಿ ಮುಖ ಮಾಡಿರುವ ನಂದಿ ಇದೆ.

**ಸಭಾ ಮಂಟಪ :** ಸಭಾ ಮಂಟಪವು ವಿಶಾಲವಾಗಿದ್ದು ಹಲವಾರು ಕಂಬಗಳನ್ನು ಹೊಂದಿದ ಕಂಬಗಳ ಮಂಟಪದಂತಿದೆ. ಕಂಬಗಳು ಸರಳ ರೇಖೆಯಲ್ಲಿದ್ದು ಪೀಠ, ಕಾಂಡ, ದಂತ ಭಾಗಗಳನ್ನು ಹೊಂದಿದೆ. ಬೋದಿಗೆಗಳು ತುಂಬಾ ಸರಳವಾಗಿವೆ. ಸಭಾ ಮಂಟಪದ ಬಲಬದಿಯಲ್ಲಿ ಉಪದ್ವಾರವಿದ್ದು ಪ್ರಧಾನ ದ್ವಾರ ಪೂರ್ವಾಭಿಮುಖವಾಗಿದೆ ಸಭಾ ಮಂಟಪವು ಅಂತರಾಳದ ನೆಲಮಟ್ಟಕ್ಕಿಂತ ಕೆಳಮಟ್ಟದಲ್ಲಿದೆ. ಹಾಗಾಗಿ ಸಭಾಮಂಟಪದಿಂದ ಅಂತರಾಳಕ್ಕೆ ಕೆಲವು ಮೆಟ್ಟಿಲುಗಳನ್ನು ಏರಿ ಹೋಗಬೇಕಾಗುತ್ತದೆ. ಈ ದೇವಾಲಯದ ಪಕ್ಕದಲ್ಲಿ ಪಂಪಾಂಬಿಕೆಯ ದೇವಾಲಯವಿದೆ.[೧೦]

**೫.೧.೬ ಪಂಪಾಪತಿ ದೇವಾಲಯ- ಅಂಜನಹಳ್ಳಿ**

ಅಂಜನಹಳ್ಳಿ ಗಂಗಾವತಿ ತಾಲೂಕಿನಲ್ಲಿದ್ದು ಆನೆಗೊಂದಿಯಿಂದ ವಾಯುವ್ಯಕ್ಕೆ ೨ ಕಿ.ಮೀ. ದೂರದಲ್ಲಿದೆ. ಗ್ರಾಮದ ದಕ್ಷಿಣಕ್ಕೆ ವಿಶಾಲವಾದ ಬಂಡೆಯ ಮೇಲೆ ಈ ದೇವಾಲಯವಿದೆ.

**ತಲವಿನ್ಯಾಸ :**

ಅಂಜನಹಳ್ಳಿಯ ಪಂಪಾಪತಿ ದೇವಾಲಯವು ಮುಚ್ಚಿ ಸಭಾ ಮಂಟಪ, ಅಂತರಾಳ ಮತ್ತು ಗರ್ಭಗೃಹಗಳನ್ನು ಪೂರ್ವ-ಪಶ್ಚಿಮಾಭಿಮುಖವಾಗಿ ಹೊಂದಿದೆ. ಇದಕ್ಕೆ ಸಭಾ ಮಂಟಪದ ಉತ್ತರದ

ದಿಕ್ಕಿಗೆ ಮುಖಮಂಟಪವಿದೆ. ಅಂದರೆ ದೇವಾಲಯ ಪೂರ್ವ-ಪಶ್ಚಿಮಾಭಿಮುಖವಾಗಿದ್ದರೂ ಅದರ ಪ್ರವೇಶ ಉತ್ತರ ದಿಕ್ಕಿಗೆ ಇರುವುದು ವಿಶೇಷವಾಗಿದೆ.

**ವಾಸ್ತು ವಿವರ :**

**ಮುಖಮಂಟಪ** : ಮುಖಮಂಟಪ ಒಂದೇ ಅಂಕಣದಲ್ಲಿದ್ದು ಪ್ರವೇಶ ಹಾದಿಯ ಎರಡೂ ಬದಿಗೆ ಕಕ್ಷಾಸನ ರೀತಿಯ ಕಟ್ಟೆಗಳಿದ್ದು ಅದರ ಒಳಬದಿಯಲ್ಲಿ ಚಚ್ಚೌಕ ಕಾಂಡದ ನಾಲ್ಕು ಕಂಬಗಳಿವೆ. ಅವುಗಳ ಮೇಲೆ ಬೋದಿಗೆ ಸರಳವಾಗಿವೆ. ಮುಖಮಂಟಪದ ದ್ವಾರಬಂಧ ಆಕರ್ಷಕವಾಗಿದೆ. ಬಾಗಿಲ ಇಕ್ಕೆಲಗಳಲ್ಲಿ ವಕ್ರಾಸನದಲ್ಲಿ ನಿಂತ ಶೈವ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಇವರ ಕೈಗಳಲ್ಲಿ ತ್ರಿಶೂಲ, ಡಮರು ಮತ್ತು ಗದೆಗಳಿವೆ. ದ್ವಾರಬಂಧದ ಶಾಖೆಗಳಲಿ ಕಂಬಶಾಖೆ ಪ್ರಧಾನವಾಗಿದೆ. ಬಾಗಿಲ ಮೇಲೆ ಉತ್ತಿರಾಂಗದ ಭಾಗ ಮುಂಚಾಚಿರುವುದರಿಂದ ಇಲ್ಲಿ ಲಲಾಟಬಿಂಬದ ಭಾಗವು ಪೂರ್ಣ ಚೌಕಾಕಾರದಲ್ಲಿರದೆ ಕೆಳ ಅರ್ಧಭಾಗದಲ್ಲಿ ಮಾತ್ರ ಇದೆ. ಹಾಗಾಗಿ ಅಲ್ಲಿ ಯಾವುದೇ ಲಲಾಟಬಿಂಬವನ್ನು ಕೆತ್ತಲು ಸಾಧ್ಯವಾಗಿಲ್ಲ. ಮುಖಮಂಟಪದ ಛತ್ತು ಯಾವುದೇ ಉಬ್ಬು ಆಕೃತಿಗಳಿರದೇ ಸಮತಟ್ಟಾಗಿದೆ.

**ಸಭಾಮಂಟಪ** : ಸಭಾಮಂಟಪ ಒಂಬತ್ತು ಅಂಕಣದಲ್ಲಿದೆ. ಇದು ಸುತ್ತಲೂ ಗೋಡೆಯಿಂದ ಆವೃತ್ತವಾಗಿದ್ದು ಮುಚ್ಚಿದ ಸಭಾ ಮಂಟಪವಾಗಿದೆ. ಗೋಡೆಯಲ್ಲಿ ಸುತ್ತಲೂ ಒಳಸರಿದ ಕಕ್ಷಾಸನಗಳಿವೆ. ಇಲ್ಲಿ ಮಧ್ಯದಲ್ಲಿ ನಾಲ್ಕು ಸ್ತಂಭಗಳು, ನಾಲ್ಕು ಮೂಲೆಗಂಬಗಳು, ಹತ್ತು ಅರ್ಧಗಂಬಗಳೂ ಇವೆ. ಮಧ್ಯದ ನಾಲ್ಕು ಕಂಬಗಳು ಪೀಠ, ಕಾಂಡ, ಕಾಂಡದಲ್ಲಿ ಮೇಲೆ ಕೆಳಗೆ ಅಸಮವಾದ ಚೌಕ ಭಾಗಗಳು ಅವುಗಳ ಮಧ್ಯೆ ೧೬ ಮುಖಗಳ ಅಡ್ಡ ಪಟ್ಟಿಕೆಗಳಿವೆ. ಕಾಂಡದ ಮೇಲ್ಭಾಗದಲ್ಲಿ ಕುಂಬ, ಕಳಶ, ಫಲಕಗಳಿವೆ. ಮೇಲ್ಬದಿಯಲ್ಲಿ ಲಘು ಆಕರ್ಷಕವಾದ ಬೋದಿಗೆಗಳಿವೆ. ಸಭಾ ಮಂಟಪದ ಮಧ್ಯದ ಛತ್ತು ಮಾತ್ರ ಸರಳ ಭುವನೇಶ್ವರಿಯನ್ನು ಹೊಂದಿದ್ದು ಅಲ್ಲಿ ಅರಳು ಕಮಲದ ಪುಷ್ಪಾಕೃತಿ ಇದೆ. ಉಳಿದಂತೆ ಎಲ್ಲ ಅಂಕಣಗಳು ಸಮತಟ್ಟಾಗಿವೆ. ಸಭಾ ಮಂಟಪದಲ್ಲಿ ಈಚೆಗೆ ಅಡ್ಡಗೋಡೆ ನಿರ್ಮಿಸಿ ಒಂದು ಕೊಠಡಿಯನ್ನು ನಿರ್ಮಿಸಲಾಗಿದೆ.

**ಅಂತರಾಳ** : ಅಂತರಾಳದ ಪ್ರವೇಶ ಬಾಗಿಲು ತೀರಾ ಸರಳವಾಗಿದೆ. ಅಂತರಾಳವು ಏಕ ಅಂಕಣದಲ್ಲಿದ್ದು ಅದರ ಛತ್ತು ಅರಳು ಕಮಲದ ಪುಷ್ಪಾಲಂಕೃತವಾಗಿದೆ. ಅಂತರಾಳದ ಮಧ್ಯದಲ್ಲಿ ಗರ್ಭಗೃಹ ಲಿಂಗಕ್ಕೆ ಎದುರಾಗಿ ನಂದಿಯ ಶಿಲ್ಪವಿದೆ. ಹಾಗೆಯೇ ಇಲ್ಲಿ ಗಣೇಶನ ಶಿಲ್ಪವಿದೆ.

**ಗರ್ಭಗೃಹ** : ಗರ್ಭಗೃಹದ ಬಾಗಿಲು ಕೂಡ ಸರಳವಾಗಿದೆ. ಗರ್ಭಗೃಹದ ಮಧ್ಯದಲ್ಲಿ ಪೀಠರಹಿತ ಶಿವಲಿಂಗವಿದೆ. ಗರ್ಭಗೃಹದ ದ್ವಾರಬಂಧ ಸರಳವಾಗಿದೆ. ಗರ್ಭಗೃಹದ ಛತ್ತಿನಲ್ಲಿ ಆಕರ್ಷಕವಾದ ಅರಳು ಕಮಲದ ಭುವನೇಶ್ವರಿ ಇದೆ. ಗರ್ಭಗೃಹದ ಮೂರು ಬದಿಯ ಗೋಡೆಗಳಲ್ಲಿ ಕೈಪಿಡಿಗಳಿವೆ.

**ದೇವಾಲದಯದ ಹೊರಭಾಗ :**

ದೇವಾಲಯದ ಹೊರಭಾಗ ಅಧಿಷ್ಠಾನ, ಭಿತ್ತಿ, ಕಪೋತಭಾಗ ಹೊಂದಿದೆ. ಅಧಿಷ್ಠಾನವು ಮಂಚಬಂಧಶೈಲಿಯಲ್ಲಿದ್ದು ಉಪಾನಗಳ ಮತ್ತು ಕಪೋತಗಳನ್ನು ಹೊಂದಿದೆ. ಈ ಮೂರು ಭಾಗಗಳು ತೀರಾ ಸರಳವಾಗಿವೆ. ದೇವಾಲಯದ ಭಿತ್ತಿ ಕೂಡಾ ಅಳತೆಗಲ್ಲುಗಳಿಂದ ಕೂಡಿದ್ದು ಮಟ್ಟಸವಾಗಿದೆ.

ಪೂರ್ವ ಹಾಗೂ ದಕ್ಷಿಣ ಬದಿಯ ಭಿತ್ತಿಗಳಲ್ಲಿ ಚಿಕ್ಕ ಜಾಲಂಧ್ರಗಳಿವೆ. ಭಿತ್ತಿಯ ಮೇಲೆ ಇಳಿಜಾರಾದ ಮುಂಜೂರು ಇದ್ದು ಅದರ ಮೇಲೆ ಚಿಕ್ಕ ಕಪೋತವಿದೆ.

**ಶಿಖರ :**

ಗರ್ಭಗೃಹದ ಮೇಲೆ ಕದಂಬನಾಗರಶೈಲಿಯ ಶಿಖರವಿದ್ದು ಅದು ಗರ್ಭಗೃಹದ ಉದ್ದಗಲಕ್ಕೂ ವ್ಯಾಪಿಸಿದೆ. ಶಿಖರದಲ್ಲಿ ಆರು ತಲಗಳಿದ್ದು ಪ್ರತಿ ತಲಗಳಲ್ಲಿ ಹಲ್ಲಿನಾಕಾರದ ಕೆತ್ತನೆಗಳಿದ್ದು ಫಾಂಸನ ಶೈಲಿಯನ್ನು ಹೋಲುತ್ತದೆ. ಶಿಖರದ ತುದಿ ನಾಶವಾಗಿದ್ದು ಈಚೆಗೆ ಅಲ್ಲಿ ಅಂಡಾಕಾರದ ಸ್ತೂಪಿಯನ್ನು ನಿರ್ಮಿಸಲಾಗಿದೆ.

**೫.೧.೭ ಪಂಪಾಪತಿ ದೇವಾಲಯ– ಚಿಕ್ಕಜಂತಕಲ್**

ಚಿಕ್ಕಜಂತಕಲ್ ಗಂಗಾವತಿ ತಾಲೂಕಿನಲ್ಲಿದ್ದು ತುಗಭದ್ರಾ ನದಿಯ ಎಡತೀರದ ಮೇಲಿದೆ. ಗ್ರಾಮದ ಮಧ್ಯದಲ್ಲಿ ಈ ದೇವಾಲಯವಿದೆ. ಎತ್ತರದ ಜಗಲಿಯ ಮೇಲಿರುವ ಈ ದೇವಾಲಯ ಗರ್ಭಗೃಹ, ಪ್ರದಕ್ಷಿಣಾಪಥ, ಸಭಾಮಂಟಪ, ತೆರೆದ ಮುಖಮಂಟಪಗಳನ್ನು ಒಳಗೊಂಡಿದೆ. ಈ ದೇವಾಲಯ ಇತ್ತೀಚಿನ ನಿರ್ಮಾಣವಾಗಿದೆ.

ತೆರೆದ ಮುಖಮಂಟಪದಲ್ಲಿ ಸರಳ ಅಂಕರಣೆಗಳಿಂದ ಕೂಡಿದ ನಾಲ್ಕು ಕಂಬಗಳಿದ್ದು, ನಾಲ್ಕು ಅಂಕಣಗಳಾಗಿ ರೂಪಿಸಿವೆ. ಇದರ ಪ್ರವೇಶ್ವಾರವನ್ನು ಆಧನಿಕವಾಗಿ ಕಬ್ಬಿಣ ಸಲಕರಣೆಗಳಿಂದ ನಿರ್ಮಿಸಲಾಗಿದೆ.

ಗರ್ಭಗೃಹದಲ್ಲಿ ಸುಮಾರು ಎರಡೂವರೆ ಅಡಿ ಎತ್ತರದ ಶಿವಲಿಂಗವಿದ್ದು, ಗರ್ಭಗೃಹವನ್ನು ಆಧುನಿಕವಾಗಿ ರೂಪಿಸಲ್ಪಟ್ಟಿದೆ. ಗರ್ಭಗೃಹದ ಪ್ರವೇಶದ್ವಾರ ಸಾದಾ ಕೆತ್ತನೆಯಿಂದ ಕೂಡಿದ್ದು, ಇದರಲ್ಲಿ ವೃತ್ತಾಕಾರದ ಎರಡು ಅರ್ಧಗಂಬಗಳು, ಪಾರ್ಶ್ವದಲ್ಲಿ ಚೌಕಾಕಾರದ ಎರಡು ಕಂಬಗಳಿವೆ. ಆಧುನಿಕ ಬಣ್ಣದ ಅಲಂಕರಣೆಯಿಂದ ಕೂಡಿದ ದ್ವಾರಬಂಧದ ಭಾಗದಲ್ಲಿ ಮತ್ತು ಲಲಾಟಬಿಂಬದ ಭಾಗದಲ್ಲಿ ಹೂವಿನ ಅಂಕರಣೆಯಿರುವುದು.

ದೇವಾಲಯದ ಮುಂಭಾಗದ ಮುಂಜೂರಿನ ಮುಖಭಾಗದಲ್ಲಿ ಗಣೇಶನ ಮೂರ್ತಿಶಿಲ್ಪ / ಉಬ್ಬುಶಿಲ್ಪ ವೈಶಿಷ್ಠವಾಗಿದೆ.

ಗರ್ಭಗೃಹದ ಮೇಲೆ ೬ ಸ್ತರ / ಅಂತಸ್ತುಗಳಿಂದ ಕೂಡಿದ ಚೌಕಾಕಾರ ಮಾದರಿಯ ಶಿಖರವಿದೆ. ಮೇಲ್ಭಾಗದಲ್ಲಿ ಸ್ತೂಪಿ ಕಳಶವಿದೆ. ಮೇಲ್ಭಾಗದ ನಾಲ್ಕು ಮೂಲೆಗೆ ಉಪ ಶಿಖರಗಳಿವೆ.

ದೇವಾಲಯವನ್ನು ಪೂರ್ಣ ಜೀರ್ಣೋದ್ಧಾರಗೊಳಿಸಲಾಗಿದೆ.

**೫.೧.೮ ಪಂಪಾಪತಿ ದೇವಾಲಯ– ಹಳೇ ಅಯೋಧ್ಯ**

ಹಳೇ ಅಯೋಧ್ಯ ಗ್ರಾಮವು ಗಂಗಾವತಿ ತಾಲೂಕಿನಲ್ಲಿದ್ದು, ತುಂಗಭದ್ರಾ ನದಿಯ ಎಡತೀರದಲ್ಲಿದೆ. ಗ್ರಾಮದ ಹೊರಬದಿಗೆ ಶ್ರೀ ಪಂಪಾಪತಿ ನಾಮಾಂಕಿತ ಚಿಕ್ಕ ದೇವಾಲಯವಿದ್ದು, ಇದು ಕೇವಲ ಒಂದು ಗರ್ಭಗೃಹವನ್ನು ಮಾತ್ರ ಹೊಂದಿದೆ. ಗರ್ಭಗೃಹದ ಪ್ರವೇಶದ್ವಾರವು ಸಾದಾ ಕೆತ್ತನೆಯಿಂದ ಸರಳ ರೂಪದಲ್ಲಿದೆ. ಒಳಭಾಗದಲ್ಲಿ ನೆಲಸಮ ಮಟ್ಟಕ್ಕಿರುವ ಶಿವಲಿಂಗರೂಪವನ್ನು ಕಾಣಬಹುದು.

ಗರ್ಭಗುಡಿಯ ಮೇಲಿನ ಶಿಖರ ಕೂಡ ಸರಳ ಅಲಂಕರಣೆಯಿಂದ ಕೂಡಿದೆ. ಮುಖಭಾಗದಲ್ಲಿ ಶಿವಲಿಂಗದ ಚಿತ್ರವಿದೆ. ಮೇಲ್ಭಾಗದ ನಾಲ್ಕೂ ಮೂಲೆಗಳಿಗೆ ನಂದಿ ಶಿಲ್ಪಗಳನ್ನು ಅಳವಡಿಸಲಾಗಿದೆ. ಹಾಗೆಯೇ ಗರ್ಭಗೃಹಕ್ಕೆ ಅಭಿಮುಖವಾಗಿ ಸುಮಾರು ಎರಡು ಅಡಿ ಎತ್ತರದ ನಂದಿ ಶಿಲ್ಪವಿದೆ. ಆ ನಂದಿ ಶಿಲ್ಪದ ಹಿಂಭಾಗದಲ್ಲಿ ಸುಮಾರು ಇಪ್ಪತ್ತು ಅಡಿ ಎತ್ತರದ ಗರುಡಗಂಬವಿದೆ.

**೫.೧.೯ ಪಂಪಾಪತಿ ದೇವಾಲಯ– ಕಂಪ್ಲಿ ಕೋಟೆ.**

ಹೊಸಪೇಟೆ ತಾಲೂಕಿನ ಕಂಪ್ಲಿ ಕೋಟೆಯ ವಸತಿ ಪ್ರದೇಶದಲ್ಲಿ ತುಂಗಭದ್ರಾ ನದಿಯ ಬಲತೀರದ ಮೇಲೆ ಈ ದೇವಾಲಯ ಇದೆ.

**ತಲಾವಿನ್ಯಾಸ :**

ಪ್ರಧಾನ ಗರ್ಭಗೃಹ, ಸಭಾಮಂಟಪ, ಸಭಾ ಮಂಟಪಕ್ಕೆ ಎಡಬದಿಗೆ ದೇವಿ ಗರ್ಭಗೃಹ, ಮುಖಮಂಟಪ ಮತ್ತು ಪೂರ್ವಾಭಿಮುಖವಾಗಿ ಪ್ರವೇಶ ದ್ವಾರಮಂಟಪವಿರುವುದು.

**ವಾಸ್ತು ವಿವರ :**

**ಪ್ರವೇಶದ್ವಾರ ಮಂಟಪ :** ದೇವಾಲಯದ ಸುತ್ತಲೂ ಚಿಕ್ಕದಾದ ಪ್ರಕಾರದ ಗೋಡೆ ಇರುವುದು. ಇದಕ್ಕೆ ಹೊಂದಿಕೊಂಡೆ ಪೂರ್ವಭಾಗದಲ್ಲಿ ಪ್ರವೇಶದ್ವಾರ ಮಂಟಪವಿದೆ. ಎತ್ತರವಾದ ದಿಬ್ಬದ ಮೇಲೆ ನಿರ್ಮಾಣವಾದ ಈ ದೇವಾಲಯದ ಪ್ರವೇಶದ್ವಾರ ಮಂಟಪದಲ್ಲಿ ಅದರ ಪ್ರವೇಶದ ಇಕ್ಕೆಲಗಳಲ್ಲಿ ಕೈಸಾಲೆಗಳು (ಎರಡು ಅಂಕಣಗಳು), ನಾಲ್ಕು ಪ್ರಧಾನಗಂಬಗಳು, ಎರಡು ಅರ್ಧಗಂಭಗಳಿವೆ. ಇದರ ಅಧಿಷ್ಠಾನ ಮತ್ತು ಬೋದಿಗೆಗಳು ಸರಳವಾಗಿದ್ದು ಸೋಪಾನಗಳ ಮೂಲಕ ದೇವಾಲಯದ ಪ್ರಾಕಾರವನ್ನು ಪ್ರವೇಶಿಸಬಹುದಾಗಿದೆ.

**ಶಾಸನದ ಮಾಹಿತಿ :**[೧೧]

ದೇವಾಲಯದ ಆವರಣದಲ್ಲಿ ವಿಜಯನಗರದ ಅರಸ ಸದಾಶಿವರಾಯನ ಕ್ರಿ.ಶ. ೧೫೫೨ ರ ಶಾಸನವಿದೆ. ಕ್ರಿ.ಶ. ೧೫೫೨ ರಲ್ಲಿ ಆದವಾನಿ ಮೂಡನಾಡ ಸುಂಕದ ಬನದರಸನ ಮಗನಾದ ಕರಿಬೇಡ (ಅಗ್ರಹಾರ)ದ ಯಜಮಾನ ಸಂಕರಸರು ಕಂಪಿಲೆಯ ವಿರೂಪಾಕ್ಷ ದೇವರ ಗುಡಿಯಲ್ಲಿ ಒಂದು ಅಂಕಣ ಕಲ್ಲಿನ ಮಾಳಿಗೆ ಕಟಿಸಿ ಹಂಪಾದೇವಿಯನ್ನು ಪ್ರತಿಷ್ಠೆ ಮಾಡಿಸಿದನೆಂದು ತಿಳಿಸುತ್ತದೆ. ಹಾಗೆಯೇ ದೇವಿಯ ಪೂಜೆಗಾಗಿ ಕರಿಬೇಡ ಅಗ್ರಹಾರದ ಉತ್ತಲೆಯಲ್ಲಿ ಕೆಲವು ವೃತ್ತಿಗಳನ್ನು ದಾನ ನಿಡಿದ ವಿಷಯವಿದೆ. ಶಾಸನ ಮಾಹಿತಿಯಿಂದ ದೇವಾಲಯ ಕ್ರಿ.ಶ. ೧೫೫೨ ಕ್ಕೂ ಮುಂಚಿನದೆಂಬುದು ಸ್ಪಷ್ಟ.

**ಮುಖಮಂಟಪ :**

ತುಂಗಭದ್ರಾ ನದಿಯ ಬಲದಂಡೆಯಲ್ಲಿರುವ ಈ ದೇವಾಲಯ ಉತ್ತರಾಭಿಮುಖವಾಗಿದೆ. ಮುಖಭಾಗದಲ್ಲಿ ನಾಲ್ಕು ಪ್ರಧಾನ ಕಂಬಗಳಿದ್ದು ಜಗತಿಯ ರೂಪದಲ್ಲಿ ಎರಡು ಅಂಕಣಗಳಾಗಿ ವಿಭಜಿಸಿದೆ. ಮುಖಮಂಟಪದ ಸ್ತಂಭಗಳಲ್ಲಿ ಶಿವಲಿಂಗ, ಉಗ್ರನರಸಿಂಹ, ಗಣೇಶನ ಉಬ್ಬುಶಿಲ್ಪಗಳನ್ನು ಕಾಣಬಹುದು. ಮುಖಮಂಟಪದ ದ್ವಾರಬಂಧವು ಸರಳವಾಗಿದ್ದು ಮೇಲೆ ಲಲಾಟಬಿಂಬದಲ್ಲಿ ಅರಳು ಕಮಲದ ಅಲಂಕರಣೆ ಇದೆ.

**ಸಭಾ ಮಂಟಪ :**

ಸಭಾ ಮಂಟಪದ ಮಧ್ಯದಲ್ಲಿ ಅರ್ಧ ಅಡಿ ಎತ್ತರದ ವೇದಿಕೆ ಇದ್ದು, ಇದರ ನಾಲ್ಕೂ ಮೂಲೆಗ ಪ್ರಧಾನ ನಾಲ್ಕು ಚೌಕಾಕಾರದ ಕಂಬಗಳಲ್ಲಿ ಎರಡು ಕಂಬಗಳ ಕೆಳಭಾಗದಲ್ಲಿ ಕುಬ್ಜ ಉಬ್ಬುಶಿಲ್ಪಗಳಿವೆ. ಒರಟು ಕಲ್ಲಿನ ಈ ಕಂಬಗಳು ಸರಳ ಬೋದಿಗೆಯನ್ನು ಹೊಂದಿವೆ. ಹಾಗೆಯೇ ಶಿವಲಿಂಗಕ್ಕೆ ಅಭಿಮುಖವಾಗಿ ಸುಮಾರು ಒಂದೂವರೆ ಅಡಿ ಎತ್ತರದ ನಂದಿ ಇದೆ. ಸಭಾ ಮಂಟಪದ ಭುವನೇಶ್ವರಿ ಅರಳು ಕಮಲದ ಅಲಂಕರಣೆ ಹೊಂದಿದೆ.

**ಉಪಗರ್ಭಗೃಹ :**

ದೇವಾಲಯದ ಪಶ್ಚಿಮ ಭಾಗದಲ್ಲಿ ಪೂರ್ವಾಭಿಮುಖವಾಗಿರುವ ಉಪಗರ್ಭಗೃಹದ ಪ್ರವೇಶದ್ವಾರದ ಲಲಾಟಬಿಂಬದಲ್ಲಿ ಪದ್ಮವಿದೆ. ಕೈಗಳಲ್ಲಿ ಪದ್ಮ ಹಿಡಿದು ಸಮಭಂಗಿಯಲ್ಲಿ ನಿಂತ ಪಂಪಾದೇವಿಯ ಸುಮಾರು ಎರಡು ಅಡಿ ಎತ್ತರದ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದ್ದು ಆಕರ್ಷಕವಾಗಿದೆ. ಆದರೆ ಈ ಗರ್ಭಗೃಹವನ್ನು ಆಧುನಿಕವಾಗಿ ಟೈಲ್ಸ್‌ಗಳಿಂದ ಅಲಂಕರಿಸಲಾಗಿದೆ.

**ಗರ್ಭಗೃಹ :**

ಗರ್ಭಗೃಹದಲ್ಲಿ ಪೀಠರಹಿತ ನೆಲಸಮ ಮಟ್ಟಕ್ಕಿರುವ ಶಿವಲಿಂಗದ ಮೂರ್ತಿ ಇರುವುದು. ಗರ್ಭಗೃಹದ ದ್ವಾರಶಾಕೆಗಳು ಆಕರ್ಷಕವಾಗಿದ್ದು ಲಲಾಟಬಿಂಬದಲ್ಲಿ ಪೀಠದಲ್ಲಿ ಆಸೀನಳಾದ ಗಜಲಕ್ಷ್ಮಿಯ ಶಿಲ್ಪವಿರುವುದು. ಗರ್ಭಗೃಹದ ದ್ವಾರಬಂಧದಲ್ಲಿ ಎರಡು ಅಡಿ ಎತ್ತರದ ಶೈವ ದ್ವಾರಪಾಲಕರು ಪಾರ್ಶ್ವಭಂಗಿಯಲ್ಲಿ ಪೀಠದ ಮೇಲೆ ಕಾಲನ್ನೂರಿ ನಿಂತಿದ್ದಾರೆ. ಗರ್ಭಗೃಹದ ಛತ್ತು ಷಟ್ಕೋನಾಕಾರದಲ್ಲಿ ರಚಿತವಾಗಿದೆ.

**ದೇವಾಲಯದ ಹೊರಭಾಗ :**

**ಭಿತ್ತಿ** : ಹೊರಭಿತ್ತಿ ಭಾಗವು ಅತ್ಯಂತ ಸರಳವಾಗಿದ್ದು ಅವುಗಳ ರಚನೆಯಲ್ಲಿ ಸಾದಾ ಚಪ್ಪಡಿ ಕಲ್ಲುಗಳನ್ನು ಬಳಸಲಾಗಿದೆ. ಭಿತ್ತಿಯಲ್ಲಿ ಯಾವುದೇ ಕನಿಷ್ಠ ಅಲಂಕರಣವಿಲ್ಲ. ಭಿತ್ತಿಯು ಮಂಚಬಂಧಶೈಲಿಯಲ್ಲಿದ್ದು ದೇವಾಲಯದ ಭಿತ್ತಿಗೆ ಪೂರಕವಾಗಿ ಕಕ್ಷಾಸನ ರೀತಿಯ ಚಿಕ್ಕದಾದ ಕಟ್ಟೆ ನಿರ್ಮಾಣ ಮಾಡಲಾಗಿದೆ.

**ಶಿಖರ** : ಗರ್ಭಗೃಹದ ಮೇಲೆ ಗಾರೆಯ ದ್ವಿತಲ ಶಿಖರವುಂಟು. ಇದು ಜೀರ್ಣೋದ್ಧಾರದ ಸಂದರ್ಭದಲ್ಲಿ ನಿರ್ಮಿಸಿದಂತೆ ಕಾಣುತ್ತದೆ. ಶಿಖರದಲ್ಲಿ ಉಪಶಿಖರಗಳು. ಅರ್ಧಗಂಭಗಳು, ಮುಂಭಾಗ, ಶಿವಪಾರ್ವತಿ, ನಾಲ್ಕು ಮುಖಗಳಲ್ಲಿ ಶೈವ ಶಿಲ್ಪಗಳು ಹಾಗೂ ಶಿಖರದ ನಾಲ್ಕು ಮೂಲೆಗಳಲ್ಲಿ ನಂದಿ ಶಿಲ್ಪಗಳನ್ನು ಅಳವಡಿಸಲಾಗಿದೆ. ಉಳಿದಂತೆ ಶಿಖರದಲ್ಲಿ ಗಾರೆ ಶಿಲ್ಪಗಳಿದ್ದು ಸುಣ್ಣ ಬಳಿದಿರುವುದರಿಂದ ಸ್ಪಷ್ಟವಿಲ್ಲ. ತುದಿಯಲ್ಲಿ ಗುಮ್ಮಟಕ್ಕೆ ಕಮಲದಳಗಳ ಅಲಂಕರಣವಿದೆ.

**ನಂದಿ ಮಂಟಪ** : ಮುಖಮಂಟಪದ ಮುಂಭಾಗದಲ್ಲಿ ಶಿವಲಿಂಗಕ್ಕೆ ಅಭಿಮುಖವಾಗಿ ವೇದಿಕೆಯಿಂದ ಕೂಡಿದ ನಾಲ್ಕು ಕಂಬಗಳ ಬಿಡಿ ಮಂಟಪವಿದ್ದು ಅದರಲ್ಲಿ ನಂದಿಶಿಲ್ಪವಿದೆ. ನಂತರದಲ್ಲಿ ಅದರ ಮುಂಭಾಗದಲ್ಲಿ ಸುಮಾರು ೧೨ ಅಡಿ ಎತ್ತರವಿರುವ ದೀಪಸ್ತಂಭವಿದೆ.

## ೧.೫.೧೦ ಪಂಪಾಪತಿ ದೇವಾಲಯ- ಕನಕಗಿರಿ

ಕನಕಗಿರಿ ಗಂಗಾವತಿ ತಾಲೂಕಿನಲ್ಲಿದ್ದು ಗಂಗಾವತಿಯಿಂದ ೨೦ ಕಿ.ಮೀ. ದೂರದಲ್ಲಿದೆ. ಗ್ರಾಮದ ರಥಬೀದಿಯಲ್ಲಿ ಈ ದೇವಾಲಯ ಇದೆ.

**ತಲವಿನ್ಯಾಸ :**

ಪಂಪಾಪತಿ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಈ ದೇವಾಲಯದ ಉತ್ತರಾಭಿಮುಖವಾಗಿ ನಂದಿಮಂಟಪವನ್ನು ಹೊಂದಿದೆ. ಈ ದೇವಾಲಯವನ್ನು ಕನಕಗಿರಿ ಪಾಳೇಗಾರ ನವಾಬ ಕುಡಚಪ್ಪ ನಾಯಕ (೧೫೧೦-೧೫೩೩) ನಿರ್ಮಿಸಿದ್ದಾನೆ.[೨]

**ವಾಸ್ತುವಿವರ :**

**ಸಭಾಮಂಟಪ** : ಸಭಾಮಂಟಪವು ಪ್ರತಿ ಸಾಲಿನಲ್ಲಿ ಐದರಂತೆ ಎರಡು ಸಾಲಿನಲ್ಲಿ ಹತ್ತು ಅಂಕಣಗಳನ್ನು ಹೊಂದಿದೆ. ಪ್ರವೇಶಭಾಗವನ್ನು ಹೊರತುಪಡಿಸಿ ಎರಡೂ ಪಕ್ಕದಲ್ಲಿ ಗೋಡೆ ಇದೆ. ಸಭಾಮಂಟಪದಲ್ಲಿ ಮುಂದೆ, ಮಧ್ಯೆ ಮತ್ತು ಕೊನೆಯಲ್ಲಿ ಪ್ರತಿ ಆರು ಕಂಬಗಳ ಮೂರು ಸಾಲುಗಳಿವೆ. ಇವುಗಳಲ್ಲಿ ಎರಡು ಕಂಬಗಳು, ಎಂಟು ಅರ್ಧಗಂಬಗಳು ಮತ್ತು ಎರಡು ಮೂಲೆಗಂಬಗಳು ಇವೆ. ಮುಂದಿನ ನಾಲ್ಕು ಕಂಬಗಳು ಪೀಠ, ಕಾಂಡ, ಕುಂಬ, ಕಳಶ, ತಾಡಿ ಹಾಗೂ ಫಲಕಗಳನ್ನು ಹೊಂದಿದೆ. ಕಾಂಡಭಾಗದ ಮಧ್ಯದಲ್ಲಿ ಅಷ್ಟಮುಖಗಳ ಎರಡು ಅಡ್ಡಪಟ್ಟಿಕೆಗಳಿವೆ. ಮಧ್ಯದ ನಾಲ್ಕು ಫಲಕಗಳು ಪೀಠ, ಕಾಂಡ (ಇಲ್ಲಿ ಮೇಲೆ ಕೆಳಗೆ ಚಚ್ಚೌಕ ಭಾಗಗಳ ನಡುವೆ ಲಂಬವಾದ ಅಷ್ಟಮುಖಗಳ ಭಾಗವಿದೆ.) ಕಳಶ, ತಾಡಿ ಭಾಗಗಳನ್ನು ಹೊಂದಿದೆ. ಕಂಬಗಳ ಮೇಲೆ ಸರಳವಾದ ಬೋದಿಗೆಗಳಿವೆ.

**ಅಂತರಾಳ** : ಅಂತರಾಳದ ದ್ವಾರಬಂಧವು ಪುಷ್ಪಶಾಖ, ಸ್ತಂಭಶಾಖ ಹಾಗೂ ಜಾಲಂದರ ಶಾಖಗಳಿಂದ ಕೂಡಿ ಸ್ವಲ್ಪ ಆಕರ್ಷಕವಾಗಿದೆ. ಬಾಗಿಲ ಬದಿಯಲ್ಲಿ ತ್ರಿಶೂಲ, ಗದಾ, ಡಮರು ಹಿಡಿದ ಶೈವ ದ್ವಾರಪಾಲಕರ ಶಿಲ್ಪಗಳಿವೆ. ಲಲಾಟಬಿಂಬವು ಯಾವುದೇ ಶಿಲ್ಪವನ್ನು ಒಳಗೊಂಡಿಲ್ಲ. ಅಂತರಾಳವು ಗರ್ಭಗೃಹ ಮತ್ತು ಸಭಾ ಮಂಟಪಗಳ ಮಧ್ಯೆ ಇರುವುದರಿಂದ ಇಲ್ಲಿ ಯಾವುದೇ ಕಂಬಗಳಿಲ್ಲ. ಎರಡೂ ಬದಿಯಲ್ಲಿ ಗೋಡೆ ಇದೆ. ಅಂತರಾಳದ ಬಾಗಿಲ ಮುಂದಿನ ಅಂಕಣದ ಛತ್ತಿನಲ್ಲಿ ಮಾತ್ರ ಅರಳಿದ ಕಮಲಾಕೃತಿ ಇದ್ದು, ಉಳಿದ ಕಡೆ ಯಾವುದೇ ಅಂಕರಣೆಯಿಲ್ಲದೆ ಸರಳವಾಗಿದೆ. ಮಧ್ಯದಲ್ಲಿ ಗರ್ಭಗೃಹಕ್ಕೆ ಎದುರಾಗಿ ನಂದಿಯ ಶಿಲ್ಪವಿದೆ. ಅಂತರಾಳದ ಎಡಭಾಗವನ್ನು ವಿಸ್ತರಿಸಿ ಮತ್ತೊಂದು ಗರ್ಭಗೃಹವನ್ನು ನಿರ್ಮಿಸಲಾಗಿದ್ದು, ಅಲ್ಲಿ ಪಾರ್ವತಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಬಹುಶಃ ಈ ಭಾಗ ನಂತರದಲ್ಲಿ ಸೇರ್ಪಡೆಯಾಗಿರಬಹುದು.

**ಗರ್ಭಗೃಹ** : ಗರ್ಭಗೃಹದ ಬಾಗಿಲು ಸರಳವಾಗಿದೆ. ಒಳಗೆ ನಾಲ್ಕು ಮೂಲೆಗಂಬಗಳಿವೆ. ಛತ್ತು ಅರಳಿದ ಕಮಲಾಕೃತಿ ಇದೆ. ಗರ್ಭಗೃಹದ ಮಧ್ಯದಲ್ಲಿ ಬ್ರಹ್ಮಸೂತ್ರವುಳ್ಳ ಶಿವಲಿಂಗವಿದೆ.

**ದೇವಾಲಯದ ಹೊರಭಾಗ :**

**ಅಧಿಷ್ಠಾನ** : ಅಧಿಷ್ಠಾನವು ಮಂಚಬಂಧ ಪ್ರಕಾರದಲ್ಲಿದ್ದು ೯೦ ಸೆಂ.ಮೀ. ಎತ್ತರವಾಗಿದೆ. ದೇವಾಲಯದ ಹೊರಭಿತ್ತಿಯು ಯಾವುದೇ ಅಲಂಕರಣೆಯಿಲ್ಲದೆ ಸರಳವಾಗಿದೆ. ಸಭಾಮಂಟಪ ಮಾಡಿನ ಮುಂಚೂರು ಮುಂದೆ ಚಾಚಿದ್ದು ಇಳಿಜಾರಾಗಿದೆ. ಅದರ ಮೇಲ್ಭಾಗದಲ್ಲಿ ಶಾಲಾ ಕೂಟಗಳಿರುವ

ದೇವಕೋಷ್ಠಗಳಿದ್ದು ಅವುಗಳಲ್ಲಿ ಗಿರಿಜಾಕಲ್ಯಾಣ, ನಟರಾಜ, ವೀರಭದ್ರ, ಗಣೇಶ, ನಂದಿವಾಹನ, ಉಮಾಮಹೇಶ್ವರ, ಷಣ್ಮುಖ ಗಾರೆ ಶಿಲ್ಪಗಳಿವೆ.

**ಶಿಖರ** : ಶಿಖರವನ್ನು ಇಟ್ಟಿಗೆ, ಗಾರೆಗಳಿಂದ ನಿರ್ಮಿಸಲಾಗಿದೆ. ಅದು ಗರ್ಭಗೃಹದ ಉದ್ದಗಲಕ್ಕೂ ವಿಸ್ತರಿಸಿದ್ದು, ಏಕತಳ ವಿಮಾನ ಮಾದರಿಯಲ್ಲಿದೆ. ಸ್ತೂಪಿಯು ವರ್ತುಳಾಕೃತಿಯದಿದೆ. ಆದ್ದರಿಂದ ಇದು ವೇಸರ ವಿಮಾನ ಮಾದರಿಯ ಶಿಖರವಾಗಿದೆ.

**ನಂದಿಮಂಟಪ :**

ದೇವಾಲಯದ ಎದುರಿಗೆ ರಥಬೀದಿಯ ಇನ್ನೊಂದು ಪಕ್ಕದಲ್ಲಿ ನಂದಿ ಮಂಟಪವಿದೆ. ಚಚ್ಚೌಕ ಸುಮಾರು ೨.೭೫ ಮೀಟರ್ ಅಳತೆಯ ಈ ಮಂಟಪವು ಸುತ್ತಲು ಗೋಡೆಯನ್ನು, ಮೇಲೆ ಶಿಖರವನ್ನು ಹೊಂದಿದ್ದು ಒಳಗಡೆ ನಂದಿಯ ಶಿಲ್ಪವಿದೆ.

**೫.೧.೧೧ ಶ್ರೀ ಪಂಪಾವಿರೂಪಾಕ್ಷ ದೇವಾಲಯ- ಕುರೇಕುಪ್ಪಿ**

ಕುರೇಕುಪ್ಪಿ ಗ್ರಾಮವು ಸಂಡೂರು ತಾಲೂಕಿನಲ್ಲಿದ್ದು ಹೊಸಪೇಟೆ-ಬಳ್ಳಾರಿ ರಸ್ತೆಯಿಂದ ಎಡಕ್ಕೆ ೧ ಕಿ.ಮೀ. ಅಂತರದಲ್ಲಿದೆ.

**ತಲವಿನ್ಯಾಸ :**

ಈ ದೇವಾಲಯವು ತೆರೆದ ಮುಖಮಂಟಪ, ಸಭಾಮಂಟಪ ಮತ್ತು ಸಮಾನವೇದಿಕೆಯ ಮೂರು ಗರ್ಭಗೃಹಗಳನ್ನು ಹೊಂದಿದೆ.

**ಶಾಸನದ ಮಾಹಿತಿ :**

ದೇವಾಲಯದ ಸಭಾ ಮಂಟಪದ ಕಂಬದ ಮೇಲಿರುವ ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದ ಕ್ರಿ.ಶ. ೧೫೨೩ ರ ಶಾಸನದಲ್ಲಿ ಅನಂತಸೇತು ಎಂಬ ಪ್ರತಿನಾಮದ ಕುರೇಕುಪ್ಪದಲ್ಲಿ ಹೆಗ್ಗರಸರ ಮಕ್ಕಳು ಘಳಿಯಾರದ ಬಾಗಿಲ ಬೆನಕರಸರು ದೇವಾಲಯವನ್ನು ಕಟ್ಟಿಸಿ ವಿರೂಪಾಕ್ಷ ದೇವರ ಪ್ರತಿಷ್ಠೆಯನ್ನು ಮಾಡಿ ಆ ದೇವರ ನೈವೇದ್ಯ, ಪೂಜೆ, ಪುನಸ್ಕಾರ, ನಿತ್ಯ ಸೇವೆಗಳಿಗ ಬಸವಾದಿ ದೀಕ್ಷಿತರ ಆಗ್ನಾಕ್ರಯದ ವೃತ್ತಿಗಳೊಳಗೆ ಮಹಾಜನಗಳ ಕೈಯಲ್ಲಿ ಕ್ರಮದಾನವಾಗಿಕೊಂಡು ಧಾರಾಪೂರ್ವಕವಾಗಿ ಸಮರ್ಪಿಸಿದರೆಂದಿದೆ.[೧೩]

**ವಾಸ್ತುವಿವರ :**

**ಮುಖಮಂಟಪ** : ಈ ದೇವಾಲಯದ ಮುಖಮಂಟಪವು ಉತ್ತರ-ದಕ್ಷಿಣಾಭಿಮುಖವಾಗಿ ಎರಡು ಸಾಲಿನಲ್ಲಿ ಆರು ಅಂಕಣಗಳನ್ನು ಹೊಂದಿದೆ. ಇಲ್ಲಿ ಎಂಟು ಕಂಬಗಳಿವೆ. ಮುಂಭಾಗದಲ್ಲಿ ನಾಲ್ಕು, ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು ಇವು ಬೃಹತ್ ಗಾತ್ರದಿಂದ ಗಮನಸೆಳೆಯುತ್ತವೆ. ಮುಂಭಾಗದ ಮಧ್ಯದ ಎರಡು ಒಟ್ಟು ನಾಲ್ಕುಕಂಬಗಳು ಪೀಠ, ಕಾಂಡ, ಕುಂಭ, ಕಳಶ, ಫಲಕಗಳನ್ನು ಹೊಂದಿವೆ. ಪೀಠವು ಮಂಚಬಂಧಶೈಲಿಯಲ್ಲಿದೆ. ಕಾಂಡದ ಕೆಳಭಾಗ ಮತ್ತು ಮಧ್ಯಭಾಗದಲ್ಲಿ ಅಸಮವಾದ ಚತುರ್ಮುಖದ ಭಾಗಗಳಿವೆ. ಇವುಗಳ ಮಧ್ಯದಲ್ಲಿ ೧೬, ೧೮, ೧೬ ಮುಖಗಳ ಅಡ್ಡ ಪಟ್ಟಿಕೆಗಳಿವೆ. ೧೬ ಮುಖಗಳ ಪಟ್ಟಿಕೆಯನ್ನು ಸ್ವಲ್ಪ ಒಳಭಾಗದಲ್ಲಿ ಕೊರೆದಂತೆ ರೂಪಿಸಲಾಗಿದೆ. ಚೌಕಭಾಗದ ಮೇಲೆ ಯಾವುದೇ ಉಬ್ಬುಶಿಲ್ಪಗಳಿಲ್ಲ. ಆದರೆ ಮಧ್ಯದ ಎರಡು ಕಂಬಗಳ ಕೆಳಗಿನ ಚೌಕಕಾಂಡಗಳಲ್ಲಿ

ಶಾಸನಗಳನ್ನು ಕಂಡರಿಸಲಾಗಿದೆ. ಕಂಬಗಳ ಕುಂಭ ಭಾಗದಲ್ಲಿ ಕೆಳಗೆ ಪದ್ಮಭಾಗ, ಕಳಶ, ಫಲಕಗಳು ವಿಶಾಲವಾಗಿವೆ. ಕಂಬಗಳ ಮೇಲ್ಭಾಗದಲ್ಲಿ ಸರಳವಾದ ಬೋದಿಗೆಗಳಿವೆ. ಮುಖಮಂಟಪ ಬದಿಯ ಕಂಬಗಳು ಸಾಧಾರಣವಾಗಿವೆ. ಕೆಳಗೆ ಮತ್ತು ಮೇಲೆ ಅಸಮವಾದ ಚೌಕಭಾಗಗಳನ್ನು ಹೊಂದಿದ್ದು ಮಧ್ಯದಲ್ಲಿ ಅಷ್ಟಮುಖದ ಲಂಬ ಪಟ್ಟಿಗಳಿವೆ. ಮೇಲೆ ಕಿರಿದಾದ ಕುಂಭ, ಕಳಶಗಳಿವೆ. ಇವುಗಳ ಮೇಲೆ ಬೋದಿಗೆ ಸರಳವಾಗಿದ್ದು ಮುಖಮಂಟಪದ ಛತ್ತು ಸಮತಟ್ಟಾಗಿದೆ. ಇದು ಸಂಪೂರ್ಣ ತೆರೆದ ರೀತಿಯಲ್ಲಿದೆ.

**ಸಭಾ ಮಂಟಪ :** ಸಭಾಮಂಟಪದಲ್ಲಿ ತರೆದಿದ್ದು, ಮುಖಮಂಟಪದಷ್ಟೆ ವಿಸ್ತಾರದಲ್ಲಿದೆ. ಇದು ಮುಖಮಂಟಪಕ್ಕಿಂತ ಒಂದು ಅಡಿ ಎತ್ತರದಲ್ಲಿದೆ. ಸಭಾಮಂಟಪದ ಮುಂಭಾಗದಲ್ಲಿ ನಾಲ್ಕು ಮತ್ತು ಮಧ್ಯದಲ್ಲಿ ನಾಲ್ಕು ಒಟ್ಟು ಹತ್ತು ಕಂಬಗಳಿವೆ. ಅವುಗಳಲ್ಲಿ ೪ ಸ್ವತಂತ್ರ ಕಂಬಗಳಾದರೆ, ಆರು ಗೋಡೆಗಂಬಗಳು. ಈ ಕಂಬಗಳು ಮುಖಮಂಟಪದ ಕಂಬಗಳಂತೆ ವಾಸ್ತು ಭಾಗಗಳನ್ನು ಹೊಂದಿವೆ. ಇದರ ಛತ್ತು ಕೂಡ ಸಮತಟ್ಟಾಗಿದೆ. ಸಭಾಮಂಟಪದ ಮಧ್ಯದಲ್ಲಿ ಮಧ್ಯದ ಗರ್ಭಗೃಹಕ್ಕೆ ಎದುರಾಗಿ ನಂದಿ ಇದೆ. ಇಲ್ಲಿ ಬದಿಯ ೨ ಗೋಡೆಗಳಲ್ಲಿ ದೇವಕೋಷ್ಠಗಳಿದ್ದು, ಅವುಗಳಲ್ಲಿ ಸದ್ಯ ಗರುಡ (ಬಲಗಡೆ) ಭೈರವ (ಎಡಗಡೆ) ಶಿಲ್ಪಗಳೀವೆ. ಈ ದೇವಕೋಷ್ಠಗಳ ಮೇಲ್ಭಾಗದಲ್ಲಿ ನಾಗರಶೈಲಿಯ ಶಿಖರದ ಮಾದರಿಯಿದೆ.

**ಗರ್ಭಗೃಹಗಳು (ಮೂರು) :**

ಮುಖಮಂಟಪವು ಸಭಾಮಂಟಪದಷ್ಟೆ ಅಗಲವಾಗಿ, ಒಂದೊಂದು ಅಂಕಣದ ಸಾಲಾಗಿ ೩ ಗರ್ಭಗೃಹಗಳಿವೆ. ಮಧ್ಯದ ಗರ್ಭಗೃಹದಲ್ಲಿ ಪಂಪಾವಿರೂಪಾಕ್ಷ ಲಿಂಗವಿದ್ದು ಈ ಗರ್ಭಗೃಹದ ಛತ್ತಿನಲ್ಲಿ ಅರಳುಕಮಲದ ಪುಷ್ಪಾಕೃತಿ ಇದೆ. ಮುಖ್ಯ ಗರ್ಭಗೃಹದ ಬಲಬದಿಯ ಗರ್ಭಗೃಹದಲ್ಲಿ ಗಣೇಶನನ್ನು ಪ್ರತಿಷ್ಠಾಪಿಸಲಾಗಿದೆ.

ಗಣೇಶ ಗರ್ಭಗೃಹದ ದ್ವಾರಬಂಧದಲ್ಲಿ ೨ ಬದಿಗೆ ಶೈವದ್ವಾರಪಾಲಕರ ಶಿಲ್ಪಗಳಿವೆ. ದ್ವಾರಪಾಲಕರ ಇಕ್ಕೆಲಗಳಲ್ಲಿ ಚಾಮರ ಧಾರಿಣಿಯರಿದ್ದಾರೆ. ದ್ವಾರಬಂಧವು ೪ ಶಾಖೆಗಳಲ್ಲಿದೆ. ಸಿಂಹಶಾಖೆ, ಸ್ತಂಭಶಾಖೆ, ಲತಾ & ಪುಷ್ಪಶಾಖೆಗಳು ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳಿಲ್ಲ. ಲಲಾಟಬಿಂಬದ ಎರಡೂಬದಿಗೆ ಕುಡ್ಮಲಗಳಿವೆ. ಉತ್ತಿರಾಂಗದಲ್ಲಿ ನಾಗರಶೈಲಿ ಶಿಖರದ ಮಾದರಿಗಳಿವೆ.

ಎಡಬದಿಯ ಗರ್ಭಗೃಹದಲ್ಲಿ ಸದ್ಯ ವೀರಭದ್ರೇಶ್ವರ ವಿಗ್ರಹ ಪ್ರತಿಷ್ಠಾಪಿಸಲಾಗಿದೆ. ಛತ್ತಿನಲ್ಲಿ ಅರಳುಕಮಲಾಕೃತಿ ಇದೆ. ಇದರ ದ್ವಾರಬಂಧದ ಇಕ್ಕೆಲಗಳಲ್ಲಿ ಶೈವದ್ವಾರಪಾಲಕರ ಶಿಲ್ಪಗಳಿವೆ. ದ್ವಾರಬಂಧದಲ್ಲಿ ರತ್ನಶಾಖ, ಲತಾಶಾಖ, ಸ್ತಂಭಶಾಖ, ಪುಷ್ಪಶಾಖಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿ ಬಿಂಬವಿದೆ. ಇಕ್ಕೆಲಗಳಲ್ಲಿ ಕುಡ್ಮಲಗಳಿವೆ. ಉತ್ತೀರ್ಣರಾಂಗದಲ್ಲಿ ನಾಗರಶೈಲಿಯ ಶಿಖರ ಮಾದರಿಯಿದೆ.

**ದೇವಾಲಯದ ಹೊರಭಾಗ :**

ಸಭಾಮಂಟಪ ಮತ್ತು ಗರ್ಭಗೃಹಗಳು ಒಂದೇ ಅಳತೆಯಲ್ಲಿರುವುದರಿಂದ ಹೊರಭಿತ್ತಿಯು ಎರಡಕ್ಕೂ ಏಕಪ್ರಕಾರವಾಗಿದೆ. ಅಧಿಷ್ಠಾನವು ಭೂಮಿಯಲ್ಲಿ ಮುಚ್ಚಿರುವುದರಿಂದ ಸ್ಪಷ್ಟವಾಗುವುದಿಲ್ಲ. ಆದರೆ ಮಂಚಬಂಧ ಶೈಲಿಯು ಇರುವುದಾಗಿ ತಿಳಿಯುತ್ತದೆ. ಭಿತ್ತಿಯನ್ನು ಮಟ್ಟಸಗೊಳಿಸಿದ ಬ್ರಹತ್

ಕಲ್ಲುಗಳಿಂದ ಕಟ್ಟಲಾಗಿದೆ. ಕೆಳಗಿನ ಕಲ್ಲುಗಳು ೭೫ ಅಡಿ ಉದ್ದವಾಗಿರುವುದು ಗಮನಾರ್ಹ. ಭಿತ್ತಿ ಮೇಲ್ಭಾಗದಲ್ಲಿ ಸರಳವಾದ ಕಪೋತವಿದೆ. ಮಾಡಿನಲ್ಲಿ ನಾಲ್ಕೂ ಮೂಲೆಗೆ ನಂದಿಯ ಗಾರೆ ಶಿಲ್ಪಗಳಿವೆ. ಮುಖಮಂಟಪದ ಮಾಡಿನಲ್ಲೂ ಮುಖಭಾಗದಲ್ಲಿ ಗಾರೆಯ ಶಾಲಾ ಕೂಟಗಳಿವೆ. ಮಧ್ಯದಲ್ಲಿ ಗಣೇಶ, ಷಣ್ಮುಖಸಹಿತ ಶಿವ, ಬ್ರಹ್ಮ ಮತ್ತು ಗರುಡವಾಹನ ವಿಷ್ಣು ಶಿಲ್ಪಗಳಿದ್ದು ಈ ಗಾರೆ ಶಿಲ್ಪಗಳು ಭಗ್ನವಾಗಿದ್ದು ದುರಸ್ತಿಗೊಳಿಸಲಾಗಿದೆ. ಗರ್ಭಗೃಹದ ಮೇಲೆ ಮಧ್ಯಮ ಪ್ರಮಾಣದ ದ್ರಾವಿಡ ಮಾದರಿಯ ಏಕತಲ ಗೋಪುರ / ಶಿಖರವಿದೆ. ಇದರ ಸ್ತೂಪಿ ವೃತ್ತಾಕಾರವಾಗಿದ್ದು ನಾಲ್ಕೂಮೂಲೆಗೆ ಕೀರ್ತಿ ಮುಖಗಳ ಅಲಂಕರಣೆ ಇದೆ. ಸ್ತೂಪಿಯ ಕೆಳಭಾಗದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ ದುರ್ಗೆಯರ ಶಿಲ್ಪಗಳಿವೆ. ಸ್ತೂಪಿಯ ಕೆಳಭಾಗದಲ್ಲಿ ನಾಲ್ಕೂ ದಿಕ್ಕಗೆ ಕಾಮಧೇನುವಿನ ಶಿಲ್ಪವಿರುವುದು ವಿಶೇಷ. ಗಾರೆ ಶಿಲ್ಪಗಳನ್ನು ಗಮನಿಸಲಾಗಿ ಕೆಲವು ಶಿಲ್ಪಗಳ ವೇಷಭೂಷಣೆಗಳು ವಿಜಯನಗರೋತ್ತರ ಕಾಲದವೆನಿಸುತ್ತವೆ. ಹಾಗಾಗಿ ಇದರ ಗಾರೆ ಶಿಲ್ಪಗಳನ್ನು ವಿಜಯನಗರೋತ್ತರ ಅಂದರೆ ಪಾಳೆಗಾರರ ಕಾಲದಲ್ಲಿ ದುರಸ್ತಿಗೊಳಿಸಾಗಿದೆ ಎಂದು ಹೇಳಬಹುದು.

**೫.೧.೧೨ ಪಂಪಾಪತಿ ದೇವಾಲಯ-ಬೆಣ್ಣಿಹಳ್ಳಿ**

**ತಲವಿನ್ಯಾಸ :**

ಬೆಣ್ಣಿಹಳ್ಳಿಯು ಹರಪನಹಳ್ಳಿ ತಾಲೂಕಿನಲ್ಲಿದೆ. ಈ ಗ್ರಾಮದ ಮಧ್ಯದಲ್ಲಿ ಪಂಪಾಪತಿ ದೇವಾಲಯವಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ಮುಖಮಂಟಪವನ್ನು ಹೊಂದಿದೆ.

**ಶಾಸನದ ಮಾಹಿತಿ :**

ಈ ದೇವಾಲಯದ ಹೊಯ್ಸಳ ವೀರ ನರಸಿಂಹ ಕಾಲದ ಕ್ರಿ.ಶ. ೧೧೬೭ ರ ಶಾಸನದಲ್ಲಿ ಉತ್ತರಕ್ಕೆ ಹೆಗ್ಗಡೆ, ಜನಯ್ಯ ಹೆಗ್ಗಡೆಗಳು ವಿರೂಪಾಕ್ಷನ ಲಕ್ಷದಡುಗೆಗೆ ನೈವೇದ್ಯಕ್ಕ ಹಾಗೂ ಬ್ರಾಹ್ಮಣರ ಭೋಜನಕ್ಕೆ ಮೂಲಿಗದರೆ, ಪಂಚಕರುದರೆ, ಮಗ್ಗದರೆ, ಗಾಣದರೆ ಮುಂತಾದ ಕಿರುದರೆಗಳನ್ನು ಕೋಗಳಿನಾಡ ಪ್ರಭುಗಳ ಮುಂದೆ ಚಂಡೇಶ್ವರ ದೇವರಿಗೆ ಬಿಟ್ಟಿದ್ದಾರೆ.[೧೪]

**ವಾಸ್ತು ವಿವರ :**

**ಗರ್ಭಗೃಹ** : ಗರ್ಭಗೃಹವು ಒಂದು ಅಂಕಣದಲ್ಲಿದ್ದು ಚೌಕ ವಿನ್ಯಾಸದಲ್ಲಿದೆ. ನಾಲ್ಕು ಮೂಲೆಗಂಬಗಳಿದ್ದು ಭಿತ್ತಿ ಸರಳವಾಗಿದೆ. ಛತ್ತಿನಲ್ಲಿ ಅರಳು ಕಮಲಾಕೃತಿಯ ಭುವನೇಶ್ವರಿ ಇದೆ. ಗರ್ಭಗೃಹದ ಮಧ್ಯದಲ್ಲಿ ಪೀಠರಹಿತ ಶಿವಲಿಂಗವಿದೆ. ಗರ್ಭಗೃಹದ ದ್ವಾರಬಂಧವು ಸರಳವಾಗಿದ್ದು ಇದರ ಹೊಸ್ತಿಲು ಆಕರ್ಷಕವಾಗಿ ಕೆತ್ತಲ್ಪಟ್ಟಿದೆ.

**ಅಂತರಾಳ** : ಅಂತರಾಳವು ಗರ್ಭಗೃಹದಷ್ಟೇ ವಿಸ್ತೀರ್ಣವಾಗಿದ್ದು ವಿಶೇಷ ವಾಸ್ತು ಅಲಂಕರಣೆಯನ್ನು ಹೊಂದಿಲ್ಲ. ಅಂತರಾಳದ ಮಧ್ಯದಲ್ಲಿ ನಂದಿ ಇದೆ.

**ಸಭಾ ಮಂಟಪ :** ಒಂಬತ್ತು ಅಂಕಣಗಳಲ್ಲಿರುವ ಸಭಾ ಮಂಟಪ ಅಥವಾ ನವರಂಗ ಮಧ್ಯದಲ್ಲಿ ನಾಲ್ಕು ಕಂಬಗಳನ್ನು, ನಾಲ್ಕು ಮೂಲೆಗಂಬಗಳನ್ನು, ಎಂಟು ಗೋಡೆಗಂಬಗಳನ್ನು ಹೊಂದಿದೆ. ಮಧ್ಯದ ನಾಲ್ಕು ಕಂಬಗಳು ಆಕರ್ಷಕವಾಗಿವೆ. ಇವು ವೃತ್ತಾಕಾರದಲ್ಲಿದ್ದು ತಿರುಗುಣಿ ಯಂತ್ರಗಳಲ್ಲಿ

ಮಾಡಿದವುಗಳಾಗಿವೆ. ಹೊಯ್ಸಳ ಶೈಲಿಯ ಈ ಕಂಬಗಳು ಕಾಂಡದ ಕೆಳಭಾಗದಲ್ಲಿ ಚೌಕಭಾಗವನ್ನು ಹೊಂದಿದ್ದು ಮೇಲೆ ವೃತ್ತಾಕಾರದ ಹಲವು ಬಳೆಗಳನ್ನು ಹೊಂದಿದೆ. ಕುಂಭ, ಕಳಶ ಭಾಗಗಳೂ ಇದ್ದು ಎಲ್ಲವೂ ಅತ್ಯಂತ ನುಣುಪಾಗಿವೆ. ಕಪ್ಪು ಕಲ್ಲಿನ ಈ ಕಂಬಗಳು ಅತ್ಯಂತ ಆಕರ್ಷಕವಾಗಿವೆ. ನವರಂಗದ ಭಿತ್ತಿಯ ದೇವಕೋಷ್ಟಗಳಲ್ಲಿ ವೀರಭದ್ರ, ಗಣೇಶ, ಸಪ್ತಮಾತೃಕೆ ಮತ್ತು ನಾಗಶಿಲ್ಪ ಮುಂತಾದ ಶಿಲ್ಪಗಳಿವೆ. ನವರಂಗದ ಮಧ್ಯದ ಭುವನೇಶ್ವರಿಯೂ ಕೂಡ ಆಳವಾಗಿದ್ದು ಆಕರ್ಷಕವಾಗಿದೆ. ಅರಳು ಕಮಲದ ಮಾದರಿಯಲ್ಲಿರುವ ಇದು ನಾಲ್ಕು ಹಂತದಲ್ಲಿ ಅನೇಕ ದಳಗಳನ್ನು ಹೊಂದಿದೆ. ಸೂಕ್ಷ್ಮವಾದ ಕೆತ್ತನೆಯಿಂದ ಈ ಭುವನೇಶ್ವರಿ ಗಮನಸೆಳೆಯುತ್ತದೆ. ಸಭಾಮಂಟಪದ ದ್ವಾರಬಂಧವು ಹೆಚ್ಚು ಅಳತೆಯಲ್ಲಿದ್ದು ಕೆತ್ತನೆಯಿಂದಾಗಿ ಗಮನಸೆಳೆಯುತ್ತದೆ. ದ್ವಾರದ ಬದಿಯಲ್ಲಿ ಸ್ತಂಭಶಾಖ ಪ್ರಧಾನವಾಗಿದ್ದು ಲಲಾಟದಲ್ಲಿ ಗಜಲಕ್ಷ್ಮಿ ಬಿಂಬವಿದ್ದು ಬದಿಯಲ್ಲಿ ಕುಡ್ಮಲಗಳಿವೆ. ದೇವಾಲಯದ ಹೊರಭಿತ್ತಿಯನ್ನು ಮತ್ತು ಗರ್ಭಗೃಹದ ಮೇಲಿನ ಶಿಖರವನ್ನು ತೀರಾ ಈಚೆಗೆ ನವೀಕರಿಸಲಾಗಿದೆ.

**೫.೧.೧೨ ವಿರೂಪಾಕ್ಷ ದೇವಾಲಯ– ಇಟಗಿ**

ಇಟಗಿಯ ವಿರೂಪಾಕ್ಷ ದೇವಾಲಯವು ರಾಣೆಬೆನ್ನೂರು ತಾಲೂಕಿನಲ್ಲಿನ ಇಟಗಿ ಗ್ರಾಮದ ಮಧ್ಯಭಾಗದಲ್ಲಿದೆ.

**ತಲವಿನ್ಯಾಸ :**

ಈ ದೇವಾಲಯವು ಪ್ರಧಾನ ಗರ್ಭಗೃಹ, ಅಂತರಾಳ ಮತ್ತು ನವರಂಗಗಳಿಂದ ಕೂಡಿದೆ.

**ಶಾಸನದ ಮಾಹಿತಿ :**

ಕ್ರಿ.ಶ. ೧೦೬೯ ರ ಈ ದೇವಾಲಯದ ಶಾಸನದಲ್ಲಿ ವಿರೂಪಾಕ್ಷ ದೇವರ ಸ್ನಾನ ನೈವೇದ್ಯಕ್ಕೆ ಭೂದಾನ ನೀಡಿದ ಉಲ್ಲೇಖವಿದೆ. ಹಾಗೆಯೇ ಮುಂದೆ ರಾಯಮುರಾರಿ ಸೋವಿದೇವನ ಕಾಲದಲ್ಲಿ ಮತ್ತೊಮ್ಮೆ ದಾನ ಬಿಡಲಾಗಿದೆ.[೧೫]

**ವಾಸ್ತು ವಿವರ :**

**ಗರ್ಭಗೃಹ** : ಗರ್ಭಗೃಹವು ಮಧ್ಯಮ ಪ್ರಮಾಣದಲ್ಲಿ ಚೌಕ ತಲವಿನ್ಯಾಸದಲ್ಲಿದ್ದು ಮಧ್ಯದಲ್ಲಿ ವಿರೂಪಾಕ್ಷ ಶಿವಲಿಂಗವಿದೆ. ಗರ್ಭಗೃಹದ ನಾಲ್ಕೂ ಮೂಲೆಗೆ ನಾಲ್ಕು ಅರ್ಧಗಂಬಗಳನ್ನು ಹೊಂದಿದೆ. ಒಳಭಾಗದಲ್ಲಿ ಸುತ್ತಲೂ ಕೈಪಿಡಿ ಇದೆ. ಮಧ್ಯದಲ್ಲಿರುವ ವಿರೂಪಾಕ್ಷ ಶಿವಲಿಂಗದ ಗಾತ್ರವು ಚಿಕ್ಕದಿದ್ದು ಅದರ ಪಾಣಿಬಟ್ಟಲು ಎಡಭಾಗಕ್ಕಿದೆ.

**ಅಂತರಾಳ** : ಅಂತರಾಳವು ಮುಂಬದಿಯಲ್ಲಿ ತೆರೆದಿದ್ದು ಗರ್ಭಗೃಹಕ್ಕಿಂತ ತೀರಾ ಚಿಕ್ಕದಾಗಿದೆ. ಇಲ್ಲಿ ಬದಿಯಲ್ಲಿ ಭಿತ್ತಿಗಳಿದ್ದು ಮುಂಬದಿಯಲ್ಲಿ ದ್ವಾರಬಂಧ ಇರದೇ ಒಡಿಯಾಗಿ ತೆರೆದಿದೆ. ಅಂತರಾಳದ ಮಧ್ಯದಲ್ಲಿ ನಂದಿಯ ವಿಗ್ರಹವಿದೆ.

**ಸಭಾಮಂಟಪ** : ಸಭಾ ಮಂಟಪವು ಒಂಬತ್ತು ಅಂಕಣಗಳಲ್ಲಿದೆ. ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು ಸುತ್ತಲೂ ನಾಲ್ಕು ಮೂಲೆಗಂಬಗಳು, ಎಂಟು ಗೋಡೆಗಂಬಗಳು ಇವೆ. ಮಧ್ಯದ ಕಂಬಗಳು ಪೀಠ, ಕಾಂಡ, ಕುಂಭ, ಕಳಶ, ಫಲಕ ಹೊಂದಿದ್ದು ಚಾಲುಕ್ಯ ಶೈಲಿಯಲ್ಲಿವೆ. ಬೋದಿಗೆಗಳು ತಕ್ಕ ಮಟ್ಟಿಗೆ ಆಕರ್ಷಕವಾಗಿದ್ದು ಕೆತ್ತನೆಯಿಂದ ಕೂಡಿವೆ. ಉಳಿದ ಕಂಬಗಳು ಯಾವುದೇ ಕೆತ್ತನೆ

ಹೊಂದಿರದೆ ತೀರಾ ಸರಳವಾಗಿವೆ. ಅಂತರಾಳದ ಎರಡೂ ಬದಿಯಲ್ಲಿ ಮತ್ತು ಎಡಬದಿಯ ಗೋಡೆಯಲ್ಲಿ ದೇವಕೋಷ್ಠಗಳಿವೆ. ಸಧ್ಯ ಅವುಗಳಲ್ಲಿ ಯಾವುದೇ ವಿಗ್ರಹಗಳಿಲ್ಲ. ಸಭಾ ಮಂಟಪಕ್ಕೆ ಮುಖಭಾಗ (ಪೂರ್ವ) ಮತ್ತು ದಕ್ಷಿಣದ ಬದಿಯಲ್ಲಿ ಪ್ರವೇಶ ದ್ವಾರಗಳಿವೆ. ದಕ್ಷಿಣದ ಪ್ರವೇಶಕ್ಕೆ ಎದುರಾಗಿ ಸಭಾಮಂಟಪದ ಉತ್ತರದ ದಿಕ್ಕಿನ ಭಿತ್ತಿಯ ಮಧ್ಯದ ಅಂಕಣವನ್ನು ಸ್ವಲ್ಪ ಆಳವಾಗಿ ಇರಿಸಿ ಒಂದು ಚಿಕ್ಕ ಗರ್ಭಗೃಹದಂತೆ ರೂಪಿಸಲಾಗಿದೆ. ಹಾಗಾಗಿ ಇದಕ್ಕೆ ಎರಡು ಪ್ರವೇಶಗಳನ್ನು ಮಾಡಲಾಗಿರುವುದು. ಈ ಬದಿಯ ಚಿಕ್ಕ ಬರ್ಭಗೃಹದಲ್ಲಿ ಸಧ್ಯ ಗುಂಡಿನ ಆಕಾರದ ಶಿಲೆಯಿದೆ. ಸಭಾಮಂಟಪದ ಭುವನೇಶ್ವರಿ ಸಾಧಾರಣವಾಗಿದೆ.

**ಹೊರಭಾಗ :**

ದೇವಾಲಯದ ಹೊರಭಾಗ ಬಹುಮಟ್ಟಿಗೆ ಶಿಥಿಲಾಗಿದೆ. ಗರ್ಭಗೃಹ ಮತ್ತು ಅಂತರಾಳಗಳ ಭಿತ್ತಿಗಳನ್ನು ಉದ್ದವಾದ ಅಳತೆ ಕಲ್ಲುಗಳಿಂದ ಕಟ್ಟಿದ್ದು ಸ್ವಲ್ಪ ಮಟ್ಟಿಗೆ ಉತ್ತಮವಾಗಿದೆ. ಅದಿಷ್ಠಾನದ ಭಾಗಗಳು ಬಹುತೇಕವಾಗಿ ಮಣ್ಣಿನಲ್ಲಿ ಹೂತಿದ್ದು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಭಿತ್ತಿಯು ಯಾವುದೇ ಕೆತ್ತನೆ ಹೊಂದಿರದೆ ಮಟ್ಟಸವಾಗಿದೆ. ಗರ್ಭಗೃಹದ ಮೇಲೆ ಶಿಖರವಿರುವುದಿಲ್ಲ. ಸಭಾಮಂಟಪದ ಹೊರಗೋಡೆಯನ್ನು ಕಾಲಾನಂತರದಲ್ಲಿ ಚಿಕ್ಕಚಿಕ್ಕ ಕಲ್ಲುಗಳಿಂದ ಕಟ್ಟಲಾಗಿದೆ. ಪ್ರಾಯಶಃ ಹೊರಭಿತ್ತಿ ಅಪೂರ್ಣವಾಗಿರಬಹುದು ಇಲ್ಲವೆ ಶಿಥಿಲವಾಗಿದ್ದರಿಂದ ಸಣ್ಣಸಣ್ಣ ಕಲ್ಲುಗಳಿಂದ ನಂತರದ ಕಾಲದಲ್ಲಿ ಕಟ್ಟಲಾಗಿರುವಂತೆ ತೋರುತ್ತದೆ. ಆದರೆ ಇವುಗಳ ಬಾಗಿಲುಗಳು ಮೂಲ ವಾಸ್ತು ಲಕ್ಷಣಗಳನ್ನು ಹೊಂದಿವೆ. ದೇವಾಲಯದ ಬಾಗಿಲ ಬಳಿ ಕಲ್ಯಾಣ ಚಾಲುಕ್ಯ ಕಾಲದ ಕ್ರಿ.ಶ. ೧೧೩೦ ರ ಶಾಸನವಿದ್ದು ವಿರೂಪಾಕ್ಷನನ್ನು ಉಲ್ಲೇಖಿಸುತ್ತದೆ. ಹಾಗಾಗಿ ಪ್ರಸ್ತುತ ದೇವಾಲಯ ವಿರೂಪಾಕ್ಷ ದೇವಾಲಯವೆಂದು ಸ್ಪಷ್ಟವಾಗುತ್ತದೆ.

**೫.೨ ಮೂರ್ತಿ ಶಿಲ್ಪಗಳು**

ಭರತಖಂಡದಲ್ಲಿ ವಾಸ್ತುಶಿಲ್ಪ ಮತ್ತು ಮೂರ್ತಿಶಿಲ್ಪ ಈ ಎರಡೂ ಕಲೆಗಳು ಅವಿನಾಭಾವ ಸಂಬಂಧದಿಂದ ಬೆಳೆದುಬಂದಿವೆ. ಮೂರ್ತಿಶಿಲ್ಪವು ವಾಸ್ತುಶಿಲ್ಪಕ್ಕೆ ಪೂರಕವಾಗಿ ಅದರ ಜೊತೆಜೊತೆಯಲ್ಲಿಯೇ ಬೆಳೆದುಬಂದಿದ್ದು ವಾಸ್ತುಶಿಲ್ಪ ಪ್ರಮುಖವಾಗಿ ಧಾರ್ಮಿಕ ಕಟ್ಟಡಗಳ ನಿರ್ಮಾಣದ ಘಟ್ಟವನ್ನು ತಲುಪಿದಾಗ ಆ ಕಟ್ಟಡಗಳಲ್ಲಿ ಪ್ರತಿಷ್ಠಾಪಿಸುವ ಮೂರ್ತಿಗಳ ನಿರ್ಮಾಣ ಶಿಲ್ಪಕಲೆ ಅದಕ್ಕೆ ಅನಿವಾರ್ಯವಾದ ಒಂದು ಅಂಗವಾಗಿ ಪರಿಣಮಿಸಿತು. ವಾಸ್ತುಶಿಲ್ಪ ದೇವರುಗಳಿಗೆ ಆಲಯವನ್ನು ಕಟ್ಟಿದರೆ ಮೂರ್ತಿಶಿಲ್ಪ ಆ ದೇವರುಗಳ ಕಲ್ಪನೆಗೆ ಸಾಂಕೇತಿಕವಾದ ವ್ಯಕ್ತ ಸ್ವರೂಪವನ್ನು ಕೊಡಲು ಪ್ರಯತ್ನಿಸಿತು. ಅಂದರೆ ಮುಖ್ಯವಾಗಿ ಧಾರ್ಮಿಕ ಶ್ರದ್ಧೆಯೇ ಶಿಲ್ಪಕ್ಕೆ ಮೂಲಭೂತ ಪ್ರಚೋದನೆಯಾಗಿ ಪರಿಣಮಿಸಿತೆನ್ನಬಹುದು. ಕಲೆಗೂ, ಧರ್ಮಕ್ಕೂ ಒಂದು ಸಾವಯವ ಸಂಬಂಧವನ್ನು ಭರತಖಂಡದ ಸಂಸ್ಕೃತಿ ಅಳವಡಿಸಿಕೊಂಡಿತೆಂಬುದಕ್ಕೆ ಸಂಗೀತ, ಚಿತ್ರ, ನೃತ್ಯ ಮೊದಲಾದ ಕಲೆಗಳಂತೆ ಮೂರ್ತಿಶಿಲ್ಪವೂ ಒಳ್ಳೇ ಉದಾಹರಣೆಯಾಗಿ ಪರಿಣಮಿಸಿದೆ. ಮೂರ್ತಿಶಿಲ್ಪದ ಪ್ರಾಚೀನತೆಯನ್ನು ಹರಪ್ಪಾ ಸಂಸ್ಕೃತಿಯ ಹಂತದಿಂದಲೇ ನಾವು ಗುರುತಿಸಬಹುದು. ಕನ್ನಡ ನಾಡನ್ನಾಳಿದ ಬಾದಾಮಿ ಚಾಲುಕ್ಯ, ಗಂಗ,

ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಹೊಯ್ಸಳರ ಕಾಲದಲ್ಲಿ ಬೆಳವಣಿಗೆ ಹೊಂದಿದ ಮೂರ್ತಿಶಿಲ್ಪ ಕಲೆ ವಿಜಯನಗರದ ಕಾಲದಲ್ಲಿ ತನ್ನ ಜಿನ್ನತ್ಯದ ಪಾರಮ್ಯತೆಯನ್ನು ಮೆರೆಯಿತು.[೧೬]

**೧. ಶಿಲ್ಪ : ಉಮಾಸಹಿತ ಶಿವ ಮತ್ತು ವೇಣುಗೋಪಾಲ**

ದೊರೆತ ಸ್ಥಳ : ವಿರೂಪಾಕ್ಷ ದೇವಾಲಯ ಹಂಪಿ

ಕಾಲ : ವಿಜಯನಗರ

ಶಿಲ್ಪದ ವಿವರ : ಶಿಲ್ಪದಲ್ಲಿ ಶಿವನು ಪೀಠದ ಮೇಲೆ ಸವ್ಯಲಲಿತಾಸನದಲ್ಲಿ ಕುಳಿತಿದ್ದು ಅವನ ಎಡ ತೊಡೆಯ ಮೇಲೆ ಪಾರ್ವತಿ ಕುಳಿತಿದ್ದಾಳೆ. ಶಿವನು ಚತುರ್ಭುಜನಾಗಿದ್ದು ಕೈಗಳಲ್ಲಿ ವಿವಿಧ ಆಯುಧಗಳನ್ನು ಹಿಡಿದಿದ್ದಾನೆ. ಬಲ ಮುಂದಿನ ಕೈ ಅಭಯಮುದ್ರೆ ಮತ್ತು ಎಡಗೈ ಪಾರ್ವತಿಯನ್ನು ಹಿಡಿದುಕೊಂಡಿದೆ. ಶಿಲ್ಪದಲ್ಲಿ ಕಿರೀಟ ಮುಕುಟ, ಭುಜಕೀರ್ತಿ, ಕೊರಳಲ್ಲಿ ಪದಕಹಾರ, ಕೌಸ್ತುಭ ಹಾರ, ಕಟಿಬಂಧ, ಕಾಲ್ಗಡಗ, ಕೈಗಡಗಗಳಿವೆ. ಪಾರ್ವತಿಯ ತಲೆಯ ಮೇಲೆ ಕಿರೀಟ ಮುಕುಟ, ಆಭರಣ ಉಡುಗೆಗಳಿವೆ. ಈ ಶಿಲ್ಪದ ಪ್ರಭಾವಳಿ ಆಕರ್ಷಕವಗಿದ್ದು ಅದರ ಮೇಲೆ ವಿಶಾಲವಾದ ಸರ್ಪದ ಹೆಡೆ ಇದೆ. ಇದೊಂದು ವಿಶಿಷ್ಟ ಶೈಲಿಯ ಶಿಲ್ಪ.

**ವೇಣುಗೋಪಾಲ** : ವೇಣುಗೋಪಾಲನಾದ ಶ್ರೀಕೃಷ್ಣನು ಕಾಲುಗಳನ್ನು ಪರಸ್ಪರ ವಕ್ರವಾಗಿಸಿ ನಿಂತಿದ್ದು ಚತುರ್ಭುಜನಾಗಿದ್ದಾನೆ. ಹಿಂದಿನ ಕೈಯಲ್ಲಿ ಶಂಕಚಕ್ರಗಳು, ಮುಂದಿನ ಕೈಗಳಿಂದ ಕೊಳಲನ್ನು ನುಡಿಸುತ್ತಿದ್ದಾನೆ. ತಲೆಯ ಮೇಲೆ ಕಿರೀಟಮುಕುಟ, ಪದಕಹಾರ, ಕೌಸ್ತುಭಹಾರ ವಿವಿಧ ಆಭರಣಗಳಿವೆ. ಬದಿಯಲ್ಲಿ ರಾಧೆಯ ಶಿಲ್ಪವಿದೆ. ಜೊತೆಗೆ ಇದೇ ಗುಡಿಯಲ್ಲಿ ಪಕ್ಕದಲ್ಲಿ ಎರಡು ನಂದಿ ಶಿಲ್ಪಗಳು ಮತ್ತು ಗಣೇಶನ ಶಿಲ್ಪವಿದೆ.

**೨. ಶಿಲ್ಪ : ದಕ್ಷಿಣಾಮೂರ್ತಿ**

ದೊರೆತ ಸ್ಥಳ : ಪ್ರಸನ್ನ ವಿರೂಪಾಕ್ಷ ದೇವಾಲಯ ಹಿರೇಜಂತಕಲ್

ಕಾಲ : ವಿಜಯನಗರ

ಶಿಲ್ಪದ ವಿವರ : ದಕ್ಷಿಣಮೂರ್ತಿಯು ಪೀಠದ ಮೇಲೆ ಏಕಪಾದಪದ್ಮಾಸನದಲ್ಲಿ ಆಸೀನನಾಗಿದ್ದಾನೆ. ಚತುರ್ಬಾಹುಗಳಿದ್ದು ಹಿಂದಿನ ಕೈಯಲ್ಲಿ ಜಿಂಕೆ ಮತ್ತು ಅಗ್ನಿಗಳಿವೆ. ಮುಂದಿನ ಬಲಗೈ ಅಭಯಮುದ್ರೆಯಲ್ಲಿದ್ದು ಹೆಬ್ಬೆರಳಿನಲ್ಲಿ ಜಪಮಾಲೆ ಇದೆ. ಎಡಗೈ ಧ್ಯಾನಮುದ್ರೆಯಲ್ಲಿದೆ. ತಲೆಯಲ್ಲಿ ಜಟೆಗಳು ಸುತ್ತಲೂ ಆವರಿಸಿದ್ದು ಜಟಾಮುಕುಟವಾಗಿ ಗೋಚರಿಸುತ್ತದೆ. ಕೊರಳಲ್ಲಿ ರುದ್ರಾಕ್ಷಿಮಾಲೆ, ಭುಜಹಾರ, ಯಜ್ಞೋಪವೀತ, ಕಟಿಬಂಧ ಮುಂತಾದ ಆಭರಣಗಳಿವೆ.

**೩. ಶಿಲ್ಪ : ಕಾಲಭೈರವ**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಪಂಪಾಸರೋವರ

ಕಾಲ : ವಿಜಯನಗರ

ಶಿಲ್ಪದ ವಿವರ : ಕಾಲಭೈರವನ ಸ್ಥಾನಕ ಶಿಲ್ಪವು ತ್ರಿಭಂಗದಲ್ಲಿದೆ. ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ತ್ರಿಶೂಲ (ಬಲ), ಧನಸ್ಸು (ಎಡ) ಹಾಗೆ ಮುಂದಿನ ಕೈಗಳಲ್ಲಿ ಖಡ್ಗ (ಬಲ), ಅಸರುನ ತಲೆ (ಎಡ) ಹಿಡಿದು ನಿಂತಿದ್ದಾನೆ. ಶಿಲ್ಪದ ತಲೆಯ ಮೇಲೆ ಚಿಕ್ಕ ಕಿರೀಟಮುಕುಟ, ಮಣಿಸರ, ಯಜ್ಞೋಪವೀತ,

ಭುಜಹಾರ, ತೋಳ್ಬಂಧಿ, ಮುಂಗೈಕಡಗ, ಕಾಲ್ಗಡಗ ಮತ್ತು ರುಂಡಮಾಲೆ ಧರಿಸಿದ್ದಾನೆ. ಬಲಗಾಲಿನ ಪಕ್ಕದಲ್ಲಿ ನಾಗಶಿಲ್ಪ ಹಾಗೂ ಎಡಗಾಲಿನ ಪಕ್ಕದಲ್ಲಿ ಶ್ವಾನದ ಚಿಕ್ಕ ಶಿಲ್ಪವಿದೆ.

**೪. ಶಿಲ್ಪ : ವೀರಭದ್ರ**

ದೊರೆತ ಸ್ಥಳ : ಪಂಪಾಪತಿ ದೇವಾಲಯ ಬೆಣ್ಣಿಹಳ್ಳಿ

ಕಾಲ : ಹೊಯ್ಸಳ

ಶಿಲ್ಪದ ವಿವರ : ವೀರಭದ್ರನ ಸ್ಥಾನಕ ಶಿಲ್ಪವು ತ್ರಿಭಂಗಶೈಲಿಯಲ್ಲಿದೆ. ಶಿಲ್ಪಕ್ಕೆ ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ಬಾಣ (ಬಲ), ಧನಸ್ಸು (ಎಡ) ಮುಂದಿನ ಕೈಗಳಲ್ಲಿ ಖಡ್ಗ (ಬಲ) ಮತ್ತು ಖೇಟಕ (ಎಡ) ಗಳಿವೆ. ಶಿಲ್ಪದ ತಲೆಯ ಮೇಲೆ ಕಿರೀಟಮುಕುಟ, ಪುಷ್ಪಕುಂಡಲಗಳು, ಮಣಿಸರಗಳು, ಯಜ್ಞೋಪವೀತ, ಭುಜಹಾರ, ಉದರಬಂಧ, ತೋಳ್ಬಂಧಿ, ಮುಂಗೈಕಡಗ ಮತ್ತು ಕಾಲ್ಗಡಗಗಳಿವೆ. ಬಲಗಾಲಿನ ಪಕ್ಕದಲ್ಲಿ ಪೀಠದ ಮೇಲೆ ಅಂಜಲಿ ಮುದ್ರೆಯಲ್ಲಿ ಆಸೀನನಾಗಿರುವ ದಕ್ಷನ (ಟಗರಿನ ತಲೆ) ಚಿಕ್ಕ ಶಿಲ್ಪವಿದೆ.

**೫. ಶಿಲ್ಪ : ಕಾಲಭೈರವ**

ದೊರೆತ ಸ್ಥಳ : ಶ್ರೀ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯ ಹಿರೇಜಂತಕಲ್

ಕಾಲ : ವಿಜಯನಗರ

ಶಿಲ್ಪದ ವಿವರ : ಕಾಲಭೈರವನ ಸ್ಥಾನಕ ಶಿಲ್ಪವು ತ್ರಿಭಂಗದಲ್ಲಿದೆ. ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ತ್ರಿಶೂಲ (ಎಡ), ಡಮರು (ಬಲ) ಹಾಗೆ ಮುಂದಿನ ಕೈಗಳಲ್ಲಿ ಖಡ್ಗ (ಬಲ), ಅಸುರನ ತಲೆ (ಎಡ) ಹಿಡಿದು ನಿಂತಿದ್ದಾನೆ. ಶಿಲ್ಪದ ತಲೆಯ ಮೇಲೆ ಜಟಾಮುಕುಟ, ಮಣಿಸರಗಳು, ಯಜ್ಞೋಪವೀತ, ಭುಜಹಾರ, ತೋಳ್ಬಂಧಿ, ಮುಂಗೈಕಡಗ, ಕಾಲ್ಗಡಗಗಳಿವೆ. ಬಲಗಾಲಿನ ಪಕ್ಕದಲ್ಲಿ ನಾಗಶಿಲ್ಪ ಹಾಗೆ ಎಡಗಾಲಿನ ಪಕ್ಕದಲ್ಲಿ ಶ್ವಾನದ ಚಿಕ್ಕ ಶಿಲ್ಪಗಳಿವೆ.

**೬. ಶಿಲ್ಪ : ವೀರಭದ್ರ**

ದೊರೆತ ಸ್ಥಳ : ಶ್ರೀ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯ ಹಿರೇಜಂತಕಲ್

ಕಾಲ : ವಿಜಯನಗರ

ಶಿಲ್ಪದ ವಿವರ : ವೀರಭದ್ರನ ಸ್ಥಾನಕ ಶಿಲ್ಪವು ತ್ರಿಭಂಗಶೈಲಿಯಲ್ಲಿದೆ. ಶಿಲ್ಪಕ್ಕೆ ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ಬಾಣ (ಬಲ), ಧನಸ್ಸು (ಎಡ) ಮುಂದಿನ ಕೈಗಳಲ್ಲಿ ಖಡ್ಗ (ಬಲ) ಮತ್ತು ಖೇಟಕ (ಎಡ) ಗಳಿವೆ. ಶಿಲ್ಪದ ತಲೆಯ ಮೇಲೆ ಕಿರೀಟಮುಕುಟ, ಪುಷ್ಪಕುಂಡಲಗಳು, ಮಣಿಸರಗಳು, ಯಜ್ಞೋಪವೀತ, ಭುಜಹಾರ, ಉದರಬಂಧ, ತೋಳ್ಬಂಧಿ, ಮುಂಗೈಕಡಗ ಮತ್ತು ಕಾಲ್ಗಡಗಗಳಿವೆ. ಬಲಗಾಲಿನ ಪಕ್ಕದಲ್ಲಿ ಅಂಜಲಿ ಮುದ್ರೆಯಲ್ಲಿ ನಿಂತಿರುವ ದಕ್ಷನ (ಟಗರಿನ ತಲೆ) ಚಿಕ್ಕ ಶಿಲ್ಪವಿದೆ.

**೭. ಶಿಲ್ಪ : ವೀರಭದ್ರ**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಪಂಪಾಸರೋವರ

ಕಾಲ : ವಿಜಯನಗರ

ಶಿಲ್ಪದ ವಿವರ : ವೀರಭದ್ರನ ಸ್ಥಾನಕ ಶಿಲ್ಪವು ಸಮಭಂಗಿಯಲ್ಲಿದೆ. ಶಿಲ್ಪಕ್ಕೆ ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ಬಾಣ (ಬಲ), ಧನಸ್ಸು (ಎಡ) ಮುಂದಿನ ಕೈಗಳಲ್ಲಿ ಖಡ್ಗ (ಬಲ) ಮತ್ತು ಖೇಟಕ (ಎಡ) ಗಳಿವೆ. ಶಿಲ್ಪದ ತಲೆಯ ಮೇಲೆ ಚಿಕ್ಕದಾದ ಕಿರೀಟಮುಕುಟವಿದ್ದು ಪುಷ್ಪಕುಂಡಲಗಳು, ಮಣಿಸರಗಳು, ಯಜ್ಞೋಪವೀತ, ತೋಳ್ಬಂಧಿ, ಮುಂಗೈ ಮತ್ತು ಪಾದಸರಗಳಿವೆ. ಬಲಗಾಲಿನ ಪಕ್ಕದಲ್ಲಿ ಅಂಜಲಿ ಮುದ್ರೆಯಲ್ಲಿ ಆಸೀನನಾಗಿರುವ ದಕ್ಷನ (ಟಗರಿನ ತಲೆ) ಚಿಕ್ಕ ಶಿಲ್ಪವಿದೆ.

**೮. ಶಿಲ್ಪ : ವೀರಭದ್ರ**

ದೊರೆತ ಸ್ಥಳ : ವಿರೂಪಾಕ್ಷೇಶ್ವರ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ವೀರಭದ್ರನ ಈ ಸ್ಥಾನಕ ಶಿಲ್ಪವು ಹಂಪಿ ವಿರೂಪಾಕ್ಷ ದೇಗುಲದ ಎರಡನೇ ದ್ವಾರ ಮಂಟಪದ ಎಡಭಾಗದಲ್ಲಿದೆ. ಈ ಶಿಲ್ಪ ಚತುರ್ಬಾಹುಗಳನ್ನು ಹೊಂದಿದ್ದು, ಹಿಂದಿನ ಕೈಗಳಲ್ಲಿ ಬಾಣ (ಬಲ), ಧನಸ್ಸು (ಎಡ) ಮುಂದಿನ ಕೈಗಳಲ್ಲಿ ಖಡ್ಗ (ಬಲ) ಮತ್ತು ಖೇಟಕ (ಎಡ) ಗಳಿವೆ. ಶಿಲ್ಪದ ತಲೆಯ ಮೇಲೆ ಚಿಕ್ಕದಾದ ಕಿರೀಟಮುಕುಟ, ಮಣಿಸರಗಳು, ಯಜ್ಞೋಪವೀತ, ಭುಜಹಾರ, ಉದರಬಂಧ, ತೋಳ್ಬಂಧಿ, ಮುಂಗೈಕಡಗ ಮತ್ತು ಕಾಲ್ಗಡಗಗಳಿವೆ. ಬಲಗಾಲಿನ ಪಕ್ಕದಲ್ಲಿ ಅಂಜಲಿ ಮುದ್ರೆಯಲ್ಲಿ ನಿಂತಿರುವ ದಕ್ಷನ (ಟಗರಿನ ತಲೆ) ಚಿಕ್ಕ ಶಿಲ್ಪವಿದೆ.

**೯. ಶಿಲ್ಪ : ಕಾಲಭೈರವ**

ದೊರೆತ ಸ್ಥಳ : ಪಂಪಾವಿರೂಪಾಕ್ಷ ಲಿಂಗ ದೇವಾಲಯ, ಕುರಿಕುಪ್ಪೆ.

ಕಾಲ : ೧೫೨೩ ವಿಜಯನಗರ

ಶಿಲ್ಪದ ವಿವರ : ಕಾಲಭೈರವನ ಸ್ಥಾನಕ ಶಿಲ್ಪವು ಸಮಭಂಗಿಯಲ್ಲಿದೆ. ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ತ್ರಿಶೂಲ (ಬಲ), ಡಮರು (ಎಡ) ಹಾಗೆ ಮುಂದಿನ ಕೈಗಳಲ್ಲಿ ಖಡ್ಗ (ಬಲ), ಅಸುರನ ತಲೆ (ಎಡ) ಹಿಡಿದು ನಿಂತಿದ್ದಾನೆ. ಶಿಲ್ಪದ ತಲೆಯ ಮೇಲೆ ಕಿರೀಟಮುಕುಟ, ಮಣಿಸರ/ಹಾರ, ಯಜ್ಞೋಪವೀತ, ಭುಜಹಾರ, ತೋಳ್ಬಂಧಿ, ಮುಂಗೈಕಡಗ ಮತ್ತು ಕಾಲ್ಗಡಗಗಳಿವೆ. ಹಾಗೆಯೇ ಹಿಂಭಾಗದಲ್ಲಿ ಶ್ವಾನದ ಶಿಲ್ಪವಿದೆ.

**೧೦. ಶಿಲ್ಪ : ದ್ವಾರಪಾಲ**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಹಂಪಿಯ ವಿರೂಪಾಕ್ಷ ದೇವಾಲಯದ ರಂಗಮಂಟಪದ ಆವರಣವನ್ನು ಪ್ರವೇಶಿಸುವ ದ್ವಾರಮಂಟಪದ ಬಲಬದಿಯಲ್ಲಿ ಈ ದ್ವಾರಪಾಲ ಶಿಲ್ಪವಿದೆ. ಇದು ಶೈವ ದ್ವಾರಪಾಲ ಶಿಲ್ಪವಾಗಿದ್ದು ಚತುರ್ಭುಜದಾರಿಯಾಗಿ ಪಾರ್ಶ್ವಭಂಗಿಯಲ್ಲಿ ನಿಂತಿದ್ದಾನೆ. ತನ್ನ ಹಿಂದಿನ ಕೈಗಳಲ್ಲಿ ತ್ರಿಶೂಲ, ಡಮರುಗಳನ್ನು ಹಿಡಿದು ಮುಂದಿನ ಬಲಗೈ ಅಭಯಮುದ್ರೆ ತಾಳಿದ್ದು, ಎಡಗೈಯನ್ನು ಗದೆಯ ಮೇಲೆ ಊರಿ ಎಡಗಾಲನ್ನು ಅಡ್ಡಲಾಗಿ ಇಟ್ಟಿದ್ದಾನೆ. ಈ ಶಿಲ್ಪದಲ್ಲಿ ಕಿರೀಟಮುಕುಟ, ಭುಜಕೀರ್ತಿ, ಭುಜಹಾರ,

ಪದಕಹಾರ, ತೋಳ್ಬಂಧಿ, ಮುಂಗೈಕಡಗ, ಮಣಿಬಂಧ, ಸೊಂಟಪಟ್ಟಿ, ಪಾದಸರ ಮುಂತಾದ ಆಭರಣಗಳಿವೆ.

**೧೧. ಶಿಲ್ಪ : ಧ್ಯಾನನಿರತ ಯತಿ**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಪಂಪಾಸರೋವರ.

ಕಾಲ : ವಿಜಯನಗರ

ಶಿಲ್ಪದ ವಿವರ : ಶಿಲ್ಪದಲ್ಲಿ ಯತಿಯು ಪದ್ಮಾಸನದಲ್ಲಿ ಆಸೀನನಾಗಿದ್ದು ಕೈಯಲ್ಲಿ ಸ್ಥಾವರಲಿಂಗವಿಡಿದು ಪೂಜಾನಿರತನಾಗಿದ್ದಾನೆ. ಇದರಿಂದ ಇದೊಂದು ಕಾಳಾಮುಖ ಯೋಗಿಯ ಶಿಲ್ಪವೆಂದು ಹೇಳಬಹುದು.

**೧೨. ಶಿಲ್ಪ : ಗಜಾನನ**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಬೆಣ್ಣಿಹಳ್ಳಿ.

ಕಾಲ : ಹೊಯ್ಸಳ

ಶಿಲ್ಪದ ವಿವರ : ಗಜಾನನ ಶಿಲ್ಪವು ಸುಖಾಸನದಲ್ಲಿ ಪೀಠದ ಮೇಲೆ ಆಸೀನನಾಗಿದ್ದು ಚತುರ್ಭುಜಗಳನ್ನು ಹೊಂದಿದ್ದಾನೆ. ಹಿಂದಿನ ಕೈಗಳಲ್ಲಿ ಅಂಕುಶ (ಬಲ), ಪಾಶ (ಎಡ), ಮುಂದಿನ ಕೈಗಳಲ್ಲಿ ಭಗ್ನದಂತ (ಬಲ), ಬೀಜಪೂರ (ಎಡ)ಗಳಿವೆ. ಸೊಂಡಿಲು ಎಡಭಾಗಕ್ಕೆ ವಾಲಿದ್ದು ಬೀಜಪೂರಕ್ಕೆ ಸ್ಪರ್ಶಿಸಿದೆ. ತಲೆಯ ಮೇಲೆ ಆಕರ್ಷಕವಾದ ಕಿರೀಟ, ಭುಜಹಾರ, ಮಣಿಸರ, ನಾಗೋದರಬಂಧ ಹಾಗೆಯೇ ಮುಂಗೈಕಡಗ ಮತ್ತು ಪಾದಸರಗಳಿವೆ. ಸರಳವಾದ ಪ್ರಭಾವಳಿ ಹಿಂಭಾಗದಲ್ಲಿದೆ.

**೧೩. ಶಿಲ್ಪ : ಮಹಾಗಣಪತಿ**

ದೊರೆತ ಸ್ಥಳ : ಶ್ರೀ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯ, ಹಿರೇಜಂತಕಲ್.

ಕಾಲ : ವಿಜಯನಗರ

ಶಿಲ್ಪದ ವಿವರ : ಮಹಾಗಣಪತಿ ಶಿಲ್ಪವು ಸುಖಾಸನದಲ್ಲಿ ಪೀಠದ ಮೇಲೆ ಆಸೀನನಾಗಿದ್ದು ಚತುರ್ಭುಜಗಳನ್ನು ಹೊಂದಿದ್ದಾನೆ. ಹಿಂದಿನ ಕೈಗಳಲ್ಲಿ ಅಂಕುಶ (ಬಲ), ಪಾಶ (ಎಡ), ಮುಂದಿನ ಕೈಗಳಲ್ಲಿ ಭಗ್ನದಂತ (ಬಲ), ಬೀಜಪೂರ (ಎಡ)ಗಳಿವೆ. ಸೊಂಡಿಲು ಎಡಭಾಗಕ್ಕೆ ವಾಲಿದ್ದು ಬೀಜಪೂರಕ್ಕೆ ಸ್ಪರ್ಶಿಸಿದೆ. ತಲೆಯ ಮೇಲೆ ಆಕರ್ಷಕವಾದ ಕಿರೀಟ, ಭುಜಹಾರ, ಕೊರಳಲ್ಲಿ ಪದಕಹಾರ, ನಾಗೋದರಬಂಧ, ಯಜ್ಞೋಪವೀತ ಹಾಗೆಯೇ ಮುಂಗೈಕಡಗ ಮತ್ತು ಪಾದಸರಗಳಿವೆ. ತಲೆಯಮೇಲೆ ಕರಂಡಮುಕುಟವಿದೆ.

**೧೪. ಶಿಲ್ಪ : ಗಣಪತಿ**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಗಣಪತಿಯ ಈ ಶಿಲ್ಪವು ಹಂಪಿ ವಿರೂಪಾಕ್ಷ ದೇವಾಲಯದ ಎರಡನೇ ಪ್ರವೇಶದ್ವಾರ ಮಂಟಪದ ಬಲಭಾಗದಲ್ಲಿದೆ. ಈ ಶಿಲ್ಪವು ಸುಖಾಸನದಲ್ಲಿ ಪೀಠದ ಮೇಲೆ ಆಸೀನನಾಗಿದ್ದು ಚತುರ್ಭುಜಗಳನ್ನು ಹೊಂದಿದ್ದಾನೆ. ಹಿಂದಿನ ಕೈಗಳಲ್ಲಿ ಅಂಕುಶ (ಬಲ), ಪಾಶ (ಎಡ), ಮುಂದಿನ ಕೈಗಳಲ್ಲಿ ಭಗ್ನದಂತ (ಬಲ), ಬೀಜಪೂರ (ಎಡ)ಗಳಿವೆ. ಸೊಂಡಿಲು ಎಡಭಾಗಕ್ಕೆ ವಾಲಿದ್ದು

ಬೀಜಪೂರಕ್ಕೆ ಸ್ಪರ್ಶಿಸಿದೆ. ತಲೆಯ ಮೇಲೆ ಆಕರ್ಷಕವಾದ ಕಿರೀಟ, ಭುಜಹಾರ, ಮಣಿಸರ, ನಾಗೋದರಬಂಧ, ಯಜ್ಞೋಪವೀತ ಹಾಗೆಯೇ ಮುಂಗೈಕಡಗ ಮತ್ತು ಪಾದಸರಗಳನ್ನು ಹೊಂದಿದೆ.

**೧೫. ಶಿಲ್ಪ : ಕಾರ್ತಿಕೇಯ**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಕಾರ್ತಿಕೇಯನ ಈ ಆಕರ್ಷಕ ಶಿಲ್ಪವು ಹಂಪಿ ವಿರೂಪಾಕ್ಷ ದೇವಾಲಯದ ಎರಡನೇ ಪ್ರವೇಶದ್ವಾರ ಮಂಟಪದ ಎಡಭಾಗದಲ್ಲಿದೆ. ಪೀಠದ ಮೇಲಿರುವ ಈ ಶಿಲ್ಪದಲ್ಲಿ ಸವ್ಯಲಲಿತಾಸನದಲ್ಲಿ ನವಿಲಿನ ಮೇಲೆ ಕಾರ್ತಿಕೇಯ ಆಸೀನನಾಗಿದ್ದಾನೆ. ಆರು ಜೊತೆ ಕೈಗಳನ್ನು ಹೊಂದಿದ್ದು ವಿವಿಧ ಆಯುಧಗಳನ್ನು ಹಿಡಿದಿದ್ದಾನೆ. ಸುತ್ತಲೂ ಪ್ರಭಾವಳಿ ಆಕರ್ಷಕವಾಗಿದೆ.

**೧೬. ಶಿಲ್ಪ : ಕುಮಾರಸ್ವಾಮಿ**

ದೊರೆತ ಸ್ಥಳ : ಶ್ರೀ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯ, ಹಿರೇಜಂತಕಲ್.

ಕಾಲ : ವಿಜಯನಗರ

ಶಿಲ್ಪದ ವಿವರ : ಕುಮಾರಸ್ವಾಮಿಯು ಸವ್ಯಲಲಿತಾಸನದಲ್ಲಿ ನವಿಲಿನ ಮೇಲೆ ಆಸೀನನಾಗಿದ್ದಾನೆ. ಷಣ್ಮುಖ/ಕಾರ್ತಿಕೇಯನಿಗೆ ಆರು ಮುಖಗಳಿರುವುದು ಸಂಪ್ರದಾಯವಾದರೂ ಇಲ್ಲಿ ಮುಂಬದಿಯ ಮೂರು ಮುಖಗಳನ್ನು ಮಾತ್ರ ಗೋಚರಿಸುವಂತೆ ಕೆತ್ತಲಾಗಿದೆ. ಶಿಲ್ಪಕ್ಕೆ ಚತುರ್ಬಾಹುಗಳಿದ್ದು ಹಿಂದಿನ ಕೈಗಳಲ್ಲಿ ತ್ರಿಶೂಲ, ಭರ್ಚಿ, ಕೈಭರ್ಚಿಗಳಿವೆ. ಮುಂದಿನ ಕೈಗಳು ಅಭಯ ಮತ್ತು ವರದ ಮುದ್ರೆಗಳಲ್ಲಿವೆ. ಮೂರೂ ತಲೆಗಳ ಮೇಲೆ ಕಿರೀಟಮುಕುಟ, ಕೊರಳಲ್ಲಿ ಪದಕಹಾರ, ಮಣಿಸರ, ಕಟಿಬಂಧ, ಭುಜಹಾರ ಯಜ್ಞೋಪವೀತ, ಕಾಲ್ಗಡಗಗಳಿವೆ. ವಾಹನ ನವಿಲು ಸರ್ಪವನ್ನು ಬಾಯಿಯಲ್ಲಿ ಹಿಡಿದಿದೆ. ಹಿಂದೆ ಪ್ರಭಾವಳಿ ಇದ್ದು ಅದರಲ್ಲಿ ಕೀರ್ತಿಮುಖದ ಅಲಂಕರಣೆ ಇದೆ.

**೧೭. ಶಿಲ್ಪ : ಸೂರ್ಯ**

ದೊರೆತ ಸ್ಥಳ : ಶ್ರೀ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯ, ಹಿರೇಜಂತಕಲ್.

ಕಾಲ : ವಿಜಯನಗರ

ಶಿಲ್ಪದ ವಿವರ : ಸೂರ್ಯನ ಈ ಸ್ಥಾನಕ ಶಿಲ್ಪವು ಸಮಭಂಗಿಯಲ್ಲಿ ನಿಂತಿದ್ದು ಕೈಗಳೆರಡರಲ್ಲಿ ಕಮಲಗಳನ್ನು ಹಿಡಿದಿದ್ದಾನೆ. ಕಿವಿಯಲ್ಲಿ ಚಕ್ರಕುಂಡಲಗಳು, ಕೊರಳಲ್ಲಿ ಮಣಿಸರ, ಯಜ್ಞೋಪವೀತ, ಭುಜಹಾರ, ತೋಳ್ಬಂದಿ, ಮುಂಗೈಕಡಗ, ಉದರಬಂಧ ಮುಂತಾದ ಆಭರಣಗಳಿವೆ. ಶಿಲ್ಪದ ಪಾದದ ಇಕ್ಕೆಲಗಳಲ್ಲಿ ಉಷಾ ಮತ್ತು ಪ್ರತ್ಯುಷಾ ಶಿಲ್ಪಗಳಿವೆ.

**೧೮. ಶಿಲ್ಪ : ಪಾರ್ವತಿ**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಪಾರ್ವತಿ ಸ್ಥಾನಕ ಶಿಲ್ಪವು ತ್ರಿಭಂಗದಲ್ಲಿದ್ದು, ದ್ವಿಭುಜಗಳನ್ನು ಹೊಂದಿದ್ದಾಳೆ. ಬಲಗೈಯಲ್ಲಿ ನೀಲೋತ್ಪಲವಿದೆ. ಎಡಗೈಯನ್ನು ವಕ್ರವಾಗಿ ಕೆಳಕ್ಕೆ ಚಾಚಿದ್ದು (ಗಜದಂಡ ಸ್ಥಿತಿ)

ಕೈಲೋಲಂಬ ಮುದ್ರೆ (ಕೆಳಮುಖಿ)ಯಲ್ಲಿದೆ. ಕಿರೀಟ ಮುಕುಟ, ಪತ್ರಕುಂಡಲ, ಭುಜಕೀರ್ತಿ, ಭುಜಹಾರ, ತೋಳ್ಬಂದಿ, ಕಂಕಣ, ಸೊಂಟಪಟ್ಟಿ, ವೈಜಯಂತಿಹಾರ, ಪಾದಸರ ಮುಂತಾದ ಆಭರಣಗಳಿವೆ. ಈ ಶಿಲ್ಪವು ವಿರೂಪಾಕ್ಷ ದೇಗುಲ ಆವರಣದ ಪಂಪಾಂಬಿಕೆ ಗುಡಿಗೆ ಹೋಗುವ ಮಾರ್ಗದಲ್ಲಿ ಎಡಭಾಗದಲ್ಲಿದೆ.

**೧೯. ಶಿಲ್ಪ : ಪಾರ್ವತಿ**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಪಾರ್ವತಿ ದೇವಿಯ ಈ ಸ್ಥಾನಕ ಶಿಲ್ಪವು ಸಮಭಂಗಿಯಲ್ಲಿದ್ದು, ದ್ವಿಭುಜಗಳನ್ನು ಹೊಂದಿದ್ದಾಳೆ. ಹಿಂದಿನ ಕೈಗಳಲ್ಲಿ ಕಮಲಗಳನ್ನು ಕೆಳಗಿನ ಬಲಗೈ ಅಭಯ ಮುದ್ರೆಯಲ್ಲಿದ್ದು ಎಡಗೈ ವರದಮುದ್ರೆಯಲ್ಲಿದೆ. ಕಿರೀಟಮುಕುಟ, ಪತ್ರಕುಂಡಲ, ಭುಜಕೀರ್ತಿ, ಭುಜಹಾರ, ತೋಳ್ಬಂದಿ, ಸೊಂಟಪಟ್ಟಿ, ವೈಜಯಂತಿಹಾರ, ಪಾದಸರ ಮುಂತಾದ ಆಭರಣಗಳಿವೆ. ಈ ಶಿಲ್ಪವು ಹಂಪಿ ವಿರೂಪಾಕ್ಷ ದೇವಾಲಯದ ಗರ್ಭಗುಡಿಯ ಹಿಂಬದಿಯಲ್ಲಿದೆ.

**೨೦. ಶಿಲ್ಪ : ದುರ್ಗಿ (ದುರ್ಗಾ)**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಈ ಶಿಲ್ಪದಲ್ಲಿ ದೇವಿಯು ಕೋಪೋದ್ರಿಕ್ತಳಾಗಿ ಅಸುರನನ್ನು ಸಂಹರಿಸುತ್ತಿದ್ದಾಳೆ. ಅಷ್ಟಭುಜಗಳನ್ನು ಹೊಂದಿದ್ದು ವಿವಿಧ ಆಯುಧ ಪರಿಕರಗಳನ್ನು ಹಿಡಿದು ನಿಂತಿದ್ದಾಳೆ. ಬಲಗೈ ತ್ರಿಶೂಲದಿಂದ ಅಸುರನನ್ನು ಚುಚ್ಚಿದ್ದಾಳೆ. ದೇವಿಯು ಕಿರೀಟಮುಕುಟ, ಪತ್ರಕುಂಡಲ, ಕಂಠಹಾರ, ಭುಜಹಾರ, ತೋಳ್ಬಂದಿ ಮತ್ತು ಕಾಲ್ಗಡಗಗಳಿಂದ ಅಲಂಕೃತಳಾಗಿದ್ದಾಳೆ. ದೇವಿಯ ಶಿಲ್ಪದ ಸುತ್ತಲೂ ಆಕರ್ಷಕವಾದ ಪ್ರಭಾವಳಿ ಇದ್ದು ಮೇಲೆ ಕೀರ್ತಿಮುಖದ ಅಲಂಕರಣೆ ಇದೆ. ಈ ಶಿಲ್ಪ ವಿರೂಪಾಕ್ಷ ದೇವಾಲಯದ ಗರ್ಭಗುಡಿಯ ಹಿಂಬದಿಯಲ್ಲಿದೆ.

**೨೧. ಶಿಲ್ಪ : ಮಹಿಷಾಸುರ ಮರ್ಧಿನಿ**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಬೆಣ್ಣಿಹಳ್ಳಿ.

ಕಾಲ : ಹೊಯ್ಸಳ

ಶಿಲ್ಪದ ವಿವರ : ಮನುಷ್ಯ ರೂಪದಲ್ಲಿರುವ ಅಸುರನನ್ನು ಸಂಹರಿಸುತ್ತಿರುವ ಚತುರ್ಭುಜದೇವಿಯ ಶಿಲ್ಪ ಇದಾಗಿದ್ದು ಹಿಂದಿನ ಕೈಗಳಲ್ಲಿ ಚಕ್ರ (ಎಡ), ಶಂಖ (ಬಲ)ಗಳು ಇವೆ. ಬಲಗಾಲು ಮಹಿಷನ ಮೇಲೆ ಇಟ್ಟಿದೆ. ಬಲಗೈಯಿಂದ ತ್ರಿಶೂಲದಿಂದ ಮಹಿಷನಿಗೆ ಚುಚ್ಚಿದ್ದಾಳೆ. ಮತ್ತೊಂದು ಎಡಗೈಯಲ್ಲಿ ಧನಸ್ಸನ್ನು ಹಿಡಿದಿದ್ದಾಳೆ. ದೇವಿಯು ಕಿರೀಟಮುಕುಟು, ಪತ್ರಕುಂಡಲ, ಕಂಠಿಹಾರ, ತೋಳ್ಬಂದಿ, ಕಂಕಣ, ಕಾಲ್ಗಡಗ, ಪಾದಸರಗಳಿಂದ ಅಲಂಕೃತಳಾಗಿದ್ದಾಳೆ.

**೨೨. ಶಿಲ್ಪ : ಮಹಿಷಾಸುರ ಮರ್ಧಿನಿ**

ದೊರೆತ ಸ್ಥಳ : ಶ್ರೀ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯ, ಹಿರೇಜಂತಕಲ್.

ಕಾಲ : ವಿಜಯನಗರ

ಶಿಲ್ಪದ ವಿವರ : ಮನುಷ್ಯ ರೂಪದಲ್ಲಿರುವ ಅಸುರನನ್ನು ಸಂಹರಿಸುತ್ತಿರುವ ಚತುರ್ಭುಜದೇವಿಯ ಶಿಲ್ಪ ಇದಾಗಿದ್ದು ಹಿಂದಿನ ಕೈಗಳಲ್ಲಿ ಚಕ್ರ (ಎಡ), ಶಂಖ (ಬಲ)ಗಳು ಇವೆ. ಬಲಗಾಲು ಮಹಿಷನ ಮೇಲೆ ಇಟ್ಟಿದೆ. ಬಲಗೈಯಿಂದ ತ್ರಿಶೂಲದಿಂದ ಮಹಿಷನಿಗೆ ಚುಚ್ಚಿದ್ದಾಳೆ. ಮತ್ತೊಂದು ಎಡಗೈಯಲ್ಲಿ ಧನಸ್ಸನ್ನು ಹಿಡಿದಿದ್ದಾಳೆ. ದೇವಿಯು ಕಿರೀಟಮುಕುಟ, ಪತ್ರಕುಂಡಲ, ಕಂಟಹಾರ, ತೋಳ್ಬಂದಿ, ಕಂಕಣ, ಕಾಲ್ಗಡಗ, ಪಾದಸರಗಳಿಂದ ಅಲಂಕೃತಳಾಗಿದ್ದಾಳೆ.

**೨೩. ಶಿಲ್ಪ : ಮಹಿಷಾಸುರ ಮರ್ಧಿನಿ**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಪಂಪಾಸರೋವರ.

ಕಾಲ : ವಿಜಯನಗರ

ಶಿಲ್ಪದ ವಿವರ : ಮಹಿಷ ರೂಪದಲ್ಲಿರುವ ಅಸುರನನ್ನು ಸಂಹರಿಸುತ್ತಿರುವ ಚತುರ್ಭುಜದೇವಿಯ ಶಿಲ್ಪ ಇದಾಗಿದ್ದು ಹಿಂದಿನ ಕೈಗಳು ಶಿಥಿಲವಾಗಿವೆ. ದೇವಿಯು ಎಡಗಾಲನ್ನು ಮೇಲಕ್ಕೆತ್ತಿ ಅಸುರನನ್ನು ಸಂಹರಿಸುತ್ತಿದ್ದು ಬಲಗೈಯಿಂದ ಖಡ್ಗದಿಂದ ಚುಚ್ಚಿದ್ದಾಳೆ. ಅಂತೆಯೇ ದೇವಿಯು ವಿವಿಧ ಆಭರಣಗಳನ್ನು ಧರಿಸಿ ಮುಖ್ಯವಾಗಿ ಕುಚಬಂಧ, ಕಿರೀಟಮುಕುಟ, ಪತ್ರಕುಂಡಲ, ಕಂಟಹಾರ, ತೋಳ್ಬಂದಿ, ಕಂಕಣ, ಸೊಂಟಪಟ್ಟಿ, ಕಾಲ್ಗಡಗ ಮತ್ತು ಪಾದ ಸರಗಳಿಂದ ಅಲಂಕೃತಳಾಗಿದ್ದಾಳೆ.

**೨೪. ಶಿಲ್ಪ : ಶಾರದಾ ದೇವಿ / ಸರಸ್ವತಿ**

ದೊರೆತ ಸ್ಥಳ : ಶ್ರೀ ವಿರೂಪಾಕ್ಷ ದೇವಾಲಯ ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಶಾರದಾ ದೇವಿಯು ಪೀಠದ ಮೇಲೆ ಆಸೀನಳಾಗಿದ್ದಾಳೆ. ಕೈಯಲ್ಲಿ ವೀಣೆಯನ್ನು ಹಿಡಿದು ಮಂದಹಾಸದಿಂದ ನುಡಿಸುತ್ತಿದ್ದಾಳೆ. ಹಾಗೆಯೇ ವಿವಿಧ ಆಭರಣಗಳನ್ನು ಧರಿಸಿದ್ದು ನೋಡಲು ಈ ಶಿಲ್ಪ ಆಕರ್ಷಕವಾಗಿದೆ. ಈ ಶಿಲ್ಪದ ಸುತ್ತಲೂ ಪ್ರಭಾವಳಿ ಇದ್ದು ಲತಾ ಸುರುಳಿಯ ಸುಂದರ ಕೆತ್ತನೆಯನ್ನು ಹೊಂದಿದೆ. ಪ್ರಭಾವಳಿಯ ಮೇಲ್ಭಾಗದಲ್ಲಿ ಕೀರ್ತಿಮುಖದ ಅಲಂಕರಣೆ ಇದೆ. ಈ ಶಿಲ್ಪವು ವಿರೂಪಾಕ್ಷ ದೇವಾಲಯದ ಗರ್ಭಗುಡಿಯ ಹಿಂಬದಿಯಲ್ಲಿದೆ.

**೨೫. ಶಿಲ್ಪ : ಸಪ್ತಮಾತೃಕೆಯರು**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಬೆಣ್ಣಿಹಳ್ಳಿ.

ಕಾಲ : ಹೊಯ್ಸಳ

ಶಿಲ್ಪದ ವಿವರ : ಈ ಸಪ್ತಮಾತೃಕೆಯ ಶಿಲ್ಪ ಪಟ್ಟಿಕೆಯ ಶಿಲ್ಪಗಳು ಅವುಗಳ ಮೇಲಿನ ಆಭರಣ, ವಾಹನಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಆದರೂ ಈ ಶಿಲ್ಪಗಳನ್ನು ಕ್ರಮವಾಗಿ ಬ್ರಾಹ್ಮೀ, ವೈಷ್ಣವಿ, ಮಹೇಶ್ವರಿ, ಚಾಮುಂಡಿ, ಕೌಮಾರಿ, ವರಾಹಿ, ಇಂದ್ರಾಣಿ ಶಿಲ್ಪಗಳು ಮಧ್ಯದಲ್ಲಿದ್ದು ಬಲಭಾಗದಲ್ಲಿ ವೀರಭದ್ರ ಮತ್ತು ಎಡಭಾಗದಲ್ಲಿ ಗಣೇಶನ ಮೂರ್ತಿಶಿಲ್ಪವಿದೆ.

**೨೬. ಶಿಲ್ಪ : ಸೂರ್ಯನಾರಾಯಣ**

ದೊರೆತ ಸ್ಥಳ : ವಿರೂಪಾಕ್ಷ ದೇವಾಲಯದ ಆವರಣ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಸೂರ್ಯನ ಈ ಸ್ಥಾನಕ ಶಿಲ್ಪವು ಸಮಭಂಗಿಯಲ್ಲಿ ನಿಂತಿದ್ದು ಕೈಗಳೆರಡರಲ್ಲಿ ಕಮಲಗಳನ್ನು ಹಿಡಿದಿದ್ದಾನೆ. ಕಿವಿಯಲ್ಲಿ ಚಕ್ರಕುಂಡಲಗಳು, ಕೊರಳಲ್ಲಿ ಮಣಿಸರ, ಯಜ್ಞೋಪವೀತ, ಭುಜಹಾರ, ತೋಳ್ಬಂದಿ, ಮುಂಗೈಕಡಗ, ಉದರಬಂಧ, ಸೊಂಟಪಟ್ಟಿ ಈ ಆಭರಣಗಳಿವೆ. ಈ ಶಿಲ್ಪದ ಪಾದದ ಇಕ್ಕೆಲಗಳಲ್ಲಿ ಉಷಾ ಮತ್ತು ಪ್ರತ್ಯುಷಾ ಶಿಲ್ಪಗಳಿವೆ. ಈ ಸೂರ್ಯನಾರಾಯಣ ಶಿಲ್ಪದ ಪಕ್ಕದಲ್ಲಿಯೇ ಗಣಪತಿಯ ವಿಗ್ರಹವಿದೆ.

**೨೭. ಶಿಲ್ಪ : ಮುಕ್ತಿ ನರಸಿಂಹ**

ದೊರೆತ ಸ್ಥಳ : ವಿರೂಪಾಕ್ಷ ದೇವಾಲಯದ ಆವರಣ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಮುಕ್ತಿ ನರಸಿಂಹಸ್ವಾಮಿ ಶಿಲ್ಪವು ಸುಖಾಸನದಲ್ಲಿದ್ದು ಎಡಗೈಯನ್ನು ಎಡತೊಡೆಯ ಮೇಲೆ ಊರಿರುವ ಈ ಶಿಲ್ಪದ ಶಿರಭಾಗ ನರಸಿಂಹನ ಉಗ್ರರೂಪ ಹೊಂದಿದೆ. ಈ ಶಿಲ್ಪವು ಚಿಕ್ಕದಾದ ಕಿರೀಟ ಮುಕುಟ, ಮಣಿಹಾರ, ಭುಜಹಾರ, ತೋಳ್ಬಂದಿ, ಕೈಕಡಗ ಮತ್ತು ಕಾಲ್ಗಡಗಗಳನ್ನು ಹೊಂದಿದೆ.

**೨೮. ಶಿಲ್ಪ : ಗರುಡ**

ದೊರೆತ ಸ್ಥಳ : ವಿರೂಪಾಕ್ಷ ಲಿಂಗ ದೇವಾಲಯ, ಕುರಿಕುಪ್ಪೆ.

ಕಾಲ : ವಿಜಯನಗರ

ಶಿಲ್ಪದ ವಿವರ : ವಿಷ್ಣುವಿನ ವಾಹನವಾದ ಈ ಗರುಡ ಶಿಲ್ಪವು ಬಲಗಾಲಿನ ಪಾದವೂರಿ ಎಡಗಾಲಿನ ಮಂಡಿಯೂರಿ ಹಾರುವ ಭಂಗಿಯಲ್ಲಿದೆ. ಕೈಗಳು ಅಂಜಲಿ ಮುದ್ರೆಯಲ್ಲಿದ್ದು, ತಲೆಯ ಮೇಲೆ ಕಿರೀಟವಿದೆ. ಎರಡೂ ಪಕ್ಕೆಗಳಲ್ಲಿ ರೆಕ್ಕೆಗಳಿದ್ದು ಸ್ಥಳೀಯ ಶೈಲಿಯಲ್ಲಿ ಕೆತ್ತಲಾಗಿದೆ.

**೨೯. ಶಿಲ್ಪ : ಆಂಜನೇಯ**

ದೊರೆತ ಸ್ಥಳ : ವಿರೂಪಾಕ್ಷ ದೇವಾಲಯದ ಆವರಣ, ಹಂಪಿ.

ಕಾಲ : ವಿಜಯನಗರ

ಶಿಲ್ಪದ ವಿವರ : ಆಂಜನೇಯ ಶಿಲ್ಪವು ತ್ರಿಭಂಗಿಯಲ್ಲಿದ್ದು ಮುಖವು ಎಡಭಾಗಕ್ಕೆ ಹೊರಳಿದೆ. ಬಲಗೈ ಚಪೇಟಮುದ್ರೆಯಲ್ಲಿದೆ (ಕೈ ಹೊಡೆಯುವ ಸ್ಥಿತಿ). ಎಡಗೈಯಲ್ಲಿ ಸೌಗಂಧಿಕಾ ಪುಷ್ಪವಿದೆ. ತಲೆಯಲ್ಲಿ ಜುಟ್ಟು ಇದ್ದು, ಕಿವಿಯಲ್ಲಿ ಕುಂಡಲಗಳಿವೆ. ಕೊರಳಲ್ಲಿ ಸರ ಮತ್ತು ಕಂಟಿಹಾರಗಳಿವೆ. ಭುಜಹಾರಗಳು, ಕಟಿಬಂಧವಿದ್ದು, ಸೊಂಟದಲ್ಲಿ ಚೂರಿಯನ್ನು ಸಿಕ್ಕಿಸಲಾಗಿದೆ. ಶಿಲ್ಪದಲ್ಲಿ ವೈಜಯಂತಿ ಹಾರವಿದೆ (ಮೊಣಕಾಲ ವರೆಗೆ ಇಳಿಬಿದ್ದಿದೆ). ಹಾಗೆಯೇ ತೋಳ್ಬಂದಿ, ಕೈಗಡಗಗಳಿವೆ. ಬಾಲವು ಬಹಿಯಿಂದ ಮೇಲೇರಿ ಸುತ್ತು ಹಾಕಿದೆ. ಕಾಲ ಕೆಳಗೆ ಅಕ್ಷಯಕುಮಾರನ ಶಿಲ್ಪವಿದೆ.

**೩೦. ಶಿಲ್ಪ : ಧ್ಯಾನನಿರತ ಯತಿ / ಭಕ್ತ ಮತ್ತು ನಾಗಶಿಲ್ಪಗಳು :**

ದೊರೆತ ಸ್ಥಳ : ಪಂಪಾಪತಿ ದೇವಾಲಯ, ಬೆಣ್ಣಿಹಳ್ಳಿ.

ಕಾಲ : ಹೊಯ್ಸಳ

ಶಿಲ್ಪದ ವಿವರ : ಬೆಣ್ಣೆಹಳ್ಳಿ ಪಂಪಾಪತಿ ದೇವಾಲಯದ ಸಭಾಮಂಟಪದ ಎಡಭಾಗದ ಭಿತ್ತಿಯ ಗೂಡಿನಲ್ಲಿ ಈ ಶಿಲ್ಪಗಳಿವೆ. ಇಲ್ಲಿ ಮೂರು ಶಿಲ್ಪಗಳಿದ್ದು ಮಧ್ಯದಲ್ಲಿ ಒಬ್ಬ ಯತಿ ಪದ್ಮಾಸನದಲ್ಲಿ ಅಂಜಲಿ ಮುದ್ರೆಯಲ್ಲಿ ಆಸೀನನಾಗಿದ್ದಾನೆ. ಈ ಶಿಲ್ಪದ ಹಿಂಭಾಗದಲ್ಲಿ ಪ್ರಭಾವಳಿ ಇದ್ದು, ಸರಳ ಅಲಂಕರಣೆಯಿಂದ ಕೂಡಿದೆ. ಜೊತೆಗೆ ಈ ಶಿಲ್ಪದ ಬಲಭಾಗದಲ್ಲಿ ದೊಡ್ಡದಾದ ನಾಗಶಿಲ್ಪ ಮತ್ತು ಎಡಭಾಗದಲ್ಲಿ ಚಿಕ್ಕದಾದ ನಾಗಶಿಲ್ಪಗಳಿವೆ.

**೫.೩ ವರ್ಣಚಿತ್ರಕಲೆ**

**ಹಂಪಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಮಾಳಿಗೆಯ ಭಿತ್ತಿಚಿತ್ರಗಳು :**

ಕರ್ನಾಟಕದ ಭಿತ್ತಿ ಚಿತ್ರಕಲೆಗೆ ಹೊಸ ಆಯಾಮ ದೊರೆತದ್ದು ವಿಜಯನಗರದ ಕಾಲದಲ್ಲಿ. ಹಂಪಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಮಾಳಿಗೆಯಲ್ಲಿರುವ ಚಿತ್ರಗಳು ಆ ಕಾಲದ ಅತ್ಯಂತ ಪ್ರಮುಖ ಉದಾಹರಣೆಗಳಾಗಿವೆ. ವಿಜಯನಗರ ಕಾಲದಲ್ಲಿ ಅಂದರೆ ೧೬ ನೇ ಶತಮಾನದ ಮೊದಲಿನ ದಶಕಗಳಲ್ಲಿ ರಚನೆಯಾಗಿರಬಹುದಾದ ಈ ಚಿತ್ರಗಳು ಹಲವಾರು ಅಂಶಗಳಿಂದ ಅತ್ಯಂತ ಪ್ರಮುಖವೆನಿಸಿವೆ. ಈ ಚಿತ್ರಗಳ ಕಾಲದ ಹಿನ್ನೆಲೆಯನ್ನು ಗಮನಿಸಿದಾಗ ಪ್ರಾಚೀನ ಭಾರತದ ಭಿತ್ತಿಚಿತ್ರ ಪರಂಪರೆಯ ಮುಂದುವರೆದ ಶೈಲಿ ಅಥವಾ ಚಿತ್ರ ಪರಂಪರೆಯದು ಎನ್ನಬಹುದು.

**ಚಿತ್ರಗಳ ವಿವರ :**

ಹಂಪಿಯ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದಲ್ಲಿನ ಚಿತ್ರಗಳನ್ನು ಅವಲೋಕಿಸಿದಾಗ ಈ ಒಳಮಾಳಿಗೆಯು ಆಯತಾಕಾರವಾಗಿದ್ದು ಸಂಪೂರ್ಣವಾಗಿ ಚಿತ್ರರಚನಾ ಅವಕಾಶವನ್ನು ಯಾವ ರೀತಿ ವಿಭಾಗಿಸಬೇಕು, ಎಲ್ಲೆಲ್ಲಿ ಯಾವ ಚಿತ್ರಗಳು ಬರಬೇಕೆಂಬುದು ಇಷ್ಟು ವಿಶಾಲವಾದ ಚಿತ್ರಗಳ ಸಂಯೋಜನೆ, ವರ್ಣವಿನ್ಯಾಸ ಈ ಎಲ್ಲಾ ಅಂಶಗಳು ಪೂರ್ವನಿಯೋಜಿತವಾಗಿವೆ ಎಂದು ಹೇಳಬಹುದು. ಇದರಿಂದ ನಿರ್ದಿಷ್ಟ ಆಕೃತಿಯಲ್ಲಿ ಮತ್ತು ಸ್ಥಳದಲ್ಲಿ ಉದ್ದೇಶಿತ ವಿಷಯದ ನಿರೂಪಣೆ ಕಂಡುಬರುತ್ತದೆ. ಚಿತ್ರಗಳಿರುವ ಒಳಮಾಳಿಗೆಯನ್ನು ಮೂರು ಮುಖ್ಯ ಭಾಗಗಳನ್ನಾಗಿ ವಿಂಗಡಿಸಿದೆ. ಇವುಗಳಲ್ಲಿ ಒಟ್ಟು ಎಂಟು ಉಪಭಾಗಗಳಿವೆ. ಪ್ರತಿಯೊಂದು ಭಾಗದಲ್ಲಿ ಚೌಕ, ಆಯತ ಹೀಗೆ ವಿಭಿನ್ನ ಅವಕಾಶಗಳಲ್ಲಿ ಚಿತ್ರಗಳನ್ನು ರಚಿಸಲಾಗಿದೆ. ದೇವಾಲಯದ ನವರಂಗದ ಕಡೆಗೆ ಹೊಂದಿಕೊಂಡಂತೆ ಇರುವ ಅವಕಾಶದಲ್ಲಿ ಕ್ರಮವಾಗಿ ವಿಷ್ಣು ಲಕ್ಷ್ಮಿಯರು ಬಲಗಡೆ ಗರುಡ ಮತ್ತು ಎಡಗಡೆ ಹನುಮಂತರಿಂದ ಜೊತೆಗೂಡಿ ಚಿತ್ರಿಸಲ್ಪಟ್ಟಿದ್ದಾರೆ. ಮಧ್ಯದ ಚೌಕದಲ್ಲಿ ಶಿವಪಾರ್ವತಿಯರನ್ನು ನಾರದ ಮತ್ತು ತುಂಬುರರನ್ನು ಚಿತ್ರಿಸಲಾಗಿದೆ. .ಕೊನೆಯದಾಗಿ ಬ್ರಹ್ಮ ಮತ್ತು ಅವನ ಎಡತೊಡೆಯ ಮೇಲೆ ಕುಳಿತ ಸರಸ್ವತಿಯನ್ನು ಚಿತ್ರಿಸಲಾಗಿದೆ. ಇವರ ಎರಡೂ ಬದಿಯಲ್ಲಿ ಈರ್ವರು ದ್ವಾರಪಾಲಕರನ್ನು ತೋರಿಸಿದೆ.

ನಂತರದ ಸಾಲಿನಲ್ಲಿ ಪಾರ್ವತೀ/ಗಿರಿಜಾ ಕಲ್ಯಾಣದ ಚಿತ್ರವೇ ಚಿತ್ರಣದ ಪ್ರಮುಖ ಕಥಾವಸ್ತು. ಚಿತ್ರದ ಮಧ್ಯದಲ್ಲಿ ಶಿವನು ಪಾರ್ವತಿಯ ಕೈಯನ್ನು ಹಿಡಿದು ನಿಂತಿದ್ದಾನೆ. ಈ ಚಿತ್ರಪಟ್ಟಿಕೆಯ ಪ್ರಾರಂಭದಲ್ಲಿ ಶಿವಪಾರ್ವತಿಯ ಜೊತೆಗೆ ಭೈರವ, ನಾರದ, ತುಂಬುರ, ವಾಣಿ, ಬ್ರಹ್ಮ, [illegible] ಇನ್ನಿತರರು ಇದ್ದಾರೆ. ಈ ವಿವಾಹ ದೃಶ್ಯವನ್ನು ಸ್ಥಳೀಯ ದೇವತೆ ವಿರೂಪಾಕ್ಷ ಮತ್ತು ಪಂಪಾಂಬಿಕೆಯ

ವಿವಾಹಕ್ಕೆ ಹೋಲಿಸಲಾಗಿದೆ. ಈ ದೃಶ್ಯದ ಕೆಳಗಡೆ ಸ್ಥರದಲ್ಲಿ ಅಷ್ಟದಿಕ್ಪಾಲಕರನ್ನು ಚಿತ್ರಿಸಲಾಗಿದೆ. ಇವರುಗಳಲ್ಲಿ ಇಂದ್ರ, ವರುಣ, ಅಗ್ನಿ, ವಾಯು, ಈಶಾನ, ಯಮ, ನೈರುತಿ, ಕುಬೇರ ಈ ದಿಕ್ಪಾಲಕರು ತಮ್ಮ ವಾಹನಗಳಿಂದ ಇರುವುದು ಕೂಡಾ ಕಂಡುಬರುತ್ತದೆ.

ಅಷ್ಟದಿಕ್ಪಾಲಕರ ನಂತರದ ಎರಡು ಮುಖ್ಯ ಸಂಯೋಜನೆಗಳೆಂದರೆ ಮನ್ಮಥವಿಜಯ ಅಥವಾ ಶಿವನ ತಪಸ್ಸನ್ನು ಮನ್ಮಥನು ಮುರಿಯುವುದು ಮತ್ತು ತ್ರಿಪುರ ಸಂಹಾರಿ ಶಿವ. ಈ ಚಿತ್ರ ಸಂಯೋಜನೆಗಳ ಕೆಳಗಿನ ಪಟ್ಟಿಕೆಯಲ್ಲಿ ದಶಾವತಾರದ ಆಕೃತಿಗಳಿವೆ. ಈ ಆಕೃತಿಗಳ ಕೊನೆಯ ಭಾಗದಲ್ಲಿ ಕಾಮ ರಥಿಯರನ್ನು ಬೇರೆ ಬೇರೆಯಾಗಿ ಒಂದೊಂದು ಚೌಕದಲ್ಲಿ ಚಿತ್ರಿಸಲಾಗಿದೆ. ಇಲಿ ಕಾಮ ಗಜಾರೂಢನಾಗಿ ಮತ್ತು ರಥಿ ಅಶ್ವಾರೂಢಳಾಗಿದ್ದಾಳೆ. ವಿಶೇಷವೆಂದರೆ ಈ ಎರಡೂ ವಾಹನಗಳು ಮಾನವಾಕೃತಿಯಿಂದ ಚಿತ್ರಿತವಾಗಿವೆ. ಅಂದರೆ ಇಲ್ಲಿ ಮಾನವಾಕೃತಿಗಳೇ ಗಜದ ಮತ್ತು ಅಶ್ವದ ರೂಪದಲ್ಲಿ ಚಿತ್ರಿತವಾಗಿವೆ. ದಶಾವತಾರದ ಚಿತ್ರಗಳಲ್ಲಿ ವಿಷ್ಣುವಿನ ಹತ್ತು ಅವತಾರದ ಚಿತ್ರಗಳು ವೈವಿಧ್ಯಮಯವಾಗಿ ಮತ್ತು ನೈಜವಾಗಿ ಮೂಡಿಬಂದಿವೆ.

ದಶಾವತಾರ ಚಿತ್ರಗಳ ನಂತರದಲ್ಲಿ ಬರುವುದು ಆಯತಾಕೃತಿಗಳಲ್ಲಿ ಚಿತ್ರಿತವಾಗಿರುವ ರಾಮಾಯಣ ಮತ್ತು ಮಹಾಭರತಕ್ಕೆ ಸಂಬಂಧಿಸಿದ ಚಿತ್ರಗಳು. ಇವು ಒಟ್ಟು ಮೂರು ಚಿತ್ರಗಳಿದ್ದು. ಇವುಗಳಲ್ಲಿ ಎರಡು ಚಿತ್ರಗಳು ಸೀತಾ ಸ್ವಯಂವರಕ್ಕೆ ಮತ್ತು ರಾಮಸೀತೆಯರ ಕಲ್ಯಾಣಕ್ಕೆ ಸಂಬಂಧಿಸಿದ್ದು. ಮೂರನೆಯದು ದ್ರೌಪದಿಯ ಸ್ವಯಂವರದಲ್ಲಿ ಅರ್ಜುನ ಮತ್ಸ್ಯ ಯಂತ್ರವನ್ನು ಭೇದಿಸುತ್ತಿರುವ ದೃಶ್ಯವಿದೆ. ಈ ಎರಡೂ ಚಿತ್ರಗಳು ಸ್ವಯಂವರಕ್ಕೆ ಸಂಬಂಧಿಸಿದವೇ ಆಗಿದ್ದು ಇದರಲ್ಲಿ ರಾಮಸೀತೆಯರ ಕಲ್ಯಾಣದ ಒಂದೇ ಒಂದು ಚಿತ್ರಣವಿದೆ. ಈ ಚಿತ್ರದ ಪಕ್ಕದಲ್ಲಿ ಸೀತೆಯ ತಂದೆತಾಯಿಗಳು ಮತ್ತು ರಾಮನ ತಂದೆತಾಯಿಗಳು ವಧು-ವರರನ್ನು ಆಶೀರ್ವದಿಸುವ ತೆರದಲ್ಲಿ ನಿಂತಿದ್ದಾರೆ. ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸುವ ಚಿತ್ರ ಇಲ್ಲಿ ದ್ರೌಪದಿಯ ಸ್ವಯಂವರಕ್ಕೆ ಪೂರಕವಾಗಿ ಮೂಡಿಬಂದಿದೆ. ಈ ಚಿತ್ರದಲ್ಲಿ ಕೊಪ್ಪರಿಗೆಯಲ್ಲಿ ಮೇಲೆ ತಿರುಗುತ್ತಿರುವ ಮತ್ಸ್ಯದ ಪ್ರತಿಬಿಂಬವನ್ನು ನೋಡುತ್ತಾ ಮೇಲಕ್ಕೆ ಬಿಲ್ಲಿನಿಂದ ಗುರಿ ಇಟ್ಟಿರುವ ಅರ್ಜುನನ ಆಕೃತಿ ಅತ್ಯಂತ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಹಿನ್ನೆಲೆಯಲ್ಲಿ ದ್ರೌಪದಿಯ ಕೈಯಲ್ಲಿ ಹೂಮಾಲೆ ಹಿಡಿದು ನಿಂತಿದ್ದು ಅವಳ ಪಕ್ಕದಲ್ಲಿ ದ್ರುಪದನು ಕೂಡಾ ನಿಂತಿದ್ದಾನೆ. ಈ ಚಿತ್ರಗಳ ಕೆಳಗಿನ ಚಿತ್ರ ಪಟ್ಟಿಕೆಗಳಲ್ಲಿ ರಥಗಳಲ್ಲಿ ಸಾಗುತ್ತಿರುವ ಪ್ರಮುಖರು ಮತ್ತು ಸೈನಿಕರು ಇವುಗಳಲ್ಲಿ ಕುದುರೆಗಳು, ರಥಗಳು, ಆನೆಗಳು, ಸೈನಿಕರು ಮುಂದೆ ಮುಂದೆ ಹೋಗುತ್ತಿರುವ ರೀತಿಯನ್ನು ಗಮನಿಸಿದರೆ ಇವೆಲ್ಲವೂ ರಾಜಕೀಯ ಪ್ರಮುಖರ ಚಿತ್ರಗಳೆನ್ನಬಹುದು.[೧೭]

ಈ ಭಿತ್ತಿ ಚಿತ್ರಗಳಲ್ಲಿಯೇ ಅತ್ಯಂತ ಚರ್ಚಾ ವಸ್ತುವಾದ ಚಿತ್ರವೆಂದರೆ ಯತಿಗಳ ಮೆರವಣಿಗೆಯ ಚಿತ್ರ. ಈ ಚಿತ್ರ ಚಿತ್ರಗಳ ಸಮೂಹದ ಕೊನೆಯ ಸ್ತರದಲ್ಲಿದೆ. ಚಿತ್ರದ ಎರಡೂ ಕೊನೆಯ ಬದಿಯಲ್ಲಿ ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದ ಚಿತ್ರಗಳಿವೆ. ಒಂದೆಡೆ ಕೃಷ್ಣನು ಗೋಪಿಕೆಯರ ವಸ್ತ್ರಾಪಹರಣ ಮಾಡಿದ ದೃಶ್ಯವಿದ್ದರೆ, ಇನ್ನೊಂದೆಡೆ ವಿರೂಪಾಕ್ಷ ದೇವಾಲಯವನ್ನು ತೋರಿಸುವ ಲಿಂಗರೂಪಿ ವಿರೂಪಾಕಷನ ಚಿತ್ರವಿದೆ. ಈ ಎರಡೂ ಚಿತ್ರಗಳ ಮಧ್ಯದಲ್ಲಿ ವಿರೂಪಾಕ್ಷನ ಕಡೆ ಮುಖಮಾಡಿ ಯತಿಗಳನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಸಕಲ ರಾಜಮರ್ಯಾದೆಯಿಂದ ಕರೆದೊಯ್ಯುತ್ತಿರುವ ದೃಶ್ಯವಿದೆ.

ಅವರ ಸುತ್ತಲೂ ಪರಿಚಾರಕರು, ರಾಜಭಟರು ಮತ್ತು ಪ್ರಮುಖರು, ಸೈನಿಕರು ಯತಿಗಳನ್ನು ರಾಜಮರ್ಯಾದೆಯಿಂದ ಮೆರವಣಿಗೆಯಲ್ಲಿ ಕರೆದೊಯ್ಯುತ್ತಿದ್ದಾರೆ.[೧೮]

ಅಡಿಟಿಪ್ಪಣಿ :

೧. ತಿಪ್ಪೇರುದ್ರಸ್ವಾಮಿ, ೧೯೯೭; ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ತುಮಕೂರು.

೨. ಬಾಲಸುಬ್ರಮಣ್ಯ, ೨೦೦೪; Virupaksha Temple at Hampi - A Study ಪಿ.ಎಚ್.ಡಿ. ಪ್ರಬಂಧ, ಮೈಸೂರು ವಿ.ವಿ., ಮೈಸೂರು.

೩. ರಾಜಶೇಖರ ಎಸ್., "ವಿರೂಪಾಕ್ಷ ದೇವಾಲಯದ ಸಮೂಹ ಕಾಲಾನುಕ್ರಮದ ಅಧ್ಯಯನ", ವಿಜಯನಗರ ಸಂಪುಟ ೪.

೪. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು.

೫. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು.

೬. ಶರಣಬಸಪ್ಪ ಕೋಲ್ಕಾರ, ೨೦೦೦; "ಹಂಪಿ ವಿರೂಪಾಕ್ಷ ದೇವಾಲಯದ ಕನಕಗಿರಿ ಗೋಪುರದ ನಿರ್ಮಾಣ ಕರ್ತೃ ಮತ್ತು ಕಾಲ – ಒಂದು ಪರಿಶೀಲನೆ, ವಿಜಯನಗರ ಅಧ್ಯಯನ ಸಂ.೫.

೭. ಬಸಪ್ಪ .ಎಸ್ (ಸಂ), ಲಕ್ಕಣ್ಣ ದಂಡೇಶ ವಿರಚಿತ ಶಿವತತ್ವ ಚಿಂತಾಮಣಿ, ೧೯೭೦, ಮೈಸೂರು ವಿ.ವಿ., ಮೈಸೂರು.

೮. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ ೩, ಹಂಪಿ ಶಾಸನಗಳು.

೯. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ, ಕೊಪ್ಪಳ ಜಿಲ್ಲೆ, ಹಿರೇಜಂತಕಲ್.

೧೦. ಶರಣಬಸಪ್ಪ ಕೋಲ್ಕಾರ, ೨೦೦೫; "ಗಂಗಾವತಿ ನೆಲೆ-ಹಿನ್ನೆಲೆ", ಪ್ರಜಾಪ್ರಪಂಚ ಕನ್ನಡ ದಿನಪತ್ರಿಕೆ, ಗಂಗಾವತಿ.

೧೧. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ, ಬಳ್ಳಾರಿ ಜಿಲ್ಲೆ.

೧೨. ಶರಣಬಸಪ್ಪ ಕೋಲ್ಕಾರ, ೧೯೯೪; ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪ, ಎಂ.ಫಿಲ್. ಅಪ್ರಕಟಿತ ಪ್ರಬಂಧ, ಕರ್ನಾಟಕ ವಿ.ವಿ., ಧಾರವಾಡ.

೧೩. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ, ಬಳ್ಳಾರಿ ಜಿಲ್ಲೆ.

೧೪. ದೇವರಕೊಂಡಾರೆಡ್ಡಿ (ಸಂ), ಕನ್ನಡವಿಶ್ವವಿದ್ಯಾಲಯ ಶಾಸನ ಸಂಪುಟ, ಬಳ್ಳಾರಿ ಜಿಲ್ಲೆ.

೧೫. ಸೌತ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್; ಸಂ.೧೮, ನಂ. ೧೮೮.

೧೬. ತಿಪ್ಪೇರುದ್ರಸ್ವಾಮಿ, ೧೯೯೭; ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಅಪರ್ಣಾ ಕೂ.ಸ., ೧೯೯೩; ಕರ್ನಾಟಕ ದೇವಾಲಯ ಪರಿಚಯ, ಕನ್ನಡವಿಶ್ವವಿದ್ಯಾಲಯ, ಹಂಪಿ.

೧೭. ಕುಲಕರ್ಣಿ ಆರ್.ಎಚ್., "ಹಂಪಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಮಾಳಿಗೆಯ ಭಿತ್ತಿಚಿತ್ರಗಳು", ವಿ.ನ. ಅಧ್ಯಯನ, ಸಂ.೮.

೧೮. Rajashekhar .S., 1983; "Ceiling Paintings", Master Pieces of Vijayanagar Art, Poona.

## ಅಧ್ಯಾಯ ೬

### ೬.೧ ನಂಬಿಕೆ – ಸಂಪ್ರದಾಯ :

ಮನುಷ್ಯನು ತನಗಿಂತಲೂ ಮಿಗಿಲಾದ ಶಕ್ತಿಗಳನ್ನು ಅಲೌಕಿಕವಾದ ಹಿನ್ನೆಲೆಯಲ್ಲಿ ಗಮನಿಸುತ್ತಾ ಬಂದಿದ್ದಾನೆ. ಅಂತಹ ಶಕ್ತಿಗಳ ಆರಾಧನೆ ಅವನ ವ್ಯಯಕ್ತಿಕ ಬದುಕಿನ ರಕ್ಷಣೆ ಮತ್ತು ಜೀವನದ ಬೇಕು-ಬೇಡಿಕೆಗಳ ಪೂರೈಕೆಯ ಅಭಿಲಾಷೆಯನ್ನು ಹೊಂದಿರುತ್ತವೆ. ಹಾಗಾಗಿ ವ್ಯಕ್ತಿಯ ಬದುಕಿನಲ್ಲಿ ದೈವಕ್ಕೆ ವಿಶಿಷ್ಟ ಸ್ಥಾನ ದೊರೆಯುತ್ತಾ ಬಂದಿದೆ. ಕಾಲಕ್ರಮೇಣ ಮಾನವ ಜೀವನ ಸಂಕೀರ್ಣಗೊಳ್ಳುತ್ತಾ ನಡೆದಂತೆ ಅನೇಕ ರೀತಿ ನೀತಿಗಳು ರೂಢಿಗೊಳ್ಳುತ್ತಾ ಬದುಕಿನ ಸಂಸ್ಕೃತಿ ವಿಸ್ತೃತಗೊಳ್ಳುತ್ತಾ ನಡೆಯಿತು. ಅವನ ಹುಟ್ಟಿನಿಂದ ಸಾಯುವವರೆಗೆ ಅನೇಕ ಸಂಸ್ಕಾರಗಳು ರೂಢಿಗೊಂಡವು ವಿಶೇಷವಾಗಿ ಹಿಂದೂ ಧರ್ಮದ ಪ್ರಕಾರ ಇಂತಹ ೧೬ ಸಂಸ್ಕಾರಗಳಿದ್ದು ಇವುಗಳಿಗೆ ಷೋಡಶ ಸಂಸ್ಕಾರಗಳೆಂದು ಕರೆಯುತ್ತಾರೆ. ಅವುಗಳೆಂದರೆ ಗರ್ಭದಾನ, ಪುಂಸವನ, ಸೀಮಂತೋನ್ನಯನ, ಜಾತಕರ್ಮ, ಉಪನಯನ, ಮಹಾನಾಮ್ನಿ ವ್ರತ, ಮಹಾವ್ರತ, ಉಪನಿಷದ್‌ವ್ರತ, ಗೋದಾನ ವ್ರತ, ಸಮಾವರ್ತನ, ವಿವಾಹ ಇವು ವ್ಯಕ್ತಿ ಜೀವಂತವಿರುವಾಗ ನಡೆಸುವ ಸಂಸ್ಕಾರಗಳಾಗಿದ್ದು, ಅಂತ್ಯಷ್ಠಿ (ಅಂತ್ಯಸಂಸ್ಕಾರ) ವ್ಯಕ್ತಿ ಮರಣದ ಬಳಿಕ ನಡೆಸುವ ಸಂಸ್ಕಾರವಾಗಿದೆ.

ಈ ಸಂಸ್ಕಾರವು ಮನುಷ್ಯನ ಜೀವನದ ವಿವಿಧ ಹಂತಗಳಿಗೆ ಸಂಬಂಧಿಸಿದ್ದು ಪ್ರತಿ ಸಂಸ್ಕಾರಗಳು ಅವನ ಬದುಕನ್ನು ಹೊಸ ದಿಸೆಯಲ್ಲಿ ಸಾಗಿಸುವ ಆಶಯವನ್ನು ಹೊಂದಿರುವಂತವು. ಹೀಗೆ ವಿಶಿಷ್ಟವಾದ ಸಂಸ್ಕಾರಗಳಿಗೆ ಒಳಗೊಳ್ಳಬೇಕಾದ ಸಂದರ್ಭದಲ್ಲೂ ಕೂಡ ಮನುಷ್ಯ ಅಲ್ಲಿ ದೈವದ ಉಪಸ್ಥಿತಿಯನ್ನು ನಿರೀಕ್ಷಿಸುತ್ತಾನೆ. ಹೀಗೆ ದೈವಮುಖವಾದ ಸಂಸ್ಕಾರಗಳು, ಆಚಾರ-ವಿಚಾರಗಳು ಪಾವಿತ್ರತೆಯ ಸ್ವರೂಪವನ್ನು ಪಡೆದುಕೊಂಡು ವಿಘ್ನರಹಿತವಾದ ಶ್ರೇಯಸ್ಸನ್ನು ನೀಡುತ್ತವೆ ಎಂಬ ಭಾವನೆ ಅವನದು. ಹಾಗಾಗಿ ಬಹುಮಟ್ಟಿಗೆ ವ್ಯಕ್ತಿಯ ಬದುಕಿನ ಪ್ರತಿ ಹಂತಗಳಲ್ಲೂ ದೈವ ಪ್ರಮುಖ ಪಾತ್ರ ವಹಿಸುತ್ತಾ ಬಂದಿತು. ಅವನ ಹುಟ್ಟಿನಿಂದ ಸಾಯುವವರೆಗಿನ ಆಚರಣೆ, ಸಂಸ್ಕಾರ ಮತ್ತು ನಂಬಿಕೆ ಸಂಪ್ರದಾಯಗಳಲ್ಲಿ ದೈವ ಪ್ರಧಾನ ಪಾತ್ರ ವಹಿಸಿರುವುದನ್ನು ಕಾಣಬಹುದು. ವಿರೂಪಾಕ್ಷ ದೈವದ ಪ್ರಭಾವವೂ ಕೂಡ ಇದರಿಂದ ಹೊರತಾಗಿಲ್ಲ. ವಿರೂಪಾಕ್ಷನು ತನ್ನ ಪರಿಸರದ ಭಕ್ತಕೋಟಿಯ ಮನೆದೇವನಾಗಿ, ಅವರ ಮನೆಯ ಎಲ್ಲಾ ಧಾರ್ಮಿಕ ಆಚಾರ-ವಿಚಾರಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಾ ಬಂದಿರುವುದನ್ನು ಕಾಣಬಹುದು. ವಿರೂಪಾಕ್ಷನ ಬಗೆಗಿನ ಭಕ್ತ ಸಮುದಾಯದ ನಂಬಿಕೆ ಸಂಪ್ರದಾಯಗಳನ್ನು ಈ ಮುಂದಿನಂತೆ ಗಮನಿಸಬಹುದು.

### ೧. ಮನೆದೇವರಾಗಿ ವಿರೂಪಾಕ್ಷ :

ಭಾರತೀಯ ಧಾರ್ಮಿಕ ಪರಂಪರೆಯಲ್ಲಿ ವಿಶೇಷವಾಗಿ ಹಿಂದೂ ಧರ್ಮದಲ್ಲಿ ಪ್ರತಿಯೊಂದು ಮನೆ-ಮನೆತನಕ್ಕೆ ಒಬ್ಬ ಮನೆದೇವರು ಇರುವುದು ಸಾಮಾನ್ಯವಾಗಿದೆ. ಈ ಹಿನ್ನೆಲೆಯಲ್ಲಿ ಪಂಪಾಪತಿ / ವಿರೂಪಾಕ್ಷ ಕೆಲವು ಮನೆ-ಮನೆತನಗಳ ಮನೆದೇವರಾಗಿರುವುದು ಕಂಡುಬರುವುದು. ವಿರೂಪಾಕ್ಷನನ್ನು ಮನೆದೇವರಾಗಿ ಹೊಂದಿರುವ ಕುಟುಂಬಗಳಿಗೆ ಸೋಮವಾರ ಶ್ರೇಷ್ಠವಾರವಾಗಿದ್ದು, ಅಂದು ಮನೆಯಲ್ಲಿ ವಿಶೇಷ ಪೂಜೆ ಮಾಡುವರು. ಬಹುತೇಕವಾಗಿ ಹುಣ್ಣಿಮೆಗೊಮ್ಮೆ ಹಂಪಿ ವಿರೂಪಾಕ್ಷನ ದರ್ಶನಕ್ಕೆಂದು

ರುದ್ರಾಭಿಷೇಕ ಮತ್ತು ಕ್ಷೀರಾಭಿಷೇಕಗಳನ್ನು ಮಾಡಿಸುವರು. ಹಾಗೆ ಜಾತ್ರೆ ರಥೋತ್ಸವದಂತಹ ವಿಶೇಷ ಸಂದರ್ಭಗಳಲ್ಲಿ ವಿಶೇಷ ಪೂಜೆ ಪುನಸ್ಕಾರಗಳನ್ನು ಕೈಗೊಳ್ಳುವರು. ಶ್ರಾವಣ ಮಾಸಕ್ಕೊಮ್ಮೆ ಹಂಪಿ ಪುಣ್ಯಕ್ಷೇತ್ರಕ್ಕೆ ಆಗಮಿಸಿ ವಿಶೇಷ ಪೂಜಾದಿಗಳನ್ನು ವಿರೂಪಾಕ್ಷನಿಗೆ ಸಲ್ಲಿಸಿ ದರ್ಶನ ಪಡೆದು ಪುನೀತರಾಗುವರು.

**೨. ವಿರೂಪಾಕ್ಷ ಹೆಸರಿನ ನಾಮಕರಣ :**

ಮಗು ಜನಿಸಿದ ಹತ್ತು ಇಲ್ಲವೇ ಹನ್ನೆರಡನೇ ದಿನ ಶುಭ ಮುಹೂರ್ತದಲ್ಲಿ ನಾಮಕರಣ ಸಂಸ್ಕಾರವನ್ನು ಆಚರಿಸಲಾಗುವುದು. ಈ ಸಂದರ್ಭದಲ್ಲಿ ಕುಲದೇವತೆ, ನಕ್ಷತ್ರ ದೇವತೆಗಳನ್ನು ಪ್ರಾರ್ಥಿಸಿ ಶಿಶುವಿಗೆ ಸಕಲ ದೇವತೆಗಳಿಗೂ ಅನುಗ್ರಹಿಸಿ ಆಯಸ್ಸು, ಆರೋಗ್ಯ ವೃದ್ಧಿಯಾಗುವಂತೆ ದೇವರು ಅನುಗ್ರಹಿಸಬೇಕೆಂದು ಕ್ರಿಯಾವಿಧಿಗಳನ್ನು ಮಾಡಲಾಗುವುದು. ಮನುವಿನ ಅಭಿಪ್ರಾಯದಂತೆ ನಾಮಕರಣ ಸಂಸ್ಕಾರದಂತೆ ಹೆಸರನ್ನಿಡುವುದು ಆಯಾ ವರ್ಣ ಮತ್ತು ಆದರ್ಶಗಳನ್ನು ಅನುಸರಿಸಿಯೇ ಆಗಬೇಕಾಗಿರುವುದು. ಮುಖ್ಯವಾಗಿ ಈ ಹಂಪಿ ಪರಿಸರದಲ್ಲಿ ವಿರೂಪಾಕ್ಷನನ್ನು ಮನೆದೇವ / ಕುಲದೈವವನ್ನಾಗಿ ಮಾಡಿಕೊಂಡ ಅಪಾರ ಭಕ್ತ ಸಮೂಹ ವಿರೂಪಾಕ್ಷ / ಪಂಪಾಪತಿ ಎಂಬ ಹೆಸರಿನ ನಾಮಕರಣ ಮಾಡುವುದನ್ನು ಮನಗಾಣುತ್ತೇವೆ.

**೩. ಚೂಡಾಕರ್ಮ / ಜವುಳ :**

ಹಿಂದೂ ಧರ್ಮ ಪರಂಪರೆಯಲ್ಲಿ ಮಗುವಿನ ಮೂರನೇ ವರ್ಷದಲ್ಲಿ ಜವುಳ ಅಥವಾ ಚೂಡಾಕರ್ಮ ಸಂಸ್ಕಾರವನ್ನು ಆಚರಿಸಲಾಗುವುದು. ಈ ಸಂಸ್ಕಾರವನ್ನು ಮೂರನೇ ವರ್ಷದ ನಿಗದಿತ ದಿನ ನಿಶ್ಚಿತ ಮುಹೂರ್ತದಲ್ಲಿ ಶಿಶುವಿನ ಆಯುಷ್ಯ, ವರ್ಚಸ್ಸು, ಯಶಸ್ಸು, ವಿದ್ಯೆ, ಬಲಗಳ ವೃದ್ಧಿಗಾಗಿ ವೈದಿಕ ಕರ್ಮ ಮಾರ್ಗದಲ್ಲಿ ಹೇಳಿರುವಂತೆ ಹೋಮ ಮಧ್ಯದಲ್ಲಿ ತಾಮ್ರಮಯ ಲೋಹದ ಕತ್ತರಿಯನ್ನು ಉಪಯೋಗಿಸಿ ತಾಯಿಯ ಜೊತೆ ಇರುವ ಶಿಶುವಿನ ದರ್ಭೆಯಿಂದ ಜೋಡಿಸಿದ ಕೂದಲನ್ನು ಕತ್ತರಿಸಲಾಗುವುದು. ಅಂತೆಯೇ ವಿರೂಪಾಕ್ಷನ ಸಾನಿಧ್ಯದಲ್ಲಿ ಚೂಡಾಕರ್ಮ ಸಂಸ್ಕರ ನೆರವೇರಿಸುವ ವಾಡಿಕೆಯನ್ನು ಇಲ್ಲಿ ಗುರುತಿಸಬಹುದು.

**೪. ಉಪನಯನ :**

ಉಪನಯನ ಸಂಸ್ಕಾರವು ಸಾಂಪ್ರದಾಯಿಕ ಹಿಂದೂ ವ್ಯವಸ್ಥೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಣಗಳಿಗೆ ಮಾತ್ರ ಅನ್ವಯಿಸುವುದು. ಈ ಸಂಸ್ಕಾರವು ವ್ಯಕ್ತಿಗೆ ಧಾರ್ಮಿಕ ಹಾಗೂ ಸಾಮಾಜಿಕ ಪುನರ್‌ಜನ್ಮವನ್ನು ನೀಡುತ್ತವೆ. ಮನುಷ್ಯನು ತನ್ನಲ್ಲಿನ ಶೂದ್ರತ್ವ (ಅಶುಚಿತ್ವ)ವನ್ನು ಕಳೆದುಕೊಂಡು, ಪರಿಶುದ್ಧನೂ, ಶುಚಿಯುಳ್ಳವನೂ ಆಗುತ್ತಾನೆ. ಈ ಸಂಸ್ಕಾರದಲ್ಲಿ ಬಾಲಕನಿಗೆ ಪವಿತ್ರ ಜನಿವಾರವನ್ನು (Secred Thread) ತೊಡಿಸಿ ಬ್ರಹ್ಮಚರ್ಯದ ನಿಯಮಗಳನ್ನು ಉಪದೇಶಿಸಲಾಗುತ್ತದೆ.

ಹಂಪಿ ವಿರೂಪಾಕ್ಷನ ಸಾನಿಧ್ಯದಲ್ಲಿ ಇಂತಹ ವಿಶಿಷ್ಟ ಸಂಸ್ಕಾರ ನಡೆಯುತ್ತಿದ್ದು ಉಪನಯನಕ್ಕೊಳಗಾದ ಬಾಲಕನನ್ನು ದೇವರ ಮುಂದೆ ಕೂಡಿಸಲಾಗುವುದು. ಬಳಿಕೆ ಆಚಾರ್ಯರು ಹೋಮ ಹವನಾದಿಗಳನ್ನು ನೆರವೇರಿಸಿ ಆಲದ ಗಿಡದ ಕೊಂಬೆಯನ್ನು ತಂದು ಹುಡುಗನ ಕೈಗೆ ನಿಡುವರು. ಬಳಿಕೆ ಕೇಶಮುಂಡನಗೈದು ಮಧ್ಯದಲ್ಲಿ ಸ್ವಲ್ಪ ಕೂದಲನ್ನು ಬಿಡಲಾಗಿ. ನಂತರ ಹೊಸ

ವಸ್ತ್ರಗಳನ್ನು ನೀಡಲಾಗುವುದು. ಚಿಗರಿ ಚರ್ಮ, ಅರಿಶಿನ ಕೊಂಬು, ಹೂಗಳನ್ನೊಳಗೊಂಡು ಮೂರು ಎಳೆಯ ಜನಿವಾರವನ್ನು ಹಾಕಲಾಗುವುದು. ದೇವರ ಮುಂದೆ ಹೋಮ-ಹವನ ಕೈಗೊಂಡು ಶಾಸ್ತ್ರೋಕ್ತ ಮಂತ್ರಗಳನ್ನು ಉಚ್ಚರಿಸಲಾಗುವುದು. ಈ ಹೋಮದಲ್ಲಿ ತುಪ್ಪ, ಅರಿಶಿಣ, ಎಲೆ, ಅಡಿಕೆ, ಪೀತಾಂಬರ ಬಟ್ಟೆ ಹಾಕಿ ಆ ಬಾಲಕನಿಗೆ ಹೊಗೆ ಬಡಿಸಿ ಅವನ ಕೈಯಿಂದ ಐದು ಜನ ಬ್ರಾಹ್ಮಣ ದಂಪತಿಗಳಿಗೆ ಹೊಸ ಬಟ್ಟೆಯ ಕಾಣಿಕೆಯನ್ನು ಕೊಡಿಸುವರು.

೫. ವಿವಾಹ :

ವಿವಾಹ ಸಂಸ್ಕಾರವು ಹಿಂದೂ ತರುಣನಿಗೆ ಗೃಹಸ್ಥಾಶ್ರಮವನ್ನು ಪ್ರವೇಶಿಸಲು ಅವಕಾಶ ಮಾಡಿಕೊಡುತ್ತದೆ. ಈ ಸಂದರ್ಭದಲ್ಲಿ ವ್ಯಕ್ತಿಗೆ ಪವಿತ್ರವಾದ ವೈವಾಹಿಕ ಬಾಂಧವ್ಯ ಮತ್ತು ಬಂಧನವನ್ನು ಮನವರಿಕೆ ಮಾಡಿಕೊಡುವ ಉದ್ದೇಶದಿಂದ ಹಲವಾರು ಆಚರಣೆಗಳನ್ನು ವ್ಯವಸ್ಥಿತವಾಗಿ ನಿರ್ವಹಿಸಲಾಗುವುದು. ಕನ್ಯಾರ್ಥಿಯಾಗಿ ಬಂದ ವರನಿಗೆ ಯೋಗ್ಯ ವಧುವನ್ನು ಭಾರ್ಯಕ್ತ, ಗೃಹಾಗ್ನಿ ಸಿದ್ಧಿಗಾಗಿ ಮತ್ತು ಧರ್ಮ ಪ್ರಜೋತ್ಪಾದನ ಸಿದ್ಧಿಗಾಗಿ ವಿವಾಹ ಮಾಡಲಾಗುವುದು. ವ್ಯಕ್ತಿಯು ಉತ್ತಮ ಮಟ್ಟದಲ್ಲಿ ಸಾಮಾಜೀಕರಣಗೊಂಡಿದ್ದು, ಸಂತಾನೋತ್ಪತ್ತಿ ಮಾಡಲು ಅರ್ಹನಾಗಿದ್ದು, ಗೃಹಸ್ಥಾಶ್ರಮದ ಎಲ್ಲ ಧಾರ್ಮಿಕ ಹಾಗೂ ಸಾಮಾಜಿಕ ವಿಧಿ ವಿಧಾನಗಳನ್ನು ಅನುಸರಿಸಲು ಪ್ರಭಾವ ಬೀರಲಾಗುವುದು. ಹಂಪಿ ಶ್ರೀ ವಿರುಪಾಕ್ಷನ ಸಾನಿಧ್ಯದಲ್ಲಿ ಮಂಗಳಕರವಾದ ವಿವಾಹ ಕಾರ್ಯಗಳು ಜರುಗುವುವು. ವಿಶಿಷ್ಟ ಆಚರಣೆ ಪದ್ಧತಿಗಳೊಂದಿಗೆ ನಡೆಯುವ ಈ ಸಂಸ್ಕಾರ ಹಿಂದೂ ಪರಂಪರೆಯಲ್ಲಿ ಪವಿತ್ರ ಬಂಧನವೆನಿಸಿದೆ. ಹಿಂದೂ ವಿವಾಹ ಪದ್ಧತಿಯಲ್ಲಿ ಕಾಣುವಂತೆ ಮೊದಲಿಗೆ ವಧು-ವರರಿಗೆ ಎಣ್ಣೆ ಅರಿಶಿಣ ಹಚ್ಚಿ, ಆರತಿ ಬೆಳಗಿ, ಸುರುಗಿ ನೀರನ್ನು ಹಾಕುತ್ತಾರೆ. ಬಳಿಕ ಹೊಸ ಮಡಿ ವಸ್ತ್ರಗಳನ್ನು ಕೊಟ್ಟು ವೈದಿಕ ಬ್ರಾಹ್ಮಣ ಪರಂಪರೆಯಲ್ಲಿ ಗೌರಿ ಪೂಜೆ ಮಾಡಿಸಿದ ನಂತರ ಧಾರೆ ಎರೆಯುವ ಮೂಲಕ ಅಗ್ನಿಸಾಕ್ಷಿಯಾಗಿ ಮಾಂಗಲ್ಯಧಾರಣೆ ದೈವ ಸಾನಿಧ್ಯದಲ್ಲಿ ನೆರವೇರುತ್ತದೆ. ಹಾಗೆ ವೀರಶೈವ ಧರ್ಮದ ಪ್ರಕಾರ ಪಂಚಾಚಾರ್ಯರ ಪ್ರತೀಕವಾಗಿ ಪಂಚ ಕಲಶಗಳನ್ನು ಸಂಪ್ರದಾಯಿಕ ಮಂತ್ರೋಚ್ಚಾರ ವಿಧಿ ವಿಧಾನಗಳೊಂದಿಗೆ ಧಾರೆ ಎರೆಯುವ ಮೂಲಕ ವಿವಾಹಕಾರ್ಯ ನೆರವೇರುವುದು. ನಂತರ ನೂತನ ದಂಪತಿಗಳಿಂದ ಧಾರೆ ನೀರಿನಲ್ಲಿ ಮುತ್ತನ್ನು ಹುಡುಕಿಸುತ್ತಾರೆ. ಹಾಗೆಯೇ ಅರುಂದತಿ ನಕ್ಷತ್ರವನ್ನು ತೋರಿಸುತ್ತಾರೆ ಮತ್ತು ಚಿಕ್ಕ ತೊಟ್ಟಿಲನ್ನು ತೂಗಿಸುವ ಆಚರಣೆಯನ್ನು ಈ ಪರಿಸರದಲಿ ಕಾಣಬಹುದು [illegible] [illegible] ಮಾರ್ಗದರ್ಶನದಲ್ಲಿ ನೆರವೇರುತ್ತವೆ.

**೬. ನವದಂಪತಿಗಳಿಂದ ವಿರೂಪಾಕ್ಷ ದರ್ಶನ :**

ವಿವಾಹ ಕಾರ್ಯಗಳೆಲ್ಲಾ ಸಾಂಗವಾಗಿ ಶಾಸ್ತ್ರೋಕ್ತವಾಗಿ ನೆರವೇರಿದ ಮೇಲೆ ವಿರೂಪಾಕ್ಷನಿಗೆ ಹರಕೆ ಹೊರುತ್ತಾರೆ. ವಿಶೇಷವಾಗಿ ವಿರೂಪಾಕ್ಷನನ್ನು ಮನೆದೇವರಾಗಿ ಹೊಂದಿರುವಂತಹ ಕುಟುಂಬದವರು ಮೊದಲಿಗೆ ನವದಂಪತಿಗಳಿಂದ ವಿರೂಪಾಕ್ಷನ ದರ್ಶನ ಮಾಡಿಸುತ್ತಾರೆ. [illegible] ಸಮೇತರಾಗಿ ತೆರಳಿ ವಿರೂಪಾಕ್ಷನ ದರ್ಶನಗೈದು ಪೂಜೆ, ಅರ್ಚನೆ ಪೂರೈಸಿ ಊಟ ಮಾಡುತ್ತಾರೆ.

ಬಳಿಕೆ ಮದುವೆ ಕಾರ್ಯದ ಕೆಲವು ಮಂಗಲಕರ ವಸ್ತುಗಳನ್ನು, ಬಾಸಿಂಗವನ್ನು ನದಿ ನೀರಿನಲ್ಲಿ ಬಿಟ್ಟು ಬರುತ್ತಾರೆ.

**೭. ನವದಂಪತಿಗಳು ತೇರಿನ ಕಳಶ ನೋಡುವುದು :**

ಹಿಂದೂ ಧಾರ್ಮಿಕ ಪರಂಪರೆಯಲ್ಲಿ ವಿವಾಹ ಪವಿತ್ರ ಬಂಧನವೆನಿಸಿದ್ದು ಸತಿ-ಪತಿಗಳಾಗಿ ನೂತನ ಜೀವನಕ್ಕೆ ಪಾದಾರ್ಪಣೆ ಮಾಡಿದ ಮೇಲೆ ಆ ದಂಪತಿಗಳು ತೇರಿನ ಕಳಶ ನೋಡಬೇಕೆನ್ನುವ ನಂಬಿಕೆ ಇದೆ. ವಿರೂಪಾಕ್ಷನ ದರ್ಶನ ಭಾಗ್ಯದಿಂದ ಮತ್ತು ರಥೋತ್ಸವದ ತೇರಿನ ಕಳಶದ ದರ್ಶನದಿಂದ ತಮ್ಮ ಸಕಲ ಇಷ್ಟಾರ್ಥಗಳು ಕೈಗೂಡುತ್ತವೆ ಎಂಬ ನಂಬಿಕೆಯನ್ನು ಈ ಪರಿಸರದಲ್ಲಿ ಬಹುತೇಕವಾಗಿ ಕಾಣಬಹುದು. ಅದರಂತೆ ಜಾತ್ರಾ ಸಂದರ್ಭದಲ್ಲಿ ಅನೇಕ ನೂತನ ದಂಪತಿಗಳು ವಿರೂಪಾಕ್ಷನ ದರ್ಶನ ಮತ್ತು ತೇರಿನ ಕಳಶ ನೋಡುವ ಮೂಲಕ ಧನ್ಯತೆ ಪಡೆಯುತ್ತಾರೆ.

**೮. ಮಕರ ಸಂಕ್ರಾಂತಿಯಂದು ತುಂಗಭದ್ರಾ ನದಿಯಲ್ಲಿ ಪುಣ್ಯ ಸ್ನಾನ :**

ಮಕರ ಸಂಕ್ರಾಂತಿ ಸಂದರ್ಭದಲ್ಲಿ ಭೂ ಮಂಡಲದ ಚಲನೆಯ ವ್ಯವಸ್ಥೆಯಲ್ಲಿ ಸೂರ್ಯನು ದಕ್ಷಿಣಾಯಣವನ್ನು ಬಿಟ್ಟು ಉತ್ತರಾಯಣವನ್ನು ಪ್ರವೇಶ ಮಾಡುತ್ತಾನೆ. ಹಾಗೆಯೇ ಮಕರ ರಾಶಿ ಪ್ರವೇಶ ಮಾಡುತ್ತಾನೆ ಎಂಬ ನಂಬಿಕೆ ಇದೆ. ಆದ್ದರಿಂದ ಈ ಪರಿಸರದ ಬಹುತೇಕ ಭಕ್ತ ಸಮೂಹ ಹಂಪಿಗೆ ಬಂದು ನದಿಯಲ್ಲಿ ಪುಣ್ಯ ಸ್ನಾನ ಮಾಡಿ ವಿರೂಪಾಕ್ಷನ ದರ್ಶನ ಭಾಗ್ಯ ಪಡೆಯುತ್ತಾರೆ. ಹಾಗೆಯೇ ಇದೇ ಸಂದರ್ಭದಲ್ಲಿ ಸುಖ-ದುಃಖದ ಸಂಕೇತವಾಗಿ ಎಳ್ಳು-ಬೆಲ್ಲವನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಬಹುತೇಕ ಗ್ರಾಮಾಂತರ ಪ್ರದೇಶಗಳಿಂದ ಅನೇಕ ಜನರು ಊಟದ ಬುತ್ತಿಗಳೊಂದಿಗೆ, ವಾಹನಗಳೊಂದಿಗೆ ಇಲ್ಲಿಗೆ ಆಗಮಿಸಿ ಪುಣ್ಯಸ್ನಾನಗೈದು ನದಿ ತೀರದಲ್ಲಿ ವಿರಮಿಸುವ ದೃಶ್ಯ ಹಬ್ಬದ ವಾತಾವರಣಕ್ಕೆ ಪುಷ್ಠಿ ನಿಡುತ್ತದೆ.

**೯. ಶ್ರಾದ್ಧ ಆಚರಣೆ :**

ವೈದಿಕ ಪರಂಪರೆಯಲ್ಲಿ ಒಬ್ಬ ವ್ಯಕ್ತಿಯ ಮರಣದ ಬಳಿಕ ಈ ಧಾರ್ಮಿಕ ವಿಧಿ ವಿಧಾನ ಆಚರಿಸುವುದನ್ನು ಕಾಣಬಹುದು. ವಿಶೇಷವಾಗಿ ಪಂಪಾಪತಿ / ವಿರೂಪಾಕ್ಷನನ್ನು ಮನೆದೇವರಾಗಿ ಹೊಂದಿರುವ ಸಂಪ್ರದಾಯದ ಕುಟುಂಬಗಳು ಹಂಪಿಯ ತುಂಗಭದ್ರಾ ತೀರಕ್ಕೆ ಹೋಗಿ ಶ್ರಾದ್ಧಾ ಕಾರ್ಯ ಮಾಡುವ ಪದ್ದತಿ ಇದೆ. ಒಬ್ಬ ವ್ಯಕ್ತಿಯ ಅಂತ್ಯಸಂಸ್ಕಾರದ ಬಳಿಕ ಸೂತಕವಿದ್ದು, ಸುಮಾರು ೧೧ ದಿನದ ವರೆಗೆ ಈ ನದಿ ತೀರಕ್ಕೆ ಹೋಗಿ ಪಿಂಡಾರ್ಪಣೆ ಮಾಡುವರು. ೧೨ ನೇ ದಿನ ಅಂತ್ಯ ಸಂಸ್ಕಾರಕ್ಕೆ ಬಂದಂತಹ ವ್ಯಕ್ತಿಗಳಿಗೆ ಅನ್ನ ಸಂತರ್ಪಣೆ ಮಾಡುವ ವಾಡಿಕೆ ಇದೆ. ಕೆಲವರು ಪಿತೃಪಕ್ಷ ಮಾಸದಲ್ಲೂ ಈ ಶ್ರಾದ್ಧಾ ಕಾರ್ಯ ನಡೆಸಿ ತರ್ಪಣ ಸಲ್ಲಿಸುತ್ತಾರೆ. ಅಂತೆಯೇ ಪ್ರತಿವರ್ಷ ಶ್ರಾದ್ಧಾ ಕಾರ್ಯ ನಡೆಸಲಾಗಿ ಈ ಸಂದರ್ಭದಲ್ಲಿ ಶ್ರಾದ್ಧಾ ಮಾಡುವ ದಿನದಂದು ಬೆಳಗ್ಗೆ ಶುದ್ಧ ಮಡಿಯಿಂದ ಅನ್ನ ಮಾಡಿ ಅದರಲ್ಲಿ ಎಳ್ಳು ಹಾಕುತ್ತಾರೆ. ಆಚಾರ ಬ್ರಾಹ್ಮಣ ರೂಪದ ದರ್ಭೆಗೆ ಅಕ್ಕಿ, ಎಳ್ಳು, ಸಕ್ಕರೆ ಅರ್ಪಿಸಿ ಪೂಜೆಗೈದು ದಕ್ಷಿಣೆ ಹಾಕಿ ನೈವೇದ್ಯಗಯ್ಯುತ್ತಾರೆ. ಕೊನೆಗೆ ಈ ಪಿಂಡವನ್ನು (ಅನ್ನದ ಉಂಡೆಯನ್ನು) ನದಿಗೆ ಹಾಕುತ್ತಾರೆ. ಅಥವಾ ಗೋವಿಗೆ ಅರ್ಪಿಸುತ್ತಾರೆ. ಈ ಸಂದರ್ಭದಲ್ಲಿ ಉಪಸ್ಥಿತರಿರುವ

ಆಚಾರ್ಯರಿಗೆ ಕಾಣಿಕೆಯನ್ನು ನೀಡಲಾಗುವುದು. ಬಳಿಕ ದೇವಾಲಯಕ್ಕೆ ಬಂದು ಅರ್ಚನೆ ಪೂಜೆ ಮಾಡಿಸುವರು.

**೬.೨ ಐತಿಹ್ಯಗಳು :**

**೧. ಉದ್ಭವಲಿಂಗ :**

ಹಂಪಿಯ ವಿರೂಪಾಕ್ಷೇಶ್ವರ ದೇವಾಲಯದ ಲಿಂಗಕ್ಕೆ ಉದ್ಭವಲಿಂಗ ಎಂದು ಕರೆಯಲಾಗುತ್ತದೆ. ಮೂಲತಃ ಲಿಂಗ ಮಾತ್ರವಿದ್ದು, ಅದರ ಅದ್ಭುತ ಮಹಿಮೆ ಕೇಳಿದ ಅರಸ ಆ ಲಿಂಗಕ್ಕ ಗುಡಿ ಕಟ್ಟಿಸಿ, ವಿರೂಪಾಕ್ಷ ದೇವಾಲಯ ಎಂದು ಹೆಸಿರಿಸಿದ.

ಈ ಉದ್ಭವಲಿಂಗದ ಬಗ್ಗೆ ಸ್ಥಳೀಯ ಜನಪದರ ನಂಬಿಕೆಯೊಂದು ಇಂತಿದೆ:

ಲಿಂಗಕ್ಕೆ ದಿನಾಲೂ ಒಬ್ಬ ಅರ್ಚಕ ಪೂಜೆ ಮಾಡುತ್ತಿದ್ದ. ವಿಜಯನಗರದ ರಾಜಾ ನಿತ್ಯವೂ ಬಂದು ಪೂಜೆ ಮಾಡಿಸಿಕೊಂಡು 'ಹೂ ಪ್ರಸಾದ' ತೆಗೆದುಕೊಂಡು ಹೋಗುತ್ತಿದ್ದ. ಹೀಗೆ ದಿನಕಳೆದಂತೆ ಒಂದು ಪ್ರಸಂಗ ನಡೆಯಿತು. ಪೂಜಾರಿ ಓರ್ವ ವೇಶ್ಯೆಯ ಸಂಪರ್ಕ ಹೊಂದಿದ್ದ. ಒಂದು ದಿನ ಲಿಂಗ ಪೂಜೆಗೆ ಮೊದಲು ಅವಳ ಜೊತೆ ಸರಸಕ್ಕಿಳಿದು ಪೂಜೆಯನ್ನೇ ಮರೆತುಬಿಟ್ಟ. ನಿತ್ಯದಂತೆ ರಾಜ ಅಲ್ಲಿಗೆ ಬರಲಾಗಿ ಭಯಗೊಂಡ ಪೂಜಾರಿ ತನ್ನ ವೇಶ್ಯೆಯ ತಲೆಯ ಮೇಲಿನ ಹೂವನ್ನು ತೆಗೆದುಕೋಂಡು ಬಂದು ಲಿಂಗ ಪೂಜೆ ಮಾಡಿ ರಾಜನಿಗೆ ಕೊಟ್ಟುಬಿಟ್ಟ. ಹುವಿನ ಜೊತೆಗೆ ಕೂದಲಳೆ ಕಾಣಲಾಗಿ ರಾಜ ಪೂಜಾರಿಗೆ ಹೂವಿನೊಳಗೆ ಕೂದಲು ಬಂದಿದೆ ಲಿಂಗಕ್ಕೆ ಕೂದಲು ಬಂದಿವೆಯೇನು? ಎಂದು ಕೇಳಲಾಗಿ, ಪೂಜಾರಿ ಗಡಿಬಿಡಿಯಿಂದ ಹೌದ್ರಿ ಅಂತ ಹೇಳಿಬಿಟ್ಟ ಹಾಗೆ ರಾಜನಿಗೆ ನೀವು ಲಿಂಗಕ್ಕೆ ಕೂದಲು ಬಂದಿರುವುದು ನೋಡಬೇಕಾದರೆ ಮೂರು ತಿಂಗಳ ಸಮಯ ಮತ್ತು ೨೪ ದೊಡ್ಡ ಗಾತ್ರದ ಮಡಿಕೆಯಲ್ಲಿ ಬೆಣ್ಣೆ ಬೇಕೆಂದು ಹೇಳುತ್ತಾನೆ. ನಾನು ನಿಮಗೆ ೩ ತಿಂಗಳ ಅವಧಿಯಲ್ಲಿ ಲಿಂಗಕ್ಕೆ ಕೂದಲು ಬಂದಿರುವುದನ್ನು ತೋರಿಸುವೆ ಎಂದು ರಾಜನಲ್ಲಿ ಕೇಳಿಕೊಂಡ ರಾಜನಿಂದ ಸಹಾಯ ಪಡೆದುಕೊಂಡು ೩ ತಿಂಗಳ ಕಾಲ ಉಪವಾಸ ಇದ್ದು, ಲಿಂಗಕ್ಕೆ ಬೆಣ್ಣೆ ಹಚ್ಚಿ ಹಚ್ಚಿ ಶಿವನನ್ನು ನೆನೆಸುತ್ತ ಆ ಅಗ್ನಿಪರೀಕ್ಷೆಯಲ್ಲಿ ತೇರ್ಗಡೆಯಾಗಿ ಕೊನೆಗೆ ಕೂದಲಿ ಇರೋ ಲಿಂಗವನ್ನು ರಾಜನಿಗೆ ತೋರಿಸಿದ. ಆಗ ರಾಜ ಈ ಅದ್ಭುತ ಕಾರ್ಯ ನೋಡಿ ಆಶ್ಚರ್ಯಗೊಂಡ. ವಿಜಯನಗರದ ಜನರೆಲ್ಲ ಆನಂದದಿಂದ ಪೂಜಾರಿಯನ್ನು ಪಲ್ಲಕ್ಕಿ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿ ಬಹುಮಾನ ನೀಡಿದರು. ಲಿಂಗಕ್ಕೆ ಗುಡಿ ಕಟ್ಟಿಸಿ ಅದಕ್ಕೆ ಪಂಪಾಪತಿ ದೇವಾಲಯ ಅಂತ ಕರೆಯುತ್ತಾರೆಂದು ಹೇಳುತ್ತಾರೆ. ಲಿಂಗಕ್ಕೆ ಕೂದಲು ಬಂದಿದ್ದರಿಂದ ಈ ಲಿಂಗಕ್ಕೆ ಉದ್ಭವಲಿಂಗವೆಂದು ಕರೆಯುವುದನ್ನು ಈ ಕಥೆಯ ಮೂಲದಿಂದ ತಿಳಿದುಕೊಳ್ಳಬಹುದು.

**೨. ಕನಕಗಿರಿ ಗೋಪುರ :**

ವಿರೂಪಾಕ್ಷ ದೇವಾಲಯದ ರಂಗಮಂಟಪದ ಎಡಭಾಗದಲ್ಲಿ ದೊಡ್ಡ ಗೋಪುರವಿದ್ದು ಅದಕ್ಕೆ ಕನಕಗಿರಿ ಪಾಳೆಗಾರನ ಗೋಪುರವೆಂದು ಕರೆಯುತ್ತಾರೆ. ಒಂದು ನಂಬಿಕೆ ಪ್ರಕಾರ ಕನಕಗಿರಿ ಪಾಳೆಗಾರನಿಗೆ ಮದುವೆಯಾಗಿ ಎಷ್ಟು ವರ್ಷಗಳಾದ್ರು ಮಕ್ಕಳಾಗಿರಲಿಲ್ಲ. ಅದಕ್ಕೆ ಅವನು ವಿರೂಪಾಕ್ಷನಿಗೆ ತನಗೆ ಮಕ್ಕಳಾಗುವ ಹಾಗೆ ಹರಕೆ ಹೊತ್ತುಕೊಂಡಿದ್ದ. ಆ ಹರಕೆ ಫಲವಾಗಿ ಮುಂದೆ ಗಂಡು ಮಗುವನ್ನು

ಪಡೆದ ಎಂದು ಸ್ಥಳೀಯ ಒಬ್ಬ ತಾಯಿ ಹೇಳುತ್ತಾಳೆ. ಅದಕ್ಕಾಗಿ ಕನಕಗಿರಿ ಪಾಳೆಗಾರ ಅತ್ಯಂತ ಸಂತೋಷದಿಂದ ಈ ಪುಣ್ಯಕ್ಷೇತ್ರದಲ್ಲಿ ತನ್ನ ನೆನಪಿಗಾಗಿ ಒಂದು ಕಟ್ಟಡ ಕಟ್ಟಿಸಲು ಮುಂದಾಗುತ್ತಾನೆ ಮತ್ತು ಆಗಿನ ಸಮಯದಲ್ಲಿ ಆಡಳಿತ ಮಾಡುತ್ತಿದ್ದ ರಾಜ ಕೃಷ್ಣದೇವರಾಯನ ಒಪ್ಪಿಗೆ ಪಡೆದ. ಈ ವಿಷಯ ತಿಳಿದ ಕೃಷ್ಣದೇವರಾಯ ಪಾಳೆಗಾರನಿಗೆ ಒಪ್ಪಿಗೆ ನೀಡುತ್ತಾನೆ. ಕನಕಗಿರಿ ಪಾಳೆಗಾರ ಒಪ್ಪಿಗೆ ಪಡೆಯುವ ಮೂಲಕ ಒಂದು ಗೋಪುರ ನಿರ್ಮಾಣ ಮಾಡುತ್ತಾನೆ. ಈ ಗೋಪುರ ೮೦ ಅಡಿ ಎತ್ತರ, ೪೦ ಅಡಿ ಅಗಲದಿಂದ ಕೂಡಿದ್ದು ೫ ಕಡೆ ಶುಭದ ಸಂಕೇತವಾಗಿ ಬಾಗಿಲುಗಳಿರುವುದನ್ನು ಕಾಣಬಹುದು.

**೩. ಮೂರು ತಲೆ ನಂದಿ :**

ವಿಜಯನಗರದ ಅರಸರು ಕಾಲಮಾನ ಸೂಚಕವಾಗಿ ಈ ಮೂರು ತಲೆಯ ನಂದಿಯನ್ನು ವಿರೂಪಾಕ್ಷ ಲಿಂಗಕ್ಕೆ ಎದುರಾಗಿ ದೇವಾಲಯದ ಆವರಣದಲ್ಲಿ ಪ್ರತಿಷ್ಠಾಪಿಸಿದರು. ಭೂತ, ವರ್ತಮಾನ, ಭವಿಷತ್ ಕಾಲಗಳನ್ನು ಈ ನಂದಿ ತಿಳಿಸುತ್ತಿತ್ತು ಎಂಬ ನಂಬಿಕೆ. ತ್ರಿಕಾಲ ಜ್ಞಾನ ತಿಳಿಸುವ ನಂದಿ ಶಿವನ ವಾಹನವಾದ್ದರಿಂದ ಶಿವನ ಎದುರುಗಡೆ ನಿರ್ಮಿಸಲ್ಪಟ್ಟಿದೆ ಎಂದು ಹೇಳುತ್ತಾರೆ.

**೪. ಮೂಲ ವಿರೂಪಾಕ್ಷನ ಕುರಿತಾದ ಐತಿಹ್ಯ :**

ಈಗ ಕಾಣುವ ವಿರೂಪಾಕ್ಷನ ಗುಡಿಯಲ್ಲಿ ಮೊದಲು ವಿರೂಪಾಕ್ಷ ಇರಲಿಲ್ಲ. ಈಗಿನ ವಿರೂಪಾಕ್ಷ ದೇವಾಲಯದ ಎಡಭಾಗದಲ್ಲಿರುವ ಏಕಶಿಲೆಯ ಬೆಟ್ಟವಾದ ಹೇಮಕೂಟದಲ್ಲಿ ಮೊದಲು ವಿರೂಪಾಕ್ಷನ ಗುಡಿ ಇತ್ತು. ಇಲ್ಲಿಂದ ವಿರೂಪಾಕ್ಷ ಬದಲಾವಣೆ ಮಾಡಿ ಈಗಿರುವಲ್ಲಿಗೆ ಬಂದ ಕಾರಣಗಳಿವೆ.

ಈ ಪ್ರಕಾರ ಹೇಳುವುದಾದರೆ ಮೂಲತಃ ವಿರೂಪಾಕ್ಷ ಎಂಬ ಸೌಮ್ಯ ದೇವರು ಇವನಿಗೆ ಕೋಪವೆಂಬುದಿಲ್ಲ. ಪಂಪಾಂಬಿಕೆಯನ್ನು ವಿವಾಹ ಮಾಡಿಸುವ ಕಾರಣಕ್ಕಾಗಿ ಶಿವನ ದೀರ್ಘ ತಪಸ್ಸನ್ನು ಕೆಡಿಸಿ ಕಣ್ಣು ತೆರೆಸಲು ದೇವತೆಗಳು ಮನ್ಮಥನನ್ನು ಇಲ್ಲಿಗೆ ಕಳುಹಿಸುತ್ತಾರೆ. ಮನ್ಮಥನು ತನ್ನ ಬಾಣಗಳಿಂದ ಶಿವನ ತಪಸ್ಸು ಕೆಡುವಂತೆ ಮಾಡಿದಾಗ ಶಿವ ತನ್ನ ಮೂರನೇ ಕಣ್ಣಿಂದ ಮನ್ಮಥನನ್ನು ಸುಟ್ಟು ಹಾಕುತ್ತಾನೆ. ಆ ವೇಳೆಗೆ ಹೇಮಕೂಟದಲ್ಲಿದ್ದ ಶಿವನ ಎದುರಿನ ಬಂಡೆಯು ಕರಗಿ ನೀರಾಗಿ ಹೊಂಡವಾಗುತ್ತದೆ. ಇದಕ್ಕೆ 'ಮನ್ಮಥಕೊಂಡ' ಎಂದು ಕರೆಯುತ್ತಾರೆ. ಹೀಗೆ ಶಿವನು ಮೊದಲಿಗೆ ನೆಲೆಸಿದ್ದ ಈ ಸ್ಥಳದಲ್ಲಿ ಶಿವಲಿಂಗದ ಸಣ್ಣ ಗುಡಿಯೊಂದಿದ್ದು ಇದಕ್ಕೆ ಮೂಲ ವಿರೂಪಾಕ್ಷನ ಗುಡಿ ಎಂದು ಕರೆಯುತ್ತಾರೆ. ವಿರೂಪಾಕ್ಷ ಅನಂತರದ ಕಾಲದಲ್ಲಿ ಈಗ ಗುಡಿಯಿರುವ ಜಾಗಕ್ಕೆ ವಲಸೆ ಬಂದನಂತೆ ಎಂಬ ನಂಬಿಕೆ ಇದೆ.

**೫. ಬಿಷ್ಟಪ್ಪಯ್ಯನ ಗೋಪುರ :**

ಹಂಪಿಯ ವಿರೂಪಾಕ್ಷ ದೇವಲಯದ ಪ್ರವೇಶ ದ್ವಾರದ ಮೊದಲನೆಯ ದೊಡ್ಡ ಗೋಪುರವನ್ನು 'ಹಿರಿಯ ಗೋಪುರ' ಅಥವಾ 'ಬಿಷ್ಟಪ್ಪಯ್ಯನ ಗೋಪುರ' ಎಂದು ಕರೆಯುತ್ತಾರೆ. ಬಿಷ್ಟಪ್ಪಯ್ಯ ಎಂಬುವವನು ಈ ಗೋಪುರವನ್ನು ಕಟ್ಟಿಸಿದನೆಂದು ಜನರು ಹೇಳುತ್ತರೆ. ಈ ಗೋಪುರದ ಎರಡು ಅಂತಸ್ತುಗಳನ್ನು ಕಲ್ಲಿನಿಂದ ಕಟ್ಟಲಾಗಿದ್ದು, ಉಳಿದ ಎಂಟು ಅಂತಸ್ತುಗಳನ್ನು ಗಾರೆಯಿಂದ ನಿರ್ಮಿಸಲಾಗಿದೆ. ಈ ಗೋಪುರವನ್ನು ನಿರ್ಮಿಸುವಾಗ ಕಟ್ಟಡ ಪದೇ ಪದೇ ಕುಸಿದು ಬೀಳುತ್ತಿತ್ತಂತೆ ಆಗ

ಹಿರಿಯರೆಲ್ಲಾ ಸೇರಿ ಪಂಚಾಂಗ ತೆಗೆಸಿ ಕೇಳಿದಾಗ ಗರ್ಭಿಣಿ ಹೆಂಗಸನ್ನು ಬಲಿಕೊಡಬೇಕೆಂದು ತಿಳಿದುಬರುತ್ತದೆ. ಅದರಂತೆ ಬಿಷ್ಟಪ್ಪಯ್ಯನು ಗರ್ಭಿಣಿಯಾಗಿದ್ದ ಹಿರಿಯ ಸೊಸೆಯನ್ನು ಗೋಪುರದ ಗೋಡೆಯ ನಡುವೆ ಸೇರಿಸಿ ಗೋಪುರ ಕಟ್ಟುತ್ತಾರೆ. ಆಗ ಗೋಪುರ ಕುಸಿದು ಬೀಳುವುದು ನಿಲ್ಲುತ್ತದೆ. ಹೀಗೆ ಗೋಪುರ ಕಟ್ಟಲು ಪ್ರಾಣ ನೀಡಿದ ಆ ಹೆಂಗಸಿಗೆ ಗೋಪುರದಮ್ಮ ಎಂದು ಹೆಸರಾಯಿತು. ಒಮ್ಮೊಮ್ಮೆ ಗಾಳಿ ಬೀಸಿದಾಗ ಗೋಪುರದಮ್ಮ ಲಾಲಿ ಹಾಡುವುದು ಹೊರಗಿನ ಜನರಿಗೆ ಕೇಳಿಸುವ ಅಂಶ ತಿಳಿದುಬರುತ್ತದೆ.

**೬. ಮನ್ಮಥನ ಕೊಂಡ :**

ಶಿವನ ತಪಸ್ಸನ್ನು ಭಂಗಗೊಳಿಸಿ ತನ್ನನ್ನು ಬಾಧಿಸಿದ ಮನ್ಮಥನನ್ನು ಸುಟ್ಟು ಬಿಡಲು ಮೂರನೇ ಕಣ್ಣನ್ನು ತೆರೆದಾಗ ಮನ್ಮಥ ಸುಟ್ಟುಹೋದ ಜೊತೆಗೆ ಶಿವನ ಕಣ್ಣೆದುರಿಗಿದ್ದ ಬಂಡೆಯೂ ಕರಗಿ ಹೋಯಿತು. ಹಾಗೆ ಬಂಡೆ ಕರಗಿದ ಜಾಗವೇ ಮನ್ಮಥ ಕೊಂಡ. ವಿಶೇಷವಾಗಿ ಫಲಪೂಜೆ ಮತ್ತು ಹಂಪಿ ಜಾತ್ರೆಯ ದಿವಸ ಪಂಪಾಪತಿ ಮತ್ತು ಹಂಪಮ್ಮನವರು ಈ ಕೊಂಡದಲ್ಲಿ ತೆಪ್ಪದಲ್ಲಿ ವಿರಹಿಸುತ್ತಾರೆ ಎಂಬ ನಂಬಿಕೆ ಇದೆ.

**೭. ತಳವಾರಪ್ಪನ ಕಲ್ಲು :**

ಹಂಪಿಯ ವಿರೂಪಾಕ್ಷ ದೇವಾಲಯದ ಒಳಗೆ ಪ್ರವೇಶ ಮಾಡುವಾಗ ದ್ವಾರದ ಪಕ್ಕದಲ್ಲಿ ಕಂಡುಬರುವ ಸುಮಾರು ಮುರೂವರೆ ಅಡಿ ಉದ್ದದ ಕಲ್ಲನ್ನು ತಳವಾರಪ್ಪನ ಕಲ್ಲು ಎಂದು ಕರೆಯುತ್ತಾರೆ. ಇದಕ್ಕೆ ಚಿಕ್ಕಯ್ಯನ ಕಲ್ಲು ಎಂಬ ಹೆಸರೂ ಇದೆ. ಇದಕ್ಕೆ ಕುಂಕುಮ, ಎಣ್ಣೆಯನ್ನು ಹಾಕಿ ಕೈ ಮುಗಿಯುತ್ತಾರೆ. ಈ ಕಲ್ಲಿನ ಕುರಿತು ಲಭ್ಯವಿರುವ ಜನಪದರ ಕಥೆಯ ಪ್ರಕಾರ ತಳವಾರಪ್ಪ ಎಂಬ ಅಗಸನು ಹಂಪಮ್ಮ-ಪಂಪಾಪತಿಯ ಶಯನಗೃಹವನ್ನು ಸ್ವಚ್ಛಗೊಳಿಸುವ ಕೆಲಸ ಮಾಡುತ್ತಿರಲಾಗಿ ಒಮ್ಮೆ ಜಾತ್ರೆಯ ದಿವಸ ರಾತ್ರಿ ಕಾಲದಲ್ಲಿ ಎಂದಿನಂತೆ ಪೂಜಾರರು ಹಂಪಮ್ಮ-ಪಂಪಾಪತಿ ವಿಗ್ರಹಗಳನ್ನು ಶಯನಗೃಹಗಕ್ಕೆ ಸೇರಿಸಿ ಬಾಗಿಲು ಹಾಕುತ್ತಾರೆ. ಹಾಗೆ ಮಾಡುವುದು ಪದ್ಧತಿಯಾಗಿದ್ದು ಪೂಜಾರರು ಒಳಗೆ ಯಾರನ್ನೂ ಸೇರಿಸದೆ ಶಯನಗೃಹದ ಬಾಗಿಲು ಬಿಗಿ ಮಾಡುತ್ತಾರೆ.

"ಈ ದಿವಸ ಪಂಪಾಪತಿ ಹಂಪಮ್ಮ ವಿಗ್ರಹ ರೂಪ ಬಿಟ್ಟು ನಿಜರೂಪಿನಲ್ಲಿ ಅಲ್ಲೇ ಬಂದು ಮಲಗುತ್ತಾರೆ" ಎಂದು ಅಲ್ಲಿದ್ದ ತಳವಾರಪ್ಪನಿಗೆ ಯಾಕೋ ಅನ್ನಿಸಲಾಗಿ, ಅವರು ಹೇಗಿದ್ದಾರೆ? ಎಂದು ನೋಡಲು ನಿಶ್ಚಯಿಸಿ ಶಯನಗೃಹವನ್ನು ಸ್ವಚ್ಛಮಾಡುವ ನೆಪದಲ್ಲಿ ಒಳಗೆ ಹೋಗಿ ಶಯನಗೃಹದ ಮಂಚದ ಅಡಿಯಲ್ಲಿ ಅಡಗಿ ಕುಳಿತುಕೊಳ್ಳುತ್ತಾನೆ. ಎಂದಿನಂತೆ ಪೂಜಾರರು ಬಂದು ಹಂಪಮ್ಮ-ಪಂಪಾಪತಿಯರ ವಿಗ್ರಹಗಳನ್ನು ಶಯನಗೃಹದ ಮಂಚದ ಮೇಲೆ ಇಟ್ಟು ಬಾಗಿಲು ಬಿಗಿ ಮಾಡಿ ಹಿಂದೆ ಬರುತ್ತಾರೆ. ತಳವಾರಪ್ಪ ಎಚ್ಚರವಾಗಿಯೇ ಮಂಚದ ಕೆಳಗೆ ಕಾದು ಕುಳಿದಿರುತ್ತಾನೆ. ಸುಮಾರು ಮಧ್ಯರಾತ್ರಿಯ ಸಮಯದಲ್ಲಿ ಹಂಪಮ್ಮ-ಪಂಪಾತಿಗಳು ನಿಜರೂಪದಲ್ಲಿ ಪ್ರತ್ಯಕ್ಷರಾಗಿ ಇನ್ನೇನು ಮಲಗಬೇಕು ಎಂದುಕೊಳ್ಳುವ ಹೊತ್ತಿಗೆ ಹಂಪಮ್ಮನಿಗೆ ಸಂಶಯ ಬರುತ್ತದೆ. ಆಕೆ ಪಂಪಾಪತಿಯನ್ನು ಕುರಿತು 'ಇದೇನೋ ನರವಾಸನೆ ಬರುತ್ತಿದೆಯಲ್ಲಾ?' ಎನ್ನುತ್ತಾಳೆ. ಪಂಪಾಪತಿ ದಿವ್ಯದೃಷ್ಟಿಯಿಂದ ನೋಡಲು ತಳವಾರಪ್ಪನು ಕಾಣಿಸಿಕೊಳ್ಳುತ್ತಾನೆ. ಅವನನ್ನು ಮಂಚದ ಅಡಿಯಿಂದ ಹೊರಗೆ ಬರಲು

ಹೇಳಲಾಗಿ ನಿನಗೆ ಏನು ಬೇಕು? ಎಂದು ಪಂಪಾಪತಿ ಕೇಳುತ್ತಾನೆ. ನಾನು ನಿಮ್ಮ ದರ್ಶನಕ್ಕಾಗಿ ಹಲವಾರು ವರ್ಷಗಳಿಂದ ಕಾಯುತ್ತಿದ್ದೆ. ಈ ನಿಮ್ಮ ದಿವ್ಯ ದರ್ಶನವಾಯಿತು. ನನಗೆ ಇಷ್ಟೇ ಸಾಕು ಮತ್ತೇನು ಬೇಡ ಎಂದು ತಳವಾರಪ್ಪ ಹೇಳುತ್ತಾನೆ. ಆಗ ಹಂಪಮ್ಮ ಪಂಪಾಪತಿಯರು ಸರಿ ನಿನಗೆ ಒಳ್ಳೆಯದಾಗಲಿ ಎಂದು ಆಶೀರ್ವದಿಸಿದರು. ಜೊತೆಗೆ ನೀನು ಇಲ್ಲಿಂದ ಹೋಗುವಾಗ ಹಿಂದಿರುಗಿ ನೋಡಬೇಡ. ಹಾಗೇನಾದರೂ ನೋಡಿದಲ್ಲಿ ನಿನ್ನ ತಲೆ ಸಿಡಿದು ಹೋಳಾಗುತ್ತದೆ ಎಂದು ಎಚ್ಚರಿಕೆಯನ್ನು ಕೊಟ್ಟರು. ಆಗಲಿ ಎಂದು ಹೇಳಿ ತಳವಾರಪ್ಪ ಶಯನಗೃಹದಿಂದ ಹೊರಬರುವಾಗ ಹಿಂದೆ ನೋಡುತ್ತಾನೆ. ತಕ್ಷಣ ತಳವಾರಪ್ಪನ ತಲೆ ಸಿಡಿದು ಎರಡು ಹೋಳಾಗುತ್ತದೆ ಮತ್ತು ಆ ಹೋಳುಗಳು ಕಲ್ಲಾಗುತ್ತವೆ. ಈ ಕಲ್ಲನ್ನು ಗುಡಿಯ ಎದುರಿನಲ್ಲಿ ನಿಲ್ಲಿಸಲಾಗಿ ಅಂದಿನಿಂದ ಆ ಕಲ್ಲಿಗೆ ತಳವಾರಪ್ಪನ ಕಲ್ಲು ಎಂದು ಹೇಳುತ್ತಾರೆ. ಹಂಪಿ ಜಾತ್ರೆಯ ಸಮಯದಲ್ಲಿ ಕೆಲವರು ಇದಕ್ಕೂ ಪೂಜೆ ಸಲ್ಲಿಸುವುದುಂಟು.

**೮. ಉಗುಳದಮ್ಮಲ ಮಾರಿ :**

ಹಂಪಿಯ ವಿರೂಪಾಕ್ಷ ದೇವಾಲಯದಿಂದ ವಿಜಯ ವಿಠಲ ದೇವಾಲಯದ ಹಾದಿಯಲ್ಲಿ ಬಂದರೆ ಕಲ್ಲು ಬಂಡೆಯ ಮೇಲೆ ತಲೆಯ ಮೇಲೆ ಕೈ ಜೋಡಿಸಿರುವ ಜೋಡಿ ರೇಖಾ ಚಿತ್ರಗಳು ಕಂಡುಬರುತ್ತವೆ. ಈ ಸ್ಥಳಕ್ಕೆ ಭೇಟಿ ನೀಡುವ ಹಾಗೂ ಇವುಗಳ ಬಗ್ಗೆ ತಿಳಿದಿರುವ ಹಲವಾರು ಮಂದಿ ಎಲೆ ಅಡಿಕೆ ಜಗಿದು ಇಲ್ಲವೇ ಹಾಗೆ ಈ ರೇಖಾ ಚಿತ್ರಗಳ ಮೇಲೆ ಉಗುಳಿ ಹೋಗುತ್ತಾರೆ. ಇದಕ್ಕೆ ಕಾರಣ ಕೇಳಿದರೆ ಹುಟ್ಟುವ ಕಥಾನಕ ಹೀಗಿದೆ:–

ಹಿಂದೆ ಈ ರಾಜ್ಯದಲ್ಲಿ ಇಬ್ಬರು ಹೆಂಗಸರು ಇದ್ದು ಅವರು ಮಾಡಬಾರದ ಎಲ್ಲಾ ಪಾಪಕಾರ್ಯಗಳನ್ನು ಮಾಡಿ ತಮ್ಮ ಪಾಪ ಪರಿಹಾರಕ್ಕಾಗಿ ಹಂಪಿಯ ಪಣ್ಯ ಕ್ಷೇತ್ರಕ್ಕೆ ಬಂದು ಪ್ರಣ ಬಿಟ್ಟರು. ಸಾಯುವಾಗ 'ನಾಲ್ವರು ನಡೆದಾಡುವ ದಾರಿಯಲ್ಲಿ ನಮ್ಮ ಚಿತ್ರ ಬಿಡಿಸಿ' ಎಂದು ಹೇಳಿ ಪ್ರಾಣ ಬಿಟ್ಟರು. ಹೀಗಾಗಿ ಅವರ ಗುರುತಿನ ಚಿತ್ರವನ್ನು ಅಲ್ಲಿ ಬಿಡಿಸಲಾಗಿದ್ದು, ಅವರ ಪಾಪ ಪರಿಹಾರಕ್ಕಾಗಿ ಜನರು ಹೀಗೆ ಉಗುಳಿ ಹೋಗುತ್ತಾರೆ. ಹೀಗಾಗಿ ಅವರಿಗೆ 'ಉಗುಳದಮ್ಮಲ ಮಾರಿ' ಎಂಬ ಹೆಸರು ಬಂತು.

ಇನ್ನೊಂದು ಐತಿಹ್ಯ ನಂಬಿಕೆ ಪ್ರಕಾರ ಅತ್ತೆ ಮನೆಯ ಸೊಸೆಯೊಬ್ಬಳು ಬೇರೆಯವರೊಡನೆ ಅನೈತಿಕ ಸಂಬಂಧ ಹೊಂದಿದ್ದಳು ಇದನ್ನು ತಿಳಿದ ಅವರ ಮನೆಯವರು ಈಕೆಯನ್ನು ಹೊರಹಾಕಿದರು. ಆಗ ಈಕೆಯು ವಿರೂಪಾಕ್ಷನ ಹೆಸರಿನಲ್ಲಿ ಪ್ರಮಾಣ ಮಾಡಿದಳು. ಪರಿಣಾಮವಾಗಿ ಆಕೆ ಕಲ್ಲಾದಳು. ಅಂದಿನಿಂದ ಜನರು ಕಲ್ಲಿಗೆ ಗೌರವ ನೀಡದೇ ಆಕೆಯ ಪಾಪ ಕೃತ್ಯವನ್ನು ಕಂಡು ಉಗುಳಲು ಪ್ರಾರಂಭಿಸಿದರು. ಕೊನೆಗೆ ಇದರಿಂದಾಗಿ ಈಕೆ ಉಗುಳದಮ್ಮಲ ಮಾರಿಯಾದಳು.

ಹಾಗೆಯೇ ಲಭ್ಯವಿರುವ ಇನ್ನೊಂದು ಐತಿಹ್ಯ / ನಂಬಿಕೆ ಪ್ರಕಾರ – ಬಹಳ ದೂರದ ಊರಿನಿಂದ ಕುಟುಂಬವೊಂದು ಚಕ್ಕಡಿ ಬಂಡಿ ಕಟ್ಟಿಕೊಂಡು ಹಂಪಿ ಜಾತ್ರೆಗೆ ಬಂದಿತ್ತು. ಕುಟುಂಬದ ಹಲವು ಸದಸ್ಯರು ಪೇಟೆ ಸುತ್ತಾಡಿ ಸಾಮಾನು ಕೊಂಡು ದೇವರಿಗೆ ಹಣ್ಣು ಕಾಯಿ ಮಾಡಿಸಿದರು. ಹೀಗೆ ಮಾಡಿದಾಗ ಅವರ ಬಿಡಾರದಲ್ಲಿ ಪ್ರಾಯಕ್ಕೆ ಹುಡುಗಿಯೊಬ್ಬಳಿದ್ದಳು. ಅವಳು ಬೇರೆ ಊರಿನಿಂದ ಜಾತ್ರೆಗೆ ಬಂದಿದ್ದ ಗಂಡಸಿನೊಂದಿಗೆ ಸಂಬಂಧ ಬೆಳೆಸಿಕೊಂಡಳು ಇದರಿಂದ ದೇವರಿಗೆ ಸಿಟ್ಟು ಬಂದು ಶಾಪ

ಕೊಡಲಾಗಿ ಆ ಹುಡುಗಿ ಕಲ್ಲಾದಳು. ಜನ ಅವಳ ನಡತೆಗೆ ಹೇಸಿ ಉಗುಳಿಕೊಂಡು ಹೋದರು. ಇಂದಿಗೂ ಉಗುಳುತ್ತಿದ್ದಾರೆ. ಹೀಗೆ ಉಗುಳದಮ್ಮಲ ಮಾರಿಯ ಸುತ್ತ ಮುತ್ತ ಜನಪ್ರಿಯ ಐತಿಹ್ಯ ನಂಬಿಕೆಗಳಿವೆ.[೧]

**ಇತರ ಜನಪದ ಹಬ್ಬಗಳು :**

ಕೆಲವು ಪ್ರಮುಖ ಆಚರಣೆಗಳಷ್ಟೇ ಅಲ್ಲದೆ ಕೆಲವು ವಿಶಿಷ್ಟವೆನಿಸುವ ಜನಪದ ಆಚರಣೆಗಳನ್ನು ಈ ಹಂಪಿ ಪರಿಸರದಲ್ಲಿ ಕಾಣಬಹುದು.

ನವರಾತ್ರಿಯ ಆಚರಣೆಯ ಅನಂತರ ಭರಮದೇವನನ್ನು ಪೂಜಿಸುವ 'ಹಟ್ಟಿ ಹಬ್ಬ' ಇಲ್ಲಿ ನಡೆಯುತ್ತದೆ. ಆ ದಿನ ಗೋವುಗಳನ್ನು ಸಿಂಗರಿಸುತ್ತಾರೆ. ಸಗಣಿಯ ಕೆರಕಿ ಮಾಡಿ ಪಾಂಡವರನ್ನು ಬರಮಾಡಿಕೊಳ್ಳುತ್ತಾರೆ. ಹೊಸವರ್ಷದ ಆರಂಭದ ದಿನ 'ಬೇವಿನ ಹಬ್ಬ' ಅಥವಾ ಯುಗಾದಿ ಹಬ್ಬವನ್ನು ಆಚರಿಸುತ್ತಾರೆ.

ಮಾಘ ಮಾಸದಲ್ಲಿ ಆಚರಿಸಲಾಗಿರುವ ಗುಡಿ ಹುಣ್ಣಿಮೆ ಮಾತ್ರ ಕುತೂಹಲಕರವಾಗಿದೆ. ಆ ದಿನದಂದು ಕೃಷಿಕರು ತಮ್ಮ ಕೃಷಿ ಉತ್ಪತ್ತಿಗಳಿಂದಲೇ ಮನೆಯನ್ನು ಸಿಂಗರಿಸುತ್ತಾರೆ. ಹಿತ್ತಾಳೆ ಗಿಂಡಿಯೊಂದಕ್ಕೆ ರೇಷ್ಮೆ ಬಟ್ಟೆ ಹೊದಿಸಿ ಅದಕ್ಕೆ ಬೇವಿನಸೊಪ್ಪು ಕಟ್ಟುತ್ತಾರೆ ಅನಂತರ ಮನೆ ಮುಂದೆ ಬಂದು ಧ್ವಜ ನಿಲ್ಲಿಸುತ್ತಾರೆ. ಈ ಧ್ವಜವು ಹಿಂದಿನ ದೊರೆಗಳ ವಿಜಯದ ಸಂಕೇತ ಎಂದು ಜನ ಭಾವಿಸುತ್ತಾರೆ. ಈ ಧ್ವಜವನ್ನು ವಿರೂಪಾಕ್ಷನ ಜಾತ್ರೆಯ ವರೆಗೂ ಹಾರಿ ಬಿಡಲಾಗುತ್ತಿತ್ತಂತೆ.

ವಿರೂಪಾಕ್ಷನ ಜಾತ್ರೆಗೆ ಬರುವಾಗ ಜನರು ಕೈಯಲ್ಲಿ ಬಾವುಟ ಹಿಡಿದಿರುತ್ತಾರೆ. ಇದುವ ವಿಜಯಧ್ವಜ ಅಂತ ಅವರು ನಂಬುತ್ತಾರೆ. ಧಾರ್ಮಿಕ ಆಚರಣೆಗಳು ಹೀಗೆ ರಾಜಕೀಯ ಘಟನೆಗಳ ಆಯಾಮವನ್ನು ಪಡೆದಿವೆ.

ಉಳಿದಂತೆ ಮಣ್ಣೆತ್ತಿನ ಅಮಾವಾಸ್ಯೆ, ಗುಳಕವ್ವನ ಪೂಜೆ, ನಾಗರಪಂಚಮಿ, ಜೋಕುಮಾರನ ಹಬ್ಬ, ಸೀಗೆ ಹುಣ್ಣಿಮೆ, ಗೌರಿ ಹುಣ್ಣಿಮೆ ಇತ್ಯಾದಿ ಹಬ್ಬಗಳನ್ನು ಈ ಪರಿಸರದಲ್ಲಿ ಜನರು ಆಚರಿಸುವ ಸಂಪ್ರದಾಯವಿದೆ.[೨]

**ಅಡಿಟಪ್ಪಣಿ :**

೧. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ.

೨. ಪುರುಷೋತ್ತಮ ಬಿಳಿಮಲೆ, ಚಲುವರಾಜು, ೧೯೯೬; ಹಂಪಿ ಜಾನಪದ, ಕ.ವಿ.ವಿ., ಹಂಪಿ.

# ಅಧ್ಯಾಯ ೭

೭. ಜಾತ್ರೆ–ಉತ್ಸವಗಳು

೭.೧ ವಿರೂಪಾಕ್ಷ ರಥೋತ್ಸವ ಕಾವ್ಯದ ಉಲ್ಲೇಖಗಳು

೭.೨ ವಿರೂಪಾಕ್ಷ ರಥೋತ್ಸವ–ಹಂಪಿ

೭.೩ ಪಂಪಾವಿರೂಪಾಕ್ಷ ದೇವಾಲಯದ ರಥೋತ್ಸವ–ಹಿರೇಜಂತಕಲ್

೭.೪ ಪಂಪಾಪತಿ ರಥೋತ್ಸವ–ಬೆಣ್ಣೆಹಳ್ಳಿ

# ಅಧ್ಯಾಯ ೭

ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಸಾಮಾಜಿಕವಾಗಿ ಖ್ಯಾತಿಯನ್ನು ಹೊಂದಿರುವ ಕನ್ನಡ ನಾಡು ಅಸಂಖ್ಯ ದೇವಾಲಯಗಳನ್ನು ಹೊಂದಿದ್ದು, ರಥೋತ್ಸವಗಳ ತಾಣವೂ ಆಗಿದೆ. ನಾಡಿನ ಜನತೆ ದೇವಾಲಯದ ಮೇಲೆ ಹೊಂದಿದ ಶ್ರದ್ಧಾ ಭಕ್ತಿಯನ್ನು ರಥ ಹಾಗೂ ರಥೋತ್ಸವದ ಮೇಲೆಯೂ ಹೊಂದಿದ್ದಾರೆ. ಕರ್ನಾಟಕ ರಥೋತ್ಸವದ ಭವ್ಯ ಪರಂಪರೆಯನ್ನು ಹೊಂದಿದ ಪುಣ್ಯಭೂಮಿಯಾಗಿದ್ದು ಆರಾಧ್ಯ ದೇವರ, ಮಹಾಸ್ವಾಮಿಗಳ, ಸಾಧುಸಂತರ, ಪವಾಡಪುರುಷರ, ಯೋಗಿಗಳ, ಜ್ಞಾನಿಗಳ ಹೆಸರುಗಳಲ್ಲಿ ವರ್ಷವಿಡೀ ಹಲವಾರು ವಿಧದ ರಥೋತ್ಸವಗಳು ಜರುಗುತ್ತವೆ. ಪ್ರಾಚೀನ ಕಾಲದಲ್ಲಿ ರಾಜ ಮಹಾರಾಜರು ರಥೋತ್ಸವಗಳ ಪರಂಪರೆಯನ್ನು ಪೋಷಿಸಿಕೊಂಡು ಬಂದರೆ ಕಾಲಾಂತರದಲ್ಲಿ ದೇವಾಲಯದಲ್ಲಿ ಧರ್ಮದರ್ಶಿಗಳು, ಆಡಳಿತ ಮಂಡಳಿಯವರು, ಮಠಮಾನ್ಯಗಳಲ್ಲಿ ಮಹಾಸ್ವಾಮಿಗಳು ಈ ಪರಂಪರೆಯನ್ನು ಬೆಳೆಸಿ ಉಳಿಸಿಕೊಂಡು ಬರುವಲ್ಲಿ ಪ್ರಧಾನ ಪಾತ್ರ ವಹಿಸಿದ್ದಾರೆ. ಇತ್ತೀಚೆಗೆ ಸರ್ಕಾರವು ಜಾತ್ರಾ ಸಮಯದಲ್ಲಿ ಹಲವಾರು ಸೌಲಭ್ಯಗಳನ್ನು ನೀಡಿ ಸಹಕರಿಸುತ್ತಿದೆ. ಅಂತೆಯೇ ಜನಪ್ರಿಯತೆಯ ದೃಷ್ಟಿಯಿಂದ ಹಂಪಿ ಜಾತ್ರೆಯು ಅತಿ ಪ್ರಮುಖ ಪಾತ್ರ ವಹಿಸುತ್ತಿದೆ.

**೭.೧ ವಿರೂಪಾಕ್ಷ ರಥೋತ್ಸವ ಕಾವ್ಯದ ಉಲ್ಲೇಖಗಳು :**

ಮುಖ್ಯವಾಗಿ ವಿದ್ಯಾರಣ್ಯರ ಸಮಕಾಲೀನ ಅಹೋಬಲಕವಿ ವಿರಚಿತ ಸಂಸ್ಕೃತದ 'ವಿರೂಪಾಕ್ಷ ವಸಂತೋತ್ಸವ ಚಂಪೂ'[೧] ಕೃತಿಯು ವಿಜಯನಗರ ಸಾಮ್ರಾಜ್ಯ ಪತನಾನಂತರದ ವಿರೂಪಾಕ್ಷನ ರಥೋತ್ಸವವನ್ನು ವರ್ಣಿಸುತ್ತದೆ. ಇಡೀ ಕಾವ್ಯ ರಥೋತ್ಸವದ ವರದಿಯಂತಿದೆ. ಸ್ವತಃ ಕವಿ ಅಹೋಬಲನೇ ಭಾಗವಹಿಸಿ ಉತ್ಸವದಲ್ಲಿ ಭಾಗವಹಿಸಿದ ಹಲವಾರು ಗಣ್ಯರನ್ನು ಉಲ್ಲೇಖಿಸುತ್ತಾನೆ. ಐತಿಹಾಸಿಕ ಮಹತ್ವವಿರುವ ಈ ಕೃತಿ ಆ ಕಾಲವನ್ನು ನೇರವಾಗಿ ಪರಿಚಯಿಸುತ್ತದೆ. ಈ ವಸಂತೋತ್ಸವದಲ್ಲಿ ಶಿವ ಮತ್ತು ಪಾರ್ವತಿಯರ ಉತ್ಸವ ಮೂರ್ತಿಗಳನ್ನು ರಥದಲ್ಲಿರಿಸಿ ಮೆರವಣಿಗೆಯ ಮೂಲಕ ಕರೆದೊಯ್ದು ಕೊನೆಗೆ ಪ್ರಸಾದ ವಿತರಣೆಯಾದಂತೆಯೂ ರಥದ ಜೊತೆಗೆ ವಿದ್ಯಾರಣ್ಯರನ್ನು ಪಲ್ಲಕ್ಕಿಯಲ್ಲಿರಿಸಿ ಅವರ ಶಿಷ್ಯರು, ಭಕ್ತರು ಮೆರವಣಿಗೆಯಲ್ಲಿ ಮೆರೆಸಿದಂತೆಯೂ ಹೇಳಿದೆ.

ಪ್ರಾರಂಭದಲ್ಲಿ ಪುರೋಹಿತರು ಮೂರ್ತಿಗಳನ್ನು ಪೂಜಿಸಿ ರಥವನ್ನು ಎಷ್ಟು ಎಳೆದರೂ ರಥ ಮುಂದೆ ಸಾಗಲಿಲ್ಲವಂತೆ, ಅಂದಿನ ರಾಜ ಪ್ರಾರ್ಥಿಸಿ ತನ್ನ ಎರಡೂ ಕೈಗಳಿಂದ ರಥವನ್ನಿಡಿದು ಎಳೆದಾಗ ರಥ ಮುಂದೆ ಸಾಗಿತಂತೆ. ರಥ ಮತ್ತು ಪಲ್ಲಕ್ಕಿಯ ಜೊತೆಗೆ ವರ್ತಕರು ಮತ್ತು ಶೂದ್ರರು ನಿರ್ಮಿಸಿದ ಮತ್ತೊಂದು ರಥವನ್ನೂ ಎಳೆಯಲಾಯಿತು. ಈ ಎರಡೂ ರಥಗಳನ್ನು ಸಂಧ್ಯಾ ಸಮಯದಲ್ಲಿ ಎಳೆದು ಭಕ್ತ ಸಮೂಹ ಈ ಉತ್ಸವದಲ್ಲಿ ಭಾಗವಹಿಸಿ ಪುನೀತರಾದಂತೆ ಹೇಳಿದೆ. ಶಾಸನಗಳು ಮತ್ತು ಇತರ ಯಾವುದೇ ಸಾಹಿತ್ಯ ಕೃತಿಗಳು ನೀಡದ ಅಪರೂಪದ ಚಿತ್ರಣವನ್ನು ಈ ಕೃತಿ ನೀಡುತ್ತಿದ್ದು, ಈ ಉತ್ಸವದಲ್ಲಿ ಭಾಗವಹಿಸಿದ ರಾಜರನ್ನು ಗಣ್ಯರನ್ನು ಹೆಸರಿಸುತ್ತದೆ. ಆಗ ಹಂಪಿಯಲ್ಲಿದ್ದ ರಾಜನ ಹೆಸರು 'ದೇವನೃಪ' ಎಂದಷ್ಟೇ ಹೇಳಿ ವಿದ್ಯಾರಣ್ಯ ಯತಿಗಳ ಆಶೀರ್ವಾದದ ಕಕ್ಷೆಯಲ್ಲಿದ್ದನು ಎಂದು ಹೇಳಲಾಗಿದೆ. ಈ ಯತಿಗಳು ವಿದ್ಯಾರಣ್ಯ ಪೀಠ ಪರಂಪರೆಯಲ್ಲಿ ಬರುವ ಯತಿಗಳಿರಬೇಕೆಂದೆನಿಸುತ್ತವೆ. ಅಶ್ವಪತಿ ಎಂದು ಕರೆಯಲ್ಪಡುತ್ತಿದ್ದ ಕಾಶ್ಮೀರ ದೇಶದ ರಾಜ ಲಿಂಗಧಾರಿಯಾಗಿದ್ದ ಸಿರ್ಸಿಯ ರಾಜ

(ಬಹುಶಃ ಸೋಂದೆಯ ಸದಾಶಿವರಾಯ), ಮೋಕ್ಷಪುರದ ರಾಜ ದೇವರಥ, ಬಳ್ಳಾರಿಯ ರಾಜ ವಿಜಯನಗರದ ಸೇನಾಪತಿಯಾಗಿದ್ದ ರಾಯದುರ್ಗದ ಗಣ್ಯ, ಚಿತ್ರಶಿಲಾ ನಗರ (ಚಿತ್ರದುರ್ಗ) ದ ಬೇಡ ಜಾತಿಯ ಗಣ್ಯ, ಹರಪುರದ (ಹರಪನಹಳ್ಳಿ) ಗಣ್ಯ, ಭುಜಂಗನಗರದ ಗಣ್ಯ, ಲಕ್ಷ್ಮಣೇಶ್ವರ ಪುರಿಯ (ಲಕ್ಷ್ಮೇಶ್ವರ) ಗಣ್ಯ, ಡಂಬಳಪುರ ದೇಶದ ಗಣ್ಯ ಮುಂತಾದ ಗಣ್ಯರು, ಪಾಳೇಗಾರರು ಈ ಉತ್ಸವದಲ್ಲಿ ಭಾಗವಹಿಸಿದ್ದರೆಂದು ತಿಳಿದುಬರುತ್ತದೆ. ವಿಶೇಷವೆಂದರೆ ಶಿವಪಾರ್ವತಿಯರ ಮೂರ್ತಿಗಳಿದ್ದ ಈ ಉತ್ಸವದಲ್ಲಿ ಭಾಗವಹಿಸಿದ್ದ ಗಣ್ಯಮಾನ್ಯರು ಶೈವರು. ಆದರೆ ಪಲ್ಲಕ್ಕಿ ವಿದ್ಯಾರಣ್ಯರದು.

**೭.೨ ವಿರೂಪಾಕ್ಷ ರಥೋತ್ಸವ – ಹಂಪಿ.**

ವಿಜಯನಗರ ಅರಸರ ರಾಜಾಶ್ರಯದಲ್ಲಿ ಬೆಳೆದುಬಂದ ಹಂಪಿಯ ವಿರೂಪಾಕ್ಷನ ರಥೋತ್ಸವ ಭವ್ಯ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಕನ್ನಡ ನಾಡನ್ನು ಬಹುಕಾಲದ ವರೆಗೆ ಆಳಿದ ವಿಜಯನಗರದ ಅರಸರು ತಮ್ಮ ಆಳ್ವಿಕೆಯ ಕಾಲದಲ್ಲಿ ಹಲವಾರು ದೇಗುಲಗಳನ್ನು ನಿರ್ಮಿಸಿದಂತೆ ಅಲ್ಲಿ ಉತ್ಸವಕ್ಕಾಗಿ ಮರದ ಸುಂದರ ರಥಗಳನ್ನು ನಿರ್ಮಿಸಿ ರಥೋತ್ಸವಕ್ಕೆ ಭದ್ರ ಬುನಾದಿಯನ್ನು ಹಾಕಿದರು. ವಿಜಯನಗರದ ಅರಸರ ಆರಾಧ್ಯ ದೇವರಾದ ಹಂಪಿಯ ಶ್ರೀ ವಿರೂಪಾಕ್ಷನ ರಥೋತ್ಸವ ರಾಜಾಶ್ರಯದ ಭವ್ಯ ಪರಂಪರೆಯಲ್ಲಿ ಬೆಳೆದು ಉಳಿದುಬಂದಿದೆ.

ಹಂಪಿಯ ವಿರೂಪಾಕ್ಷನ ರಥೋತ್ಸವವು ಮಾರ್ಚ್ ಇಲ್ಲವೇ ಏಪ್ರಿಲ್ ತಿಂಗಳಿನಲ್ಲಿ ಬರುವ ದವನದ ಹುಣ್ಣಿಮೆಯಂದು ವಿಜೃಂಭಣೆಯಿಂದ ಜರುಗುತ್ತದೆ. ಈ ರಥೋತ್ಸವದಲ್ಲಿ ಪಾಲ್ಗೊಳ್ಳಲು ಸುತ್ತಮುತ್ತಲಿನ ಪ್ರದೇಶದಿಂದ ಸಹಸ್ರಾರು ಸಂಖ್ಯೆಯಲ್ಲಿ ಭಕ್ತರ ಪ್ರವಾಹವೇ ಹರಿದುಬರುತ್ತದೆ. ರಥೋತ್ಸವದ ದಿನ ದೇವಾಲಯದಲ್ಲಿ ಪಂಪಾದೇವಿ ಮತ್ತು ಪಂಪಾಪತಿಯ ವಿವಾಹ ವಿಧಿಯನ್ನು ನೆರವೇರಿಸಿ ವಿಜೃಂಭಣೆಯಿಂದ ರಥೋತ್ಸವವನ್ನು ದೇವಾಲಯದ ಎದುರು ಬೀದಿಯಲ್ಲಿ ಆಚರಿಸುತ್ತಾರೆ. ಎರಡು ರಥಗಳನ್ನು ಏಕಕಾಲಕ್ಕೆ ಎಳೆಯಬಹುದಾದಷ್ಟು ವಿಶಾಲವಾದ ಈ ಬೀದಿ ರಥಬೀದಿ ಎಂದೇ ಖ್ಯಾತಿ ಪಡೆದಿದೆ. ರಥಬೀದಿಯ ಇಕ್ಕೆಲಗಳಲ್ಲಿ ಅಂತಸ್ತುಗಳುಳ್ಳ ಸಾಲು ಮಂಟಪಗಳನ್ನು ಹೊಂದಿದ್ದು ವೈಭವದ ಕಾಲದಲ್ಲಿ ರಾಜ ಮಹಾರಾಜರ ಪರಿವಾರದವರು ಈ ಮಂಟಪದಲ್ಲಿ ನಿಂತು ರಥೋತ್ಸವವನ್ನು ವೀಕ್ಷಿಸುತ್ತಿದ್ದರು.

**೭.೨.೧ ರಥದ ರಚನೆ :**

ಹಂಪಿ ವಿರೂಪಾಕ್ಷನ ದೇವಾಲಯ ಎರಡು ಬೃಹತ್ ಗಾತ್ರದ ಮರದ ರಥಗಳನ್ನು ಹೊಂದಿದ್ದು, ಒಂದು ರಥ ಸ್ಥಾಯಿ ಸ್ವರೂಪದಲ್ಲಿದ್ದು ಅದರ ಮೇಲೆ ಉತ್ಸವದ ಸಮಯದಲ್ಲಿ ಸುಂದರ ಶಿಖರ ಹಾಗೂ ಕಳಶವನ್ನಿಟ್ಟು ಸಿಂಗರಿಸುತ್ತಾರೆ. ಇನ್ನೊಂದು ಮರದ ರಥ ಗಡ್ಡಿಯ ಸ್ವರೂಪವನ್ನು ಮಾತ್ರ ಹೊಂದಿದ್ದು ಉತ್ಸವದ ಸಮಯದಲ್ಲಿ ಇದರ ಮೇಲೆ ಮಂಟಪದ ಭಾಗ ಹಾಗೂ ಪ್ರಾದೇಶಿಕ ಶೈಲಿಯಲ್ಲಿ ಸುಂದರವಾದ ಗೋಪುರವನ್ನು ನಿರ್ಮಿಸಿ ತಳಿರು, ತೋರಣ, ಬೇಳೆಗಿಡ ಹಾಗೂ ಹೂಮಾಲೆಗಳಿಂದ ಅಲಂಕರಿಸುತ್ತರೆ. ಕಾಷ್ಠ ಶಿಲ್ಪದ ಪರಮ ವೈಭವವನ್ನು ಈ ಎರಡೂ ತೇರುಗಳಲ್ಲಿ ಕಾಣಬಹುದು. ಈ ಹಿಂದೆ ದೇವಾಲಯವು ಪುರಾತನ ರಥಗಳನ್ನು ಹೊಂದಿದು ಅವುಗಳು ಶಿಥಿಲವಾದ ನಂತರ ಇತ್ತೀಚಿನ ನೂತನ ರಥಗಳನ್ನು ನಿರ್ಮಿಸಲಾಗಿದೆ. ಈ ದೇವಾಲಯದ ಸ್ಥಾಯಿ ಸ್ವರೂಪದ ತೇರು ಚೌಕಾಕಾರದ

ಅಡಿಪಾಯವನ್ನು ಹೊಂದಿದ್ದು ಸುಮಾರು ೮ ಅಡಿ ಎತ್ತರ ಹಾಗೂ ೧೦ ಇಂಚು ದಪ್ಪವುಳ್ಳ ನಾಲ್ಕು ಮರದ ಚಕ್ರಗಳನ್ನು ಹೊಂದಿದೆ. ರಥದ ಸುಭದ್ರತೆಗಾಗಿ ಅಡಿಪಾಯದಲ್ಲಿ ಕಬ್ಬಿಣದ ತೊಲೆಗಳನ್ನು ಚಕ್ರದ ಜೋಡಣೆ ಹಂತದಲ್ಲಿ ಬಳಸಲಾಗಿದೆ. ರಥದ ಅಡಿಪಾಯದ ಅಚ್ಚಿನ ಮೇಲೆ ಜೋಡಿಸಲಾದ ನಾಲ್ಕು ದಪ್ಪವಾದ ಆಧಾರ ತೊಲೆಗಳ ಎರಡೂ ತುದಿಯಲ್ಲೂ ಕಲಾತ್ಮಕ ರಾಣಿಶಿಲ್ಪವನ್ನು ಹೊಂದಿದೆ. ಆನೆ ಹಾಗೂ ಸಿಂಹಗಳನ್ನು ಹೊಂದಿಕೊಂಡೇ ಸಾಂಪ್ರದಾಯಿಕ ಶೈಲಿಯಲ್ಲಿ ಸೂಕ್ಷ್ಮವಾಗಿ ಕೆತ್ತಲಾಗಿದೆ. ಎರಡೂ ತೊಲೆಯ ನಡುವಿನ ಅಂತರದಲ್ಲಿ ದೇವತಾ ವಿಗ್ರಹಗಳಿಂದ ಕೂಡಿದ ಪಟ್ಟಿಕೆಗಳನ್ನು ಅಂದವಾಗಿ ಜೋಡಿಸಲಾಗಿದೆ. ರಥದ ಗಡ್ಡಿಯು ಅರಳಿದ ಕಮಲದ ವಿನ್ಯಾಸದಂತಿದ್ದು ಮೂರ್ತಿ ಶಿಲ್ಪದ ಪರಮ ವೈಭವದ ವೈಖರಿಯನ್ನು ಗಡ್ಡಿಯ ಮೇಲ್ಭಾಗದಲ್ಲಿ ಪ್ರಧಾನವಾಗಿ ಕಾಣಬಹುದಾಗಿದೆ.

ದೇವತಾ ವಿಗ್ರಹವನ್ನು ಇಡುವ ರಥದ ಮಂಟಪದ ಭಾಗ ಅಷ್ಟಮ ಶೈಲಿಯನ್ನು ಅನುಸರಿಸಿದ್ದು ಚಿತ್ತಾಕರ್ಷಕ ಕಮಾನು ಹಾಗೂ ಕಲಾತ್ಮಕ ಕಂಬಗಳಿಂದ ಕೂಡಿದೆ. ಮಂಟಪದ ಸೌದರ್ಯವರ್ಧನೆಗಾಗಿ ಕೆಳಭಾಗದಲ್ಲಿ ಸುತ್ತುವರೆದ ಚಿಕ್ಕಚಿಕ್ಕ ಕಂಬಗಳಿಂದ ಕೂಡಿದ ಕಟಾಂಜನವನ್ನು ನಿರ್ಮಿಸಲಾಗಿದೆ. ಮಂಟಪದ ಮೇಲ್ಛಾವಣಿಯ ಭಾಗದಲ್ಲಿ ಸ್ವಲ್ಪ ಹೊರಚಾಚಿ ಅಂದವಾದ ಸೂರಪಟ್ಟಿಗಳು ಸಂಧಿಸುವಲ್ಲಿ ಚಿಕ್ಕ ಚಿಕ್ಕ ಶಿಖರಗಳನ್ನು ಅಲಂಕಾರಿಕವಾಗಿ ಕೂಡಿಸಲಾಗಿದೆ. ಮಂಟಪದ ಮೇಲ್ಭಾಗವು ಇದೇ ಬಗೆಯಾಗಿ ಚಿತ್ತಾಕರ್ಷಕ ಕಮಾನು ಹಾಗೂ ಕಲಾತ್ಮಕ ಕಂಬಗಳಿಂದ ಕೂಡಿದ ಮಂಟಪದ ಎರಡು ಅಂತಸ್ತುಗಳನ್ನು ಹೊಂದಿದ್ದು ಕೊನೆಯ ಅಂತಸ್ತಿನ ಮೇಲ್ಭಾಗದಲ್ಲಿ ಸುಂದರ ಶಿಖರ, ಅದರ ಮೇಲೆ ಭವ್ಯವಾದ ಕಳಶವನ್ನು ಜೋಡಿಸಲಾಗಿದೆ. ಸಾಲಂಕೃತ ರಥದ ಎತ್ತರ ಸುಮಾರು ೬೦ ಅಡಿಯಾದರೂ ಇರಬಹುದು. ಗಡ್ಡಿಯ ಸ್ವರೂಪವನ್ನು ಹೊಂದಿದ ಈ ದೇವಾಲಯದ ಇನ್ನೊಂದು ರಥ ಚೌಕಾಕಾರದ ಅಡಿಪಾಯವನ್ನು ಹೊಂದಿದ್ದು ೧೦ ಅಡಿ ಎತ್ತರ ಹಾಗೂ ೧ ಅಡಿ ದಪ್ಪವಾದ ಆರು ಬಲಿಷ್ಠ ಚಕ್ರಗಳನ್ನು ದೀರ್ಘಕಾಲ ಬಾಳಿಕೆ ಬರುವ ದಪ್ಪವಾದ ಕಬ್ಬಿಣದ ತೊಲೆಗಳನ್ನು ಚಕ್ರಗಳ ಜೋಡಣೆ ಹಂತದಲ್ಲಿ ಬಳಸಲಾಗಿದ್ದು, ನವೀನ ಪದ್ದತಿಯಿಂದ ಈ ರಥಕ್ಕೆ ತಡೆ (ಬ್ರೇಕ್) ಯನ್ನು ಅಳವಡಿಸಲಾಗಿದೆ. ಬಹುಕೋನ ವಿನ್ಯಾಸದಿಂದ ನಿರ್ಮಾಣಗೊಂಡ ಈ ರಥದ ಗಡಿ ದೇವತಾ ವಿಗ್ರಹವನ್ನುಳ್ಳ ಪಟ್ಟಿಕೆಗಳನ್ನು ಹಾಗೂ ಪೂರ್ಣಾಕಾರದಲ್ಲಿಯ ಮೂರ್ತಿಶಿಲ್ಪ ಹಾಗೂ ಪ್ರಾಣಿ ಶಿಲ್ಪಗಳಿಂದ ಕಂಗೊಳಿಸುತ್ತದೆ.

ಈ ಸ್ಥಿರರಥದ ಮೇಲೆ ಚರರಥದ ಹಂದರವನ್ನು ಪ್ರದೇಶಿಕ ಶೈಲಿಯಿಂದ ಓರಣವಾಗಿ ಕಟ್ಟಿ ರಥದ ಜೀವಾಳವಾದ ಮಂಟಪದ ಭಾಗ ಹಾಗೂ ಅದರ ಮೇಲೆ ಅಂದವಾದ ಗೋಪುರವನ್ನು ನಿರ್ಮಿಸಲಾಗಿದೆ. ಈ ರಥದ ಮಂಟಪದ ಭಾಗ ಸಾಂಪ್ರದಾಯಿಕ ಶೈಲಿಯ ಚಿತ್ರಕಲೆಯಿಂದ ಕೂಡಿದ ಕಮಾನುಗಳನ್ನುಳ್ಳ ನಾಲ್ಕು ದ್ವಾರಗಳನ್ನು ಹೊಂದಿದ್ದು ಆ ದ್ವಾರಗಳ ಎರಡೂ ಬದಿಯಲ್ಲೂ ದ್ವಾರಪಾಲಕ ಗೊಂಬೆಗಳನ್ನು ಪೂರ್ಣಾಕಾರದಲ್ಲಿ ನಿರ್ಮಿಸಿ ಅಲಂಕಾರಿಕವಾಗಿ ಕೂಡಿಸಲಾಗಿದೆ. ಮಂಟಪದ ನಾಲ್ಕೂ ಮೂಲೆಯಲ್ಲಿ ಜಿಗಿಯುವ ಭಂಗಿಯ ಸಿಂಹಗಳನ್ನು ಸಾಂಪ್ರದಾಯಿಕ ಶೈಲಿಯಲ್ಲಿ ನಿರ್ಮಿಸಿ ಸ್ವಲ್ಪ ಓರೆಯಾಗಿ ಕಟ್ಟಲಾಗಿದೆ. ರಥದ ಹೃದಯಭಾಗದಂತಿರುವ ಮಂಟಪದ ಭಾಗ ಕಲಾಸಕ್ತರ ಕಣ್ಮನ ಸೆಳೆಯುವಲ್ಲಿ ಯಶಸ್ವಿಯಾಗಿದೆ.

ಈ ರಥದ ಗೋಪುರವು ವಿಶಿಷ್ಟ ಬಗೆಯಲ್ಲಿ ಪ್ರಾದೇಶಿಕ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಉಳಿದ ಪ್ರದೇಶದ ರಥಗಳ ಗೋಪುರದಂತೆಯೇ ಈ ರಥದಲ್ಲಿ ಪತಾಕೆಗಳನ್ನು ಕಾಣಲಾರದೇ ವಿವಿಧ ಬಣ್ಣಗಳ ಪಟ್ಟಿಯಿಂದ ಕೂಡಿದ ಹೊಸ ಬಟ್ಟೆಯನ್ನು ಗೋಪುರದ ಭಾಗದಲ್ಲಿ ಬಳಸಿ ಕಲಾತ್ಮಕವಾಗಿ ಗೋಪುರವನ್ನು ನಿರ್ಮಿಸಲಾಗಿದೆ. ಈ ಗೋಪುರ ಮೂರು ಹಂತಗಳನ್ನು ಹೊಂದಿದ್ದು ಅದರ ಮೇಲೆ ಶಿಖರವಿದ್ದು ತುದಿಯಲ್ಲಿ ಕಳಶ ಹಾಗೂ ಅದರ ಮೇಲೆ ಅಲಂಕಾರಿಕವಾಗಿ ಛತ್ರಿಯನ್ನು ಜೋಡಿಸಲಾಗಿದೆ. ರಥೋತ್ಸವದ ಸಮಯದಲ್ಲಿ ಹೂಮಾಲೆ ಹಾಗೂ ಬಾಳೆಯ ಗಿಡದಿಂದ ರಥವನ್ನು ಅಡಿಯಿಂದ ಮುಡಿಯ ವರೆಗೂ ಸಿಂಗರಿಸುತ್ತಾರೆ.[೨]

**೭.೨.೨ ಹಂಪಿ ಜಾತ್ರೆಯ ವಿಶೇಷತೆ :**

ಉತ್ತರ ಕರ್ನಾಟಕದಲ್ಲಿನ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ತಲತಲಾಂತರಗಳಿಂದ ಸಾಗಿಬಂದಿರುವ ಅತಿ ಪ್ರಾಚೀನ ಜಾತ್ರೆ-ಉತ್ಸವಗಳಲ್ಲಿ ಹಂಪಿ ವಿರೂಪಾಕ್ಷ ಜಾತ್ರೆ ಹಾಗೂ ಅಲ್ಲಿನ ಆಚರಣೆಗಳು ಬಹು ಪ್ರಮುಖವಾದವುಗಳಾಗಿವೆ. ಪ್ರತಿ ವರ್ಷ ಡಿಸೆಂಬರ್ ತಿಂಗಳಲ್ಲಿ ನಡೆಯುವ ಫಲಪೂಜೆಯ ಆಚರಣೆಯಲ್ಲಿ ಜಾತ್ರೆಯನ್ನು ನಡೆಸುವ ಬಗ್ಗೆ ತೀರ್ಮಾಣ ಕೈಗೊಳ್ಳಲಾಗುವುದು. ಹಂಪಿಯ ಪ್ರಮುಖ ದೈವಗಳಾದ ಪಂಪಾಪತಿ/ವಿರೂಪಾಕ್ಷ, ಪಂಪಾಂಬಿಕೆ, ಹಂಪಮ್ಮ, ದುರ್ಗಿ ಮುಂತಾದ ಹೆಸರುಗಳಿಂದ ಕರೆಯುವ ಪಾರ್ವತಿಯನ್ನು ಕೇಂದ್ರವಾಗಿಟ್ಟುಕೊಂಡು ಈ ಜಾತ್ರೆ-ಉತ್ಸವ ನಡೆಯುತ್ತದೆ. 'ದಕ್ಷಿಣ ಕಾಶಿ' ಎಂದೇ ಪ್ರಸಿದ್ಧಿ ಪಡೆದಿರುವ ಹಂಪಿಯಲ್ಲಿ ಪಂಪಾ ವಿರೂಪಾಕ್ಷ ಸ್ವಾಮಿ ಹಾಗೂ ವಿದ್ಯಾರಣ್ಯ ಪೀಠಾಧಿಪತಿ ಸಹಿತ ಚಂದ್ರಮೌಳೇಶ್ವರ ಸ್ವಾಮಿ ಜೋಡಿ ರಥೋತ್ಸವವು ಭಕ್ತ ಸಾಗರದ ಹರ್ಷೋದ್ಗಾರದ ನಡುವೆ ವೈಭವಯುತವಾಗಿ ನಡೆಯುತ್ತಾ ಬಂದು ನಾಡಿನೆಲ್ಲೆಡೆ ಭಾವೈಕ್ಯತೆಯನ್ನು ಸಾರುತ್ತಿದೆ. ಸಾವಿರಾರು ಭಕ್ತರು ರಥಬೀದಿಯಲ್ಲಿ ಜೋಡಿ ರಥಗಳಿಗೆ ಹೂವು ಹಣ್ಣುಗಳನ್ನು ಶ್ರದ್ಧಾಭಕ್ತಿಯಿಂದ ಎಸೆದು ಧನ್ಯರಾಗುತ್ತಾರೆ. ಹಿಂದೆ ಮಹಾರಾಜರುಗಳಿಂದ ನಡೆಸಲ್ಪಡುತ್ತಿದ್ದ ಈ ರಥೋತ್ಸವವು ಈಗ ಇಲ್ಲಿನ ಸ್ಥಳೀಯ ಮಠಾಧಿಪತಿಗಳು ಹಾಗೂ ಸರ್ಕಾರದ ವತಿಯಿಂದ ನಡೆಸಲ್ಪಡುತ್ತಿದೆ. ಜನಪ್ರಿಯತೆಯ ದೃಷ್ಟಿಯಿಂದ ಈ ಪರಿಸರದ ಮೈಲಾರದ ಜಾತ್ರೆಯನ್ನು ಬಿಟ್ಟರೆ ಇದು ಎರಡನೆಯದು ಎಂದು ಹೇಳಲಾಗುತ್ತದೆ. ಈ ಜಾತ್ರೆಯು ಹಂಪಮ್ಮ-ಪಂಪಾಪತಿಯರ ಕಲ್ಯಾಣದ ಸಂಕೇತವೂ ಆಗಿದೆ. ವಿಜಯನಗರ ಅರಸರ ಕಾಲದಿಂದಲೂ ನಡೆಸಿಕೊಂಡು ಬಂದಿರುವ ಈ ಜಾತ್ರೆಯನ್ನು ಅನೇಕ ಪಾಶ್ಚಾತ್ಯ ಪ್ರವಾಸಿಗರು ತಮ್ಮ ದಿನಚರಿಯಲ್ಲಿ ಉತ್ಸಾಹದಿಂದ ದಾಖಲಿಸಿದ್ದಾರೆ. ಹಂಪಿಯ ಪಂಪಾಪತಿಯ ಜಾತ್ರೆಯನ್ನು ಕಣ್ಣಾರೆ ಕಂಡ ನಿಕೋಲೋ ಕೋಂಟಿ ಹೀಗೆ ಉಲ್ಲೇಕಿಸಿದ್ದಾನೆ "ವರ್ಷಕ್ಕೊಮ್ಮೆ ದೇವರ (ವಿರೂಪಾಕ್ಷ ದೇವರು) ವಿಗ್ರಹವನ್ನು ಎರಡು ರಥಗಳ ಮಧ್ಯೆ ಇಟ್ಟು ಮೆರವಣಿಗೆ ಮಾಡುತ್ತಾರೆ. ಈ ರಥಗಳಲ್ಲಿ ಸರ್ವಾಲಂಕೃತ ಗಾಯಕಿಯರು ದೇವರ ಭಜನೆ ಮಾಡುತ್ತಿರುತ್ತಾರೆ. ಜನಗಳ ಗುಂಪು ವಿಗ್ರಹವನ್ನು ಹಿಂಬಾಲಿಸಿಕೊಂಡು ಹೋಗುತ್ತದೆ. ವಿಶೇಷ ಭಕ್ತಿ ಇರುವ ಅನೇಕರು ರಥದ ಚಕ್ರಕ್ಕೆ ಮೈಯೊಡ್ಡಿ ಪ್ರಾಣತ್ಯಾಗ ಮಾಡುತ್ತಾರೆ. ಮತ್ತೆ ಕೆಲವರು ತಮ್ಮ ಪಕ್ಕೆಯಲ್ಲಿ ತೂತು ಮಾಡಿ ಅದರಲ್ಲಿ ಹಗ್ಗವನ್ನು ಪೋಣಿಸಿ ರಥಕ್ಕೆ ಅಂಲಕಾರಿಕವಾಗಿ ತೂಗುಹಾಕಿಕೊಳ್ಳುತ್ತಾರೆ. ಈ ತರಹದ

ಬಲಿದಾನ ಎಲ್ಲಾ ತರಹದ ಬಲಿದಾನಕ್ಕಿಂತ ಉತ್ಕೃಷ್ಟವೆಂದು ಭಾವಿಸುತ್ತಾರೆ. ಈಗ ಇಂತಹ ಬಲಿದಾನಗಳಿಲ್ಲವಾದರೂ ದೇಹದಾನದ ಬದಲು ತೆಂಗಿನಕಾಯಿಯನ್ನು ಬಲಿ ನೀಡಲಾಗುತ್ತಿದೆ.[೨]

ಹಂಪಿಯ ಬ್ರಹ್ಮ ರಥೋತ್ಸವದ ದಿನದಂದು ವಿರೂಪಾಕ್ಷ ಸ್ವಾಮಿ ದೇವಾಲಯ ಆಡಳಿತ ಮಂಡಳಿಯವರು ವಿದ್ಯಾರಣ್ಯ ಮಠಕ್ಕೆ ತೆರಳಿ ವಿದ್ಯಾರಣ್ಯಭಾರತಿ ಸ್ವಾಮೀಜಿಯವರನ್ನು ಮಧ್ಯಾಹ್ನ ನಾಲ್ಕು ಗಂಟೆಯ ಸುಮಾರಿಗೆ ಮೆರವಣಿಗೆಯ ಮೂಲಕ ಕರೆತರಲಾಗುತ್ತದೆ. ಈ ಸ್ವಾಮೀಜಿಗಳು ೧೨ನೇ ಶತಮಾನದಲ್ಲಿ ಹೈದ್ರಾಬಾದ್ ನಿಜಾಮ ವಿದ್ಯಾರಣ್ಯ ಗುರುಗಳನ್ನು ರಾಜಗುರುಗಳೆಂದು ಒಪ್ಪಿಕೊಂಡು ಪುರಸ್ಕರಿಸಿದ ದ್ಯೋತಕವಾಗಿ ನೀಡಿರುವ ಹಸಿರು ಷೇರವಾನಿ, ಚಿತ್ತಾರದ ಬೆಳ್ಳಿ ಜರಿ ಇರುವ ಇಸ್ಲಾಂ ಶೈಲಿಯ ಟೋಪಿ ಧರಿಸಿ ಬೆಳ್ಳಿ ಬೆತ್ತವನ್ನು ಹಿಡಿದು ಮೆರವಣಿಗೆಯಲ್ಲಿ ರಥೋತ್ಸವ ನಡೆಯುವ ಸ್ಥಳಕ್ಕೆ ಆಗಮಿಸಿ ರಥವೇರಿ ಆಸೀನರಾಗುತ್ತರೆ. ಮೊದಲು ಪಂಪಾವಿರೂಪಾಕ್ಷ ಹಾಗೂ ಪಂಪಾಂಬಿಕೆ ಇರುವ ೧೧೦ ಅಡಿಯ ದೊಡ್ಡ ರಥವನ್ನು ಭಕ್ತ ಜನತೆ ಎಳೆದು ಸಂಭ್ರಮಿಸಿ ನಂತರ ವಿದ್ಯಾರಣ್ಯ ಭಾರತೀ ಸ್ವಾಮೀಜಿ ಸಹಿತ ಚಂದ್ರಮೌಳೇಶ್ವರ ಸ್ವಾಮಿ ರಥೋತ್ಸವ ಜರುಗುವುದು.

ಇದಕ್ಕೂ ಪೂರ್ವದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಿದ್ದ ಬುಕ್ಕರಾಯನು ವಿದ್ಯಾರಣ್ಯರಿಗೆ ಸಮರ್ಪಿಸಿದ್ದ ರತ್ನಖಚಿತ ಸುವರ್ಣ ಕಿರೀಟವನ್ನು ಈಗಿನ ವಿದ್ಯಾರಣ್ಯ ಪೀಠಾಧಿಪತಿ ವಿದ್ಯಾರಣ್ಯ ಭಾರತೀ ಸ್ವಾಮೀಜಿಗೆ ಆನೆಗೊಂದಿಯ ರಾಜವಂಶಸ್ಥರು ತೊಡಿಸಿ ಬೆಳಗ್ಗೆ ೧೧ ಗಂಟೆಯ ಹೊತ್ತಿಗೆ ದೇವಾಲಯಕ್ಕೆ ಮೆರವಣಿಗೆಯಲ್ಲಿ ಕರೆತರಲಾಗುತ್ತದೆ. ತಮ್ಮ ರಥೋತ್ಸವ ನಡೆಸಲು ವಿದ್ಯಾರಣ್ಯರು ಒಪ್ಪದ ಕಾರಣ ಅವರ ಆಣತಿಯಂತೆ ಚಂದ್ರಮೌಳೇಶ್ವರ ದೇವರನ್ನು ರಥದಲ್ಲಿ ಪ್ರತಿಷ್ಠಾಪಿಸಿ ನಂತರ ರಥವೇರಿ ಕುಳಿತ ವಿದ್ಯಾರಣ್ಯರ ಸಂಪ್ರದಾಯದಂತೆ ಚಂದ್ರಮೌಳೇಶ್ವರ ದೇವರು ರಥವೇರಿದ ನಂತರ ಸ್ವಾಮಿಗಳು ರಥದಲ್ಲಿ ಆಸೀನರಾಗುತ್ತಾರೆ. ಬೆಳಗ್ಗೆ ೧೧ ಗಂಟೆಯ ಸುಮಾರಿಗೆ ಎರಡೂ ರಥಗಳನ್ನು ೫ ಹೆಜ್ಜೆ ಎಳೆದು ಬ್ರಹ್ಮರಥೋತ್ಸವ ಆಚರಿಸಲಾಗುತ್ತದೆ. ಹಂಪಿಯ ರಥಗಳನ್ನು ಎಳೆಯುವ ಜವಾಬ್ದಾರಿ ಹೊಸಪೇಟೆ ಹಾಗೂ ಕಮಲಾಪುರದ ನಾಯಕ ಸಮಾಜವು ಮೊದಲಿನಿಂದಲೂ ಉಳಿಸಿಕೊಂಡು ಬಂದಿದೆ. ಈ ಸಮುದಾಯವೇ ಈ ರಥವನ್ನು ಇವತ್ತಿಗೂ ಎಳೆಯುತ್ತಿರುವುದು ವಿಶೇಷ. ಹಂಪಿ ಜಾತ್ರೆಯ ಹಿನ್ನೆಲೆಯಲ್ಲಿ ಹೊಸಪೇಟೆ, ಕಮಲಾಪುರದ ನಾಯಕ ಸಮುದಾಯ ಬಂಡಿಗಳಲ್ಲಿ ಎರಡು ದಿನ ಮುಂಚೆಯೇ ಹಂಪಿಯಲ್ಲಿ ಠಿಕಾಣಿ ಹೂಡಿ ರಥೋತ್ಸವ ಮುಗಿದ ನಂತರ ಕರಿ ಆಚರಿಸುತ್ತಾರೆ. ಕರಿ ಎಂದರೆ ತೇರು ಎಳೆಯುತ್ತಿದ್ದಂತೆ ಗುಡ್ಡಗಳಲ್ಲಿ, ಮಂಟಪಗಳಲ್ಲಿ, ನದೀ ತೀರದಲ್ಲಿ ಬೀಡು ಬಿಟ್ಟಿರುವ ನಾಯಕ ಸಮಾಜದವರು ಕುರಿ ಕಡಿದು ಮಾಂಸದ ಅಡುಗೆ ಊಟ ಮಾಡುತ್ತಾರೆ. ಮರುದಿನವೂ ಈ ಸಮಾರಾಧನೆ ಮುಂದುವರೆಯುತ್ತದೆ. ಆ ನಂತರ ಇವರುಗಳನ್ನು ಗೌರವಾದರಗಳೊಂದಿಗೆ ಅವರ ಸ್ಥಳಗಳಿಗೆ ಕಳುಹಿಸಿಕೊಡುವ ಸಂಪ್ರದಾಯವಿದೆ. ಈ ಜಾತ್ರೆಯ ಸಂದರ್ಭದಲ್ಲಿ ಹಂಪಿಯ ವಿರೂಪಾಕ್ಷ ಬಜಾರದ ಸಾಲು ಮಳಿಗೆಗಳ ಮುಂಭಾಗದಲ್ಲಿ ಬಳೆ, ಕುಂಕುಮ, ಹಣ್ಣು–ಕಾಯಿ, ಆಟಿಕೆ, ಸಿಹಿ ತಿಂಡಿಯ ಅಂಗಡಿಗಳು ಸಾಲುಗಟ್ಟಿರುತ್ತವೆ. ಇವು ಜಾತ್ರೆಯ ದಿನಗಳಲ್ಲಿ ಮಾತ್ರ ಇರುವಂತಹ ಸಂಚಾರಿ ವ್ಯಾಪಾರಿ ಸಮೂಹದ ಅಂಗಡಿಗಳಾಗಿರುತ್ತವೆ. ಅಂತೆಯೇ ಈ ಜಾತ್ರೆ ಉತ್ಸವದಲ್ಲಿ ಸುತ್ತಮುತ್ತಲಿನ ಎಲ್ಲಾ ಜಾತಿ–ಧರ್ಮಗಳ ಭಕ್ತ ಸಮೂಹ ಪಾಲ್ಗೊಳ್ಳುವುದು ವಿಶೇಷ.[೯]

**೭.೨.೩ ಜಾತ್ರೆ ಸಂದರ್ಭದ ವಿಶೇಷ ಆಚರಣೆಗಳು :**

ಇಲ್ಲಿನ ಜಾತ್ರೆ ಸಂದರ್ಭದಲ್ಲಿ ನಡೆಯುವ ಆಚರಣೆಗಳನ್ನು ಪ್ರಮುಖವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು.

೧. ದೇವಾಲಯದಲ್ಲಿ ನಡೆಯುವ ಆಚರಣೆಗಳು

೨. ಭಕ್ತಾದಿಗಳು ದೇವರ ಹೆಸರಿನಲ್ಲಿ ಹೊರಗೆ ನಡೆಸುವ ಆಚರಣೆಳು.

**೧. ದೇವಾಲಯದಲ್ಲಿ ನಡೆಯುವ ಆಚರಣೆಗಳು :**

ದೇವಾಲಯದಲ್ಲಿ ಜಾತ್ರೆಯ ದಿನದಂದು ನಡೆಯುವ ಪ್ರಮುಖ ಆಚರಣೆಯಲ್ಲಿ ಹಂಪಮ್ಮ ಮತ್ತು ಪಂಪಾಪತಿಯರ ಮದುವೆ ಆಚರಣೆ ಪ್ರಮುಖವಾದುದಾಗಿದೆ. ಸಮಾನ್ಯವಾಗಿ ಮನುಷ್ಯರ ವಿವಾಹ ವಿಧಿಬದ್ಧ ಆಚರಣೆಯಲ್ಲಿನ ಎಲ್ಲಾ ಕ್ರಮಗಳನ್ನು ಇಲ್ಲಿ ನಡೆಸಲಾಗುತ್ತದೆ. ದೇವಾಲಯದ ಒಳ ಆವರಣದಲ್ಲಿ ಕಂಡುಬರುವ ಕಲ್ಯಾಣ ಮಂಟಪದಲ್ಲಿ ಗಂಡು-ಹೆಣ್ಣುಗಳ ಕಡೆಯವರೆಂದು ವರ್ಗೀಕರಿಸಿಕೊಂಡು ಎರಡು ಪುರೋಹಿತ ತಂಡಗಳು ಪಂಪಾಪತಿ-ಹಂಪಮ್ಮರ ವಿವಾಹ ಆಚರಣೆಯ ಕಾರ್ಯಕ್ರಮ ನಡೆಸುತ್ತಾರೆ. ನಂತರ ತೂಗು ಮಂಟಪದಲ್ಲಿ ಇಬ್ಬರನ್ನು ತೂಗುವುದು ಹಾಗೆಯೇ ಅಂದು ಸಂಜೆ ೪.೦೦ ಗಂಟೆಗೆ ಸುಮುಹೂರ್ತ ಗೊತ್ತುಮಾಡಿ ರಥದಮೇಲೆ ಕುಳ್ಳಿರಿಸಿ ರಥೋತ್ಸವ ನಡೆಸುತ್ತಾರೆ. ಈ ರಥೋತ್ಸವವನ್ನು ಗಂಡು ಹೆಣ್ಣುಗಳ ಮೆರವಣಿಗೆಯ ಸಂಕೇತವೆಂದು ಇಲ್ಲಿನ ಜನತೆಯ ಅಭಿಪ್ರಾಯವಾಗಿದೆ. ಈ ವೇಳೆಯಲ್ಲಿ ಭಕ್ತ ಸಮೂಹ ಹಣ್ಣು, ಹೂ, ಪತ್ರೆಯನ್ನು ರಥಕ್ಕೆ ಅರ್ಪಿಸಿ ಕೃತಾರ್ಥರಾಗುತ್ತಾರೆ. ಇದು ಇವರಿಗೆ ಭಕ್ತರು ಎಸೆಯುವ ಶಾಸ್ತ್ರದ ಅಕ್ಕಿ (ಅಕ್ಷತೆ) ಎಂಬ ನಂಬಿಕೆ ಕಂಡುಬರುತ್ತದೆ. ನಂತರ ಅಂದು ರಾತ್ರಿ ಹಂಪಮ್ಮ-ಪಂಪಾಪತಿಯ ವಿಗ್ರಹಗಳನ್ನು ಭಕ್ತರ ದರ್ಶನಕ್ಕಾಗಿ ಇಡಲಾಗುತ್ತದೆ. ಅಂದು ರಾತ್ರಿ ಸುಮಾರು ೯.೦೦ ಗಂಟೆಯ ವೇಳೆಗೆ ಎರಡೂ ವಿಗ್ರಹಗಳನ್ನು ದೇವರ ಶಯನಗೃಹದಲ್ಲಿ ಜೊತೆ ಸೇರಿಸಿ ಇಡಲಾಗುತ್ತದೆ. ಇದನ್ನು ಪ್ರಸ್ತದ ಸಂಕೇತವೆಂದು ಹೇಳಲಾಗುತ್ತದೆ. ಹೀಗೆ ದೇವಾಲಯದಲ್ಲಿ ಜಾತ್ರೆಯ ಆಚರಣೆಗಳು ಕ್ರಮಬದ್ಧವಾಗಿ ನಡೆಯುತ್ತವೆ.

**೨. ಭಕ್ತಾದಿಗಳು ದೇವರ ಹೆಸರಿನಲ್ಲಿ ಹೊರಗೆ ನಡೆಸುವ ಆಚರಣೆಗಳು :**

ಭಕ್ತಾದಿಗಳು ಜಾತ್ರೆಯ ಸಂದರ್ಭದಲ್ಲಿ ದೇವರ ಹೆಸರಿನಲ್ಲಿ ಹೊರಗೆ ಅನೇಕ ಹರಕೆಯ ಪೂಜಾ ಆಚರಣೆಗಳನ್ನು ನಡೆಸುತ್ತಾರೆ. ಇವುಗಳಲ್ಲಿ ಬೆಳ್ಳಿ ಬಸವನ ಮೆರವಣಿಗೆ, ದಾಸೋಹ, ಮುಡಿ ಹರಕೆ, ತೊಟ್ಟಿಲು, ಛತ್ರಪಲ್ಲಕ್ಕಿ ಇತ್ಯಾದಿಗಳು ಬಹುಮುಖ್ಯವಾಗಿ ಕಂಡುಬರುತ್ತವೆ. ಲಿಂಗಭೇದವಿಲ್ಲದೇ ಭಕ್ತ ಜನತೆ ತಮ್ಮ ತಲೆಕೂದಲನ್ನು ಮುಡಿಹರಕೆ ಎಂದು ಸಲ್ಲಿಸುತ್ತಾರೆ. ಈ ಎಲ್ಲಾ ಆಚರಣೆಗಳು ಸಹ ಸಾಮಾನ್ಯವಾಗಿ ತುಂಗಭದ್ರಾ ತೀರದಲ್ಲಿರುವ ಚಕ್ರತೀರ್ಥದ ಕೋದಂಡರಾಮಸ್ವಾಮಿಯ ದೇವಾಲಯದ ಎದುರಲ್ಲಿ ನಡೆಯುತ್ತವೆ. ಅಂತೆಯೇ ತಮ್ಮ ಇಷ್ಟಾರ್ಥ ಸಿದ್ಧಿಯಾದವರು ಜಾತ್ರೆಯ ದಿವಸ ಹರಕೆಯನ್ನು ಒಪ್ಪಿಸುತ್ತಾರೆ. ಈ ಜಾತ್ರಾ ಸಂದರ್ಭದಲ್ಲಿ ಕಂಡುಬರುವ ಪ್ರಮುಖ ಹರಕೆಗಳೆಂದರೆ ಉರುಳುಸೇವೆ, ಹೆಜ್ಜೆ ನಮಸ್ಕಾರ, ರಥದ ಗಾಲಿಯ ಮೇಲೆ ತೆಂಗಿನ ಕಾಯಿ ಒಡೆಸುವುದು, ಮುಡಿ ಕೊಡುವುದು, ಚಿನ್ನಬೆಳ್ಳಿಯ ಆಭರಣಗಳನ್ನು ಹರಕೆ ರೂಪದಲ್ಲಿ ಕೊಡುವುದು, ಮಡಿ ವಸ್ತ್ರ ನೀಡುವುದು, ದೀಪೋತ್ಸವ, ಬಸವನ ಮೆರವಣಿಗೆ, ಪಲ್ಲಕ್ಕಿ ಸೇವೆ ಮಾಡುವುದು ಮುಂತಾದವುಗಳು. ಅಂತೆಯೇ ಈ ಜಾತ್ರೆಯ ಸಂದರ್ಭದಲ್ಲಿ

ಅನೇಕ ಜನಪದ ಕಲಾ ತಂಡಗಳು ಇಲ್ಲಿಗೆ ಬರುತ್ತವೆ. ಅವುಗಳೆಂದರೆ ಚೌಡಿಕೆ ಮೇಳ, ಕೋಲಾಟ, ನಂದಿ ಧ್ವಜ ಕುಣಿತ, ಭಜನೆ ಮೇಳ, ಗೀಗೀ ಮೇಳ, ತಪ್ಪಡಿ ಮೇಳ, ಡೊಳ್ಳು ಮೇಳ, ತತ್ವ ಪದ ಹೇಳುವವರು, ಕಾಡುಸಿದ್ದರು, ಲಂಬಾಣಿ ಕುಣಿತ ಇತ್ಯಾದಿ ಜನಪದ ಕಲಾತಂಡಗಳು ದೇವಾಲಯದ ಒಳ ಅಂಗಣದಲ್ಲಿ ಹೊರಗೆ ಮಂಟಪಗಳಲ್ಲಿ ಇಡೀ ರಾತ್ರಿ ಹಾಡು ಕುಣಿತಗಳಿಂದ ಜನರಿಗೆ ಸಂತೋಷ ಮನೋರಂಜನೆ ನೀಡುತ್ತಾರೆ. ಇಲ್ಲಿ ಬರುವ ಅನೇಕ ಕಲಾ ತಂಡಗಳು ಪ್ರತಿವರ್ಷ ದೇವರ ಸೇವೆಗಂದೇ ಬರುತ್ತವೆ. ಬಹಳ ಹಿಂದಿನ ಕಾಲದಿಂದಲೂ ಈ ಕಲಾಕಾರರ ತಂಡವು ಇಲ್ಲಿಗೆ ಬಂದು ತಮ್ಮ ಕಲೆ ಪ್ರದರ್ಶಿಸಿ ಸೇವೆಗಯ್ಯುವ ವಾಡಿಕೆ ಇದೆ.[೫]

ವಿಜಯನಗರ ಹಾಗೂ ಕೆಳದಿ ರಾಜಕೀಯವಾಗಿ ವಿಶೇಷ ಸಂಬಂಧ ಹೊಂದಿದ್ದು ವಿಜಯನಗರದ ಆಡಳಿತ ಸಾಮಾಜಿಕ, ಸಾಂಸ್ಕೃತಿಕ ವ್ಯವಸ್ಥೆಯೇ ಕೆಳದಿ ಅರಸರ ಕಾಲದಲ್ಲಿಯೂ ಮುಂದುವರೆದು ಬಂದಿತು. ಈ ದಿಸೆಯಲ್ಲಿ ಹಂಪಿ ಜಾತ್ರೆಗೆ ಕೆಳದಿ ಅರಸರು ಹಾಕಿಸಿದ ದಾನಶಾಸನ ಇಂತಿದೆ. ಕ್ರಿ.ಶ. ೧೭೦೮ ರಲ್ಲಿ ಬಸವಪ್ಪನಾಯಕನ ಕಾಲದಲ್ಲಿ ಬೊಕ್ಕಸದ ಸಿದ್ದಬಸವಯ್ಯನು ಹಂಪಿಯಲ್ಲಿ ನಡೆಸುವ ಧರ್ಮದ ಬಗ್ಗೆ ಇದು ಕೊಡಲ್ಪಟ್ಟದ್ದಾಗಿದೆ. ಈ ಭೂದಾನದ ಬಗ್ಗೆ ಈಗಾಗಲೇ ಮಹತ್ತಿಗೆ ಹಣವನ್ನು ಪಾವತಿಸಿದ್ದರೂ ಅದನ್ನು ಇನ್ನೂ ಪಾವತಿಸಿರುವುದಿಲ್ಲವೆಂದು ಸಿದ್ದಬಸವಯ್ಯನು ಹೇಳಿಕೊಂಡ ಸಂಬಂಧ ಅದನ್ನು ಮರಿಯಪ್ಪನವರು ಮಹತ್ತಿನ ಗಮನಕ್ಕೆ ತಂದು ಮಹತ್ತಿನಿಂದ ಶಾಸನ ಬರೆಸಿಕೊಟ್ಟದ್ದಾಗಿದೆ. ಒಟ್ಟು ೧೨ ವರಹನ ಸ್ವಾಸ್ಥೆಯು ಹಂಪಿ ಜಾತ್ರೆಯಲ್ಲಿ ಮಹತ್ತಿನವರೆಗೆ ನಡೆಸುವ ಧರ್ಮಕ್ಕೆ ಶಿವಾರ್ಪಿತವಾಗಿ ಬಿಟ್ಟದ್ದು ಇದಾಗಿದೆ. ಸ್ವಾಮಿ ಕಣ್ಣುಪಿಳ್ಳೆಯವರ ಪ್ರಕಾರ ಶಾಸನದ ಕಾಲದ ದಿನಾಂಕ ೨೬-೦೧-೧೭೦೮ ಸೋಮವಾರವಾಗುತ್ತದೆ.[೬]

**೭.೩ ಪ್ರಸನ್ನ ಪಂಪಾವಿರೂಪಾಕ್ಷ ದೇವಾಲಯದ ಜಾತ್ರಾ ಉತ್ಸವ – ಹಿರೇಜಂತಕಲ್.**

ಹಿರೇಜಂತಕಲ್ ಪ್ರಸನ್ನ ಶ್ರೀ ಪಂಪಾವಿರೂಪಾಕ್ಷೇಶ್ವರನ ಜಾತ್ರಾ ರಥೋತ್ಸವದ ವಿಶೇಷ ಉತ್ಸವ ಆಚರಣೆಗಳು ಮಾಘ ಶುದ್ಧ ಪ್ರತಿಪದದಿಂದ ದಶಮಿಯ ವರೆಗೆ ಜರುಗುವವು. ಈ ದೇವಾಲಯದಲ್ಲಿ ನಡೆಯುವ ಪೂಜಾ ವಿಧಿ ವಿಧಾನಗಳು ಆಗಮ ಶಾಸ್ತ್ರಾನುಸಾರ ನಡೆಯುವವು. ಮಾಘ ಮಾಸದ ಪ್ರತಿಪದ ದಿನ ಬೆಳಗ್ಗೆ ಪುಣ್ಯ ಹವಚನ, ಕಂಕಣ ಬಂಧನ, ಧ್ವಜಾರೋಹಣ, ದೇವತಾ ಸ್ಥಾಪನೆ (ನವಗ್ರಹ ದೇವತಾ, ಅಂಕುರಾರ್ಪಣ, ಮುಖ್ಯದೇವತಾ) ಇತ್ಯಾದಿ ಧಾರ್ಮಿಕ ವಿಧಿ ವಿಧಾನಗಳನ್ನು ಕೈಗೊಳ್ಳಲಾಗುವುದು. ಹಾಗೆಯೇ ಈ ಸಂದರ್ಭದಲ್ಲಿ ಪ್ರತಿನಿತ್ಯ ವಿಶೇಷ ಪೂಜೆ, ಹೋಮ ಹವನಾದಿ ಆಚರಣೆಗಳನ್ನು, ಅನ್ನದ ಬಲಿ, ಬಲಿ ಹರಣ ಉತ್ಸವಗಳನ್ನು ನೆರವೇರಿಸಲಾಗುವುದು. ಬಳಿಕ ಸಾಯಂಕಾಲ ಸಮಯದಲ್ಲಿ ಅಷ್ಟಾವಧಾನ ಉತ್ಸವ ಮತ್ತು ಮಹಾಮಂಗಳಾರತಿ ಜರುಗುವವು.

**ಜಾತ್ರಾ ಸಂದರ್ಭದ ವಿಶೇಷತೆಗಳು :**

**ಪಂಚಮಿ ದಿನ :** ಜಾತ್ರಾ ಮಹೋತ್ಸವದ ಪಂಚಮಿ ದಿನದಂದು ಪಂಪಾಪತಿ ಮತ್ತು ಪಾರ್ವತಿ ದೇವಿಯರ ಕಲ್ಯಾಣೋತ್ಸವ ಜರುಗುವುದು.

**ಸಪ್ತಮಿ ದಿನ :** ಮಾಘ ಮಾಸದ ಶುದ್ಧ ರಥಸಪ್ತಮಿ ದಿನದಂದು ಪಂಪಾವಿರೂಪಾಕ್ಷೇಶ್ವರನ ಬ್ರಹ್ಮರಥೋತ್ಸವ/ಮಹಾರಥೋತ್ಸವ ಮಧ್ಯಾಹ್ನ ೧.೦೦ ಗಂಟೆಗೆ ಮತ್ತು ಸಾಯಂಕಾಲ ೫.೦೦ ಗಂಟೆಗೆ ಸಹಸ್ರಾರು ಭಕ್ತರ ಸಮ್ಮುಖದಲ್ಲಿ ಅತ್ಯಂತ ವಿಜೃಂಭಣೆಯಿಂದ ನೆರವೇರುವುದು.

**ನವಮಿ ದಿನ :** ಜಾತ್ರಾ ಮಹೋತ್ಸವ ಆಚರಣೆಯ ನವಮಿ ದಿನದಂದು ನಿತ್ಯ ಹೋಮ ಸಾಂಗತವಾಗಿ ಪೂರ್ಣಾಹುತಿಯೊಂದಿಗೆ ಕಂಕಣ ವಿಸರ್ಜನೆ ಕೈಗೊಳ್ಳಲಾಗುವುದು.

### ೭.೪ ಪಂಪಾಪತಿ ದೇವಾಲಯದ ರಥೋತ್ಸವ – ಬೆಣ್ಣೆಹಳ್ಳಿ

ಹಂಪಿಯ ವಿರೂಪಾಕ್ಷ ರಥೋತ್ಸವದ ದಿನವೇ ಬೆಣ್ಣೆಹಳ್ಳಿಯಲ್ಲಿ ಶ್ರೀ ಪಂಪಾಪತಿ ಮತ್ತು ಪಂಪಾಂಬಿಕೆಯ ಜೋಡಿ ರಥೋತ್ಸವ ಜರುಗುವುದು ಅತ್ಯಂತ ವಿಶೇಷವಾದ ಅಂಶವಾಗಿದೆ. ಅಂತೆಯೇ ಉಳಿದಂತೆ ಎಲ್ಲಾ ಉತ್ಸವಾದಿ ಕಾರ್ಯಕ್ರಮಗಳು ಹಂಪಿಯಲ್ಲಿ ಕೈಗೊಳ್ಳುವ ರೀತಿಯಲ್ಲಿಯೇ ಜರುಗುವುವು. ಹಂಪಿಹುಣ್ಣಿಮೆಯ ದಿನ ಬೆಳಗ್ಗೆ ವಿಶೇಷ ಕಾರ್ಯಕ್ರಮಗಳು ನಡೆಯುತ್ತಿದ್ದು ದೇವಾಲಯದ ಸಭಾ ಮಂಟಪದಲ್ಲಿ ಶ್ರೀ ಪಂಪಾಪತಿ ಮತ್ತು ಪಂಪಾಂಬಿಕೆಯರ ವಿವಾಹ ಕಾರ್ಯ ಜರುಗುವುದು. ಬಳಿಕ ಸಾಯಂಕಾಲ ಇಬ್ಬರ ಉತ್ಸವ ಮೂರ್ತಿಗಳೊಂದಿಗೆ ಸಾಕಷ್ಟು ಭಕ್ತರ ಸಮಕ್ಷಮದಲ್ಲಿ ವಿಜೃಂಭಣೆಯಿಂದ ರಥೋತ್ಸವ ನೆರವೇರುವುದು. ರಥೋತ್ಸವದ ಮರುದಿನ ಬಸವಣ್ಣನ ಗುಡಿಯ ಮುಂದೆ ಹೋಳಿ (ಓಕುಳಿ) ಆಡುವುದು ವಿಶೇಷ ಸಂಗತಿ.

ಅಂತೆಯೇ ಈ ಪರಿಸರದ ಕಂಪ್ಲಿಕೋಟೆ ಮತ್ತು ಕುರೇಕುಪ್ಪಿ ಪಂಪಾಪತಿ ದೇವಾಲಯಗಳಲ್ಲಿಯೂ ಜಾತ್ರ ಉತ್ಸವ ನಡೆಯುತ್ತವೆ.[೭]

ಅಡಿಟಿಪ್ಪಣಿ :

೧. ಕಣ್ಣನ್, ೨೦೦೫; ಅಹೋಬಲಕವಿ ವಿರಚಿತ "ವಿರೂಪಾಕ್ಷ ವಸಂತೋತ್ಸವ ಚಂಪೂ", ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ದೃವರಾಜ .ನಾ. ಗದಗಕರ್, ದೇಗುಲ ರಥಶಿಲ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಪುರುಷೋತ್ತಮ ಬಿಳಿಮಲೆ, ಚಲುವರಾಜು, ೧೯೯೬; ಹಂಪಿ ಜಾನಪದ, ಕ.ವಿ.ವಿ., ಹಂಪಿ.

೪. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿ.

೫. ಪುರುಷೋತ್ತಮ ಬಿಳಿಮಲೆ, ಚಲುವರಾಜು, ೧೯೯೬; ಹಂಪಿ ಜಾನಪದ, ಕ.ವಿ.ವಿ., ಹಂಪಿ.

೬. ಕೆಳದಿ ವೆಂಕಟೇಶ ಜೋಯಿಸ್, ೨೦೦೧; "ಹಂಪೆ ಜಾತ್ರೆಗೆ ಕೆಳದಿ ಅರಸರು ಹಾಕಿಸಿದ ದಾನಶಾಸನ" ವಿಜಯನಗರ ಅಧ್ಯಯನ ಸಂ.೮.

೭. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿ.

## ಅಧ್ಯಾಯ - ೮

**ಸಮಾರೋಪ :**

ಭಾರತವು ಧರ್ಮ ಪ್ರಧಾನವಾದ ದೇಶವಾಗಿದೆ. ಇಲ್ಲಿ ಬಹು ಪ್ರಾಚೀನ ಕಾಲದಿಂದಲೂ ನಂಬಿಕೆ, ಆರಾಧನೆಗಳು ಬೆಳೆದು ಬಂದಿವೆ. ಭಾರತದ ಮೂಲ ನಿವಾಸಿಗಳಾದ ದ್ರಾವಿಡರು ಲಿಂಗ ರೂಪದ ಶಿವನನ್ನು ಆರಾಧಿಸುತ್ತಿದ್ದರೆಂದು, ಹಾಗಾಗಿ ಅವನು ದ್ರಾವಿಡ ದೇವತೆಯೆಂದು ನಂಬಲಾಗಿದೆ. ಆರ್ಯರ ಪ್ರವೇಶದ ನಂತರ ಅವರ ದೇವತೆಗಳಲ್ಲಿ ಇಂದ್ರ, ರುದ್ರರ ಉಲ್ಲೇಖಗಳಿದ್ದರೂ ರುದ್ರ ಪ್ರಧಾನನಾಗಿರಲಿಲ್ಲ. ಆದರೆ ಉತ್ತರ ವೇದ ಕಾಲದ ಹೊತ್ತಿಗೆ ಧರ್ಮಗಳು ಶಿಷ್ಟ ರೂಪ ಪಡೆದುಕೊಂಡು ವಿಷ್ಣು ಆರ್ಯರ ಪ್ರಧಾನ ದೇವತೆಯಾದ. ಅಂತೆಯೇ ಕ್ರಮೇಣ ಆಗ ಆರ್ಯ ಸಂಸ್ಕೃತಿಯ ವಿಸ್ತರಣೆಯ ಸಂದರ್ಭದಲ್ಲಿ ಆರ್ಯರ ರುದ್ರನು ದ್ರಾವಿಡರ ದೇವತೆಗೆ ಅಭಿದಾನಗೊಂಡನೆಂದು ತೋರುತ್ತದೆ. ಪರಿಣಾಮವಾಗಿ ರುದ್ರ ಶಿವನಾಗಿ ದ್ರಾವಿಡರಲ್ಲಿ ಜನಪ್ರಿಯಗೊಳ್ಳುತ್ತಾನೆ. ಕ್ರಮೇಣ ವಿಷ್ಣು ಪ್ರಧಾನವಾದ ವೈಷ್ಣವ ಮತ್ತು ಶಿವ ಪ್ರಧಾನವಾದ ಶೈವ ಅರಾಧನಾ ಪಂಥಗಳು ಉತ್ತರದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಉತ್ತರಕ್ಕೆ ವ್ಯಾಪಿಸಿ ನಿಂತವು. ವಿಷ್ಣು ಮತ್ತು ಶಿವ ಈ ದೇಶದ ಎರಡು ಪ್ರಧಾನ ದೇವತೆಗಳಾದವು. ಆರಾಧನೆ ವಿಸ್ತೃತಗೊಳ್ಳಲಾರಂಭಿಸಿತು. ಅನೇಕ ದೇವಾಲಯಗಳು ಸ್ಥಾಪಿತಗೊಂಡವು. ಪರಿವಾರ ದೇವತೆಗಳು ಪ್ರಾಧಾನ್ಯತೆಗೊಂಡವು.

ಶೈವ ಧರ್ಮ ಕಾಶ್ಮೀರ, ಕಾಳಾಮುಖ, ಪಾಶುಪತ, ಲಾಕುಳೀಶ ಮತ್ತು ವೀರಶೈವ ಮುಂತಾದ ಪಂಗಡಗಳಲ್ಲಿ ಕವಲೊಡೆದು ನಿಂತಿತು. ಶಿವನನ್ನು ಶಂಕರ, ರುದ್ರ, ಚಂದ್ರಶೇಖರ, ತ್ರಯಂಬಕೇಶ್ವರ, ಭೀಮಾಶಂಕರ, ಮಲ್ಲಿಕಾರ್ಜುನ, ವಿಶ್ವೇಶ್ವರ, ಅಮರನಾಥ, ನಾಗೇಶ್ವರ, ಕೇದಾರೇಶ್ವರ, ಸೋಮನಾಥ ಎಂದು ಮುಂತಾಗಿ ಕರೆದು ಜ್ಯೋತಿರ್ಲಿಂಗಗಳನ್ನು ಸ್ಥಾಪಿಸಲಾಯಿತು. ಚರಿತ್ರೆಯ ಕಾಲಘಟ್ಟಗಳಲ್ಲಿ ಶಿವ ಭಕ್ತರಾದ ಅನೇಕ ರಾಜ-ಮಹಾರಾಜರು ಶಿವಾಲಯಗಳನ್ನು ನಿರ್ಮಿಸಿ ತಮ್ಮ ಹೆಸರಿನ ಲಿಂಗಗಳನ್ನು ಪ್ರತಿಷ್ಠಾಪಿಸಿದರು. ಹೀಗೆ ಸ್ಥಾಪಿಸಲ್ಪಟ್ಟ ಜ್ಯೋತಿರ್ಲಿಂಗಗಳು ಸಹಿತ ಇತರ ದೇವಾಲಯಗಳಲ್ಲಿ ಕೆಲವು ಸ್ಥಾನ ಮಹತ್ವದಿಂದಾಗಿ ಪುಣ್ಯ ಕ್ಷೇತ್ರಗಳಾಗಿ ಬೆಳೆದವು. ಅಂತಹ ಕ್ಷೇತ್ರಗಳು ಕೇವಲ ಧಾರ್ಮಿಕವಾಗಿ ಅಷ್ಟೇ ಅಲ್ಲ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ರಾಜಕೀಯವಾಗಿ ಪ್ರಭಾವವನ್ನು ಬೀರುತ್ತ ಸಮಾಜದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದವು. ಭಾಗತದ ಅಂತಹ ಕ್ಷೇತ್ರಗಳಲ್ಲಿ ಕರ್ನಾಟಕದ ಮಧ್ಯ ಭಾಗದಲ್ಲಿರುವ ಪಂಪಾಕ್ಷೇತ್ರವೂ ಒಂದಾಗಿದೆ. ಅದರ ಅಧಿದೈವ ವಿರೂಪಾಕ್ಷ.

ಕರ್ನಾಟಕದಲ್ಲಿ ಪ್ರಾಯಶಃ ೭ ನೇ ಶತಮಾನದಲ್ಲಿ ಹಂಪಿ ಪರಿಸರದಲ್ಲಿ ವಿರೂಪಾಕ್ಷ ದೇವಾಲಯ ಸ್ಥಾಪಿತವಾದಂತೆ ತೋರುತ್ತದೆ. ಬದಾಮಿ ಚಾಲುಕ್ಯರು ತತ್ಸಂಬಂಧಿ ದೇವಾಲಯಗಳನ್ನು ಈ ಕ್ಷೇತ್ರದಲ್ಲಿ ಕಟ್ಟಿದ್ದು, ಅವುಗಳನ್ನು ಹಂಪಿಯಲ್ಲಿ ಕಾಣಬಹುದು. ಚಾಲುಕ್ಯ ಕಾಲದಲ್ಲಿ ಪ್ರಾರಂಭಗೊಂಡ ವಿರೂಪಾಕ್ಷ ದೈವಾರಾಧನೆಯು ಕಲ್ಯಾಣ ಚಾಲುಕ್ಯ, ಹೊಯ್ಸಳ, ಕುಮ್ಮಟದ ಅರಸರ ಕಾಲಗಳಲ್ಲಿ ಸಾಗಿಬಂದು ವಿಜಯನಗರದ ಅರಸರ ಕಾಲಕ್ಕೆ ಪ್ರವರ್ಧಮಾನಕ್ಕೆ ಬಂದಿತು. ವಿಜಯನಗರದ ಸಾಮ್ರಾಟರ ಮತ್ತು ವಿರೂಪಾಕ್ಷನ ಸಂಬಂಧ ಅತ್ಯಂತ ಗಾಢವಾಗಿತ್ತು. ವಿರೂಪಾಕ್ಷನನ್ನು ಹೊರತು ಪಡಿಸಿ ವಿಜಯನಗರದ ಚರಿತ್ರೆಯನ್ನು ಗ್ರಹಿಸಿಕೊಳ್ಳಲು ಕಷ್ಟವೆಂಬಂತೆ ಅಷ್ಟು ವಿರೂಪಾಕ್ಷನ ಪ್ರಭಾವ ವಿಜಯನಗರದಲ್ಲಿ ಹಾಸುಹೊಕ್ಕಾಗಿರುವುದನ್ನು ಗುರುತಿಸಬಹುದು.

ಹೀಗೆ, ವಿಜಯನಗರದ ಚರಿತ್ರೆಯ ಅಧ್ಯಯನದ ಸಂದರ್ಭದಲ್ಲೆಲ್ಲ ವಿರುಪಾಕ್ಷನ ಕುರಿತು ಅವಲೋಕಿಸುತ್ತಾ ಬರಲಾಗಿದೆ. ಅಷ್ಟೇ ಅಲ್ಲ ಅನೇಕ ವಿದ್ವಾಂಸರು ವಿರೂಪಾಕ್ಷ ದೇವಾಲಯದ ಕಲೆ, ವಾಸ್ತುಶಿಲ್ಪ, ವರ್ಣ ಚಿತ್ರಕಲೆ, ಧಾರ್ಮಿಕ ಆಚರಣೆಗಳು, ರಥೋತ್ಸವ ಮುಂತಾದವುಗಳ ಕುರಿತಾಗಿ ಬೆಳಕು ಬೀರಿ ಅನೇಕ ಲೇಖನಗಳನ್ನು, ಪುಸ್ತಕಗಳನ್ನು ರಚಿಸಿದ್ದಾರೆ. ಇವುಗಳ ಪೈಕಿ ವಿಶೇಷವಾಗಿ ಉಲ್ಲೇಖಿಸುವ ಅಧ್ಯಯನವೆಂದರೆ, ಡಾ. ಬಾಲಸುಬ್ರಮಣ್ಯರವರ A Virupaksha Temple at Hampi - A study ಪುಸ್ತಕ. ಈ ಅಧ್ಯಯನದಲ್ಲಿ ವಿರೂಪಾಕ್ಷ ದೇವಾಲಯದ ವಾಸ್ತುಶಿಲ್ಪ, ಧಾರ್ಮಿಕ ಉತ್ಸವ ಆಚರಣೆ ಕುರಿತಾಗಿ ವಿವೇಚಿಸಲಾಗಿದೆ. ಇವೆಲ್ಲವೂ ಹಂಪಿಯ ವಿರೂಪಾಕ್ಷ ದೇವಾಲಯವನ್ನು ಕುರಿತಾದ ಅಧ್ಯಯನಗಳು ಮಾತ್ರ. ಆದರೆ ಇದೇ ಸಂದರ್ಭದಲ್ಲಿ ಹಂಪಿಯ ನೆರೆಹೊರೆಯ ಪ್ರದೇಶಗಳಲ್ಲಿ ಇರುವ ವಿರೂಪಾಕ್ಷ/ಪಂಪಾಪತಿ ದೇವಾಲಯಗಳ ಕುರಿತಾದ ಒಟ್ಟು ಅಧ್ಯಯನವಾಗಿಲ್ಲದಿರುವ ಸಂಗತಿ ಗಮನಕ್ಕೆ ಬಂತು. ಈ ಬಗೆಗೆ ಡಾ. ದೇವರಕೊಂಡಾರೆಡ್ಡಿ ಮತ್ತು ಡಾ.ವಾಸುದೇವ ಬಡಿಗೇರ ಲೇಖನಗಳನ್ನು ಬರೆದಿದ್ದರೂ ಅವುಗಳು ಲೇಖನಗಳ ಪರಿಮಿತಿಗಳಲ್ಲಿರುವುದರಿಂದ ಸಮಗ್ರ ವಿವೇಚನೆಗೆ ಆಸ್ಪದವಾಗಿಲ್ಲ. ಆದರೆ ಪ್ರಸ್ತುತ ಲೇಖನಗಳ ಸೂಚನೆ ಮತ್ತು ಆಶಯದಂತೆ ಹಂಪಿ ಪರಿಸರದ ವಿರೂಪಾಕ್ಷನ ಕುರಿತಾದ ಸಾಂಸ್ಕೃತಿಕ ಅಧ್ಯಯನ ನಡೆಸಬಹುದಾದ ಸಾಧ್ಯತೆ ಕಂಡು ಬಂತು. ಹಾಗಾಗಿ ಪ್ರಸ್ತುತ "ಹಂಪಿ ಪರಿಸರದ ವಿರೂಪಾಕ್ಷ : ಸಾಂಸ್ಕೃತಿಕ ಅಧ್ಯಯನ" ಎಂಬ ಸಂಶೋಧನಾ ಸ್ವರೂಪದ ಅಧ್ಯಯನವನ್ನು ನಡೆಸಲಾಯಿತು. ಈ ಅಧ್ಯಯನದಲ್ಲಿ ಕಂಡುಕೊಂಡ ಅಂಶಗಳನ್ನು ಈ ಮುಂದಿನಂತೆ ಗಮನಿಸಬಹುದು.

೧) ಹಂಪಿ ಪರಿಸರದ ಭೌಗೋಳಿಕ ಸನ್ನಿವೇಶ ಮತ್ತು ಪ್ರಾಗಿತಿಹಾಸ ಕಾಲದ ಸಂಸ್ಕೃತಿಗಳನ್ನು ಅವಲೋಕಿಸಲಾಗಿದೆ. ಯಾವುದೇ ಮಾನವ ಜೀವನ ಸಂಸ್ಕೃತಿ ರೂಪಗೊಳ್ಳುವಲ್ಲಿ ಅಲ್ಲಿಯ ನದಿ, ಬೆಟ್ಟ, ಶಿಲೆ, ಸಸ್ಯ, ಮುಂತಾದ ಭೌಗೋಳಿಕ ಅಂಶಗಳು ಪ್ರಧಾನ ಪಾತ್ರ ವಹಿಸಿರುವುದನ್ನು ಗುರುತಿಸಬಹುದು. ಆ ಹಿನ್ನೆಲೆಯಲ್ಲಿ ಹಂಪಿ ಪರಿಸರದ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ವೈಶಿಷ್ಟವು ರೂಪಗೊಳ್ಳಲು ಅಲ್ಲಿಯ ತುಂಗಭದ್ರಾ ನದಿ ಸಹಿತ ಬೆಟ್ಟ-ಗುಡ್ಡಗಳು ಪ್ರಭಾವ ಬೀರಿರುವುದನ್ನು ಗುರುತಿಸಬಹುದು. ಚರಿತ್ರೆಯುದ್ದಕ್ಕೂ ನಡೆದ ರಾಜಕೀಯ ಸ್ಥಿತ್ಯಂತರಗಳ ಮೇಲೆ ಇಲ್ಲಿಯ ಭೌಗೋಳಿಕ ಪರಿಸರ ಸೂಕ್ಷ್ಮವಾಗಿ ಪ್ರಭಾವ ಬೀರಿರುವುದನ್ನು ಗುರುತಿಸಬಹುದಾಗಿದೆ. ಆ ಹಿನ್ನೆಲೆಯಲ್ಲಿ ಹಂಪಿ ಪರಿಸರದ ವಿರೂಪಾಕ್ಷ ದೈವ ಮತ್ತು ದೇವತಾ ಆರಾಧನೆಗಳಲ್ಲಿ ಪ್ರಕೃತಿ ಸಂಬಂಧಿತ ಅಂಶಗಳನ್ನು ಸೂಕ್ಷ್ಮವಾಗಿ ಕಂಡುಕೊಳ್ಳಬಹುದು. ಉದಾ:- ಗಿರಿ ಉತ್ಸವ, ತೆಪ್ಪೋತ್ಸವ, ಮುಂತಾದವು. ಹೀಗೆ ಹಂಪಿ ಪರಿಸರದ ಭೌಗೋಳಿಕ ಅವಲೋಕನಗಳು ವಿರೂಪಾಕ್ಷನ ಕುರಿತಾದ ಮುಂದಿನ ಅಧ್ಯಯನಕ್ಕೆ ಒಂದು ನೆಲೆಯನ್ನು ಒದಗಿಸುತ್ತವೆಂದೆ ಹೇಳಬಹುದು.

ಹಂಪಿ ಪರಿಸರದ ಪ್ರಾಗಿತಿಹಾಸ ಕಾಲದ ಜೀವನ ಸಂಸ್ಕೃತಿಗಳನ್ನು ಕೂಡ ಇಲ್ಲಿ ಸಮೀಕ್ಷಿಸಲಾಗಿದೆ. ಈ ಸಮೀಕ್ಷೆಯಿಂದ ಹಂಪಿ ಪರಿಸರದಲ್ಲಿ ಸುಮಾರು ೨೫ ಲಕ್ಷ ವರ್ಷಗಳಷ್ಟು ಹಿಂದಿನಿಂದ ಮಾನವನ ಚಟುವಟಿಕೆಗಳನ್ನು ತಿಳಿದುಕೊಳ್ಳಬಹುದಾಗಿದ್ದು, ಇವುಗಳಿಂದ ಮಾನವನು

ಸುಧೀರ್ಘವಾದ ಅಲೆಮಾರಿ ಜೀವನದಿಂದ ನಾಗರೀಕತೆಯತ್ತ ಮುನ್ನಡೆದ ಪಥದಲ್ಲಿ ಕೆಲವು ಮೈಲುಗಲ್ಲುಗಳನ್ನು ಗುರುತಿಸಲು ಸಾಧ್ಯವಾಗಿದೆ. ಇಲ್ಲಿ ನಡೆಸಿದ ಕ್ಷೇತ್ರ ಸಂಶೋಧನೆಗಳಿಂದ ಆದಿ ಶಿಲಾಯುಗ, ಮಧ್ಯ ಶಿಲಾಯುಗ, ನವ ಶಿಲಾಯುಗ, ತಾಮ್ರ ಯುಗ, ಕಬ್ಬಿಣ ಯುಗದ ಬೃಹತ್ ಶಿಲಾಯುಗ ಮತ್ತು ಆದಿ ಚಾರಿತ್ರಿಕ ಕಾಲದ ಮಾನವ ಜೀವನ ಸಂಸ್ಕೃತಿಗಳು ತಿಳಿದುಬಂದಿವೆ. ಇವುಗಳಿಂದಾಗಿ ಹೇಗೆ ಮಾನವ ಜೀವನ ಸಂಸ್ಕೃತಿ ವಿಕಾಸವಾಗುತ್ತಾ ಬಂತೆಂಬುದನ್ನು ತಿಳಿಯಬಹುದು. ಆ ವಿಕಸನದ ಪಥದಲ್ಲಿ ಸಾಗಿಬಂದ ಬದುಕಿನ ಸಂಸ್ಕೃತಿ ಚಾರಿತ್ರಿಕ ಕಾಲಘಟ್ಟಗಳಲ್ಲಿ ಒಂದು ಶಿಷ್ಟ ರೂಪವನ್ನು ಪಡೆದುಕೊಂಡು ಮನ್ನಡೆದದ್ದು ವಿಧಿತವಾಗುತ್ತದೆ.

ಈ ಹಿನ್ನೆಲೆಯಲ್ಲಿ ಹಂಪಿ ಪರಿಸರದ ವಿರೂಪಾಕ್ಷ ಆರಾಧನೆ ಮತ್ತು ಸುತ್ತಮುತ್ತಲಿನ ಮನುಷ್ಯ ಸಂಸ್ಕೃತಿಯನ್ನು ಅರಿತುಕೊಳ್ಳುವಲ್ಲಿ ಪ್ರಾಗಿತಿಹಾಸ ಕಾಲ ಸಂಸ್ಕೃತಿಗಳ ಅವಲೋಕನ ಒಂದು ಪೂರಕವಾದ ಮತ್ತು ಪೂರ್ವಭಾವಿಯಾದ ತಿಳುವಳಿಕೆಗೆ ಅವಕಾಶ ಮಾಡಿಕೊಡುತ್ತದೆ ಎಂದೇ ಹೇಳಬಹುದು. ಹಾಗಾಗಿ ವಿರೂಪಾಕ್ಷನ ಕುರಿತಾದ ಜನಸಂಬಂಧಿ ಆಚರಣೆಗಳ ವಿಶ್ಲೇಷಣೆಗೆ ಈ ಪ್ರಾಗಿತಿಹಾಸ ಅವಲೋಕನ ಪೂರಕವಾಗಿದೆ ಎಂದೇ ಹೇಳಬಹುದು.

೨) ಹಂಪಿ ಪರಿಸರದ ಸ್ಥಳನಾಮ ಪೌರಾಣಿಕ ಹಿನ್ನೆಲೆ ಮತ್ತು ಚಾರಿತ್ರಿಕ ಹಿನ್ನೆಲೆಗಳನ್ನು ಚರ್ಚಿಸಿ ಕಂಡುಕೊಳ್ಳಲಾಯಿತು. ಹಂಪಿ ಎಂಬ ಹೆಸರು ಮೂಲತಃ ಪಂಪಾ ಎಂಬ ದೇವತೆಯಿಂದ ಉತ್ಪನ್ನವಾಗಿರುವುದು ತಿಳಿಯುತ್ತದೆ. ಆದರೆ ಈ ಕ್ಷೇತ್ರದ ಮೂಲ ದೇವತೆ ಪಂಪಾಂಬಿಕೆ. ಹಾಗಾಗಿ ಅದು ಪಂಪಾಕ್ಷೇತ್ರ. ಅಲ್ಲಿರುವ ತುಂಗಭದ್ರಾ ನದಿಯನ್ನು ಕೂಡ ಪಂಪಾನದಿ ಎಂದೇ ಕರೆಯಲಾಗಿದೆ. ಆನೆಗೊಂದಿಗೆ ಸಮೀಪದ ಪಂಪಾ ಸರೋವರದ ತೀರದ ಮೇಲೆ ಮೂಲ ಪಂಪಾಂಬಿಕೆಯ ದೇವಾಲಯವಿದೆ. ಅಂತೆಯೇ ಹಂಪಿಯ ವಿರೂಪಾಕ್ಷ ದೇವಾಲಯದ ಉತ್ತರ ಬದಿಗೆ ಇರುವ ಮೂಲ ದೇವಿಯ ದೇವಾಲಯಗಳಿದ್ದು, ಇವೆಲ್ಲ ಈ ಕ್ಷೇತ್ರದ ಮೂಲ ದೇವತೆ ಸ್ತ್ರೀ ದೇವತೆ ಎಂಬುದನ್ನು ತಿಳಿಸುತ್ತದೆ. ಪ್ರಾಯಶಃ ೬ ಮತ್ತು ೭ ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಬದಾಮಿ ಚಾಲುಕ್ಯರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಶಾಕ್ತ ಮತದ ಭಾಗವಾಗಿ ಹಂಪಿ ಪರಿಸರದಲ್ಲಿ ದೇವಿಯ ದೇವಾಲಯಗಳು ಅಸ್ತಿತ್ವಕ್ಕೆ ಬಂದವು. ಈ ಪರಿಸರ ಪುರಾಣಗಳಲ್ಲಿ ಪಂಪಾ ಕ್ಷೇತ್ರವೆಂದೇ ಉಲ್ಲೇಖಿತವಾದ ಸಂಗತಿಯನ್ನು ಅನುಲಕ್ಷಿಸಿ, ಆ ದೇವಿಯ ದೇವಾಲಯಗಳನ್ನು ಕಟ್ಟಲಾಯಿತು. ಹಾಗಾಗಿ ಪಂಪಾಂಬಿಕೆಯಿಂದಾಗಿಯೇ ಇದು ಪಂಪಾ ಕ್ಷೇತ್ರವೆಂದಾಯಿತು. ಜಾನಪದರು ಪಂಪಾದೇವಿಯನ್ನು ಹಂಪಾದೇವಿ/ ಹಂಪಮ್ಮ ಎಂದು ಕರೆದರು. ಅಂತೆಯೇ ಪಂಪಾ ಕ್ಷೇತ್ರ ಹಂಪಿಯಾಗಿ ಕರೆಯಲ್ಪಟ್ಟಿರುವುದು. ಪೌರಾಣಿಕ ಉಲ್ಲೇಖಗಳು, ವಾಸ್ತುಶಿಲ್ಪ, ಜಾನಪದ ನಂಬಿಕೆ ಮತ್ತು ಐತಿಹ್ಯಗಳಿಂದ ಸ್ಪಷ್ಟವಾಗುತ್ತದೆ.

ಪಂಪಾ ಕ್ಷೇತ್ರ ಮಹಿಮೆಯನ್ನು ಪುರಾಣಗಳು ಉಲ್ಲೇಖಿಸುತ್ತವೆ. ವಿಶೇಷವಾಗಿ ಸ್ಕಂದ ಪುರಾಣಾಂತರ್ಗತವಾಗಿರುವ ಪಂಪಾಮಹಾತ್ಮೆಯಲ್ಲಿ ಈ ಕ್ಷೇತ್ರದ ವರ್ಣನೆಗಳಿವೆ. ಚಾಕ್ಷುಸ ಮನ್ವಂತರದಲ್ಲಿ ಪರ್ವತ ರಾಜನ ಪುತ್ರಿಯಾದ ಪಂಪಾಂಬಿಕೆಯು ಶಿವನನ್ನು ವರಿಸುವ ಉದ್ದೇಶದಿಂದ ವಿಪ್ರಕೂಟ

ಗಿರಿಗಳ ಈ ಪ್ರದೇಶಕ್ಕೆ ತಪಸ್ಸನ್ನು ಆಚರಿಸಲು ಬರುತ್ತಾಳೆ. ಹಾಗೆ ಬಂದಾಗ ಆಕೆ ನಿತ್ಯ ಸ್ನಾನ ಮಾಡುತ್ತಿದ್ದ ಸರೋವರವು ಪಂಪಾ ಸರೋವರವೆಂದು ಮತ್ತು ಬದಿಯ ಮತ್ತೊಂದು ಸರೋವರದಲ್ಲಿ ಸ್ನಾನ ಮಾಡಿ ಮನಸ್ಸನ್ನು ನಿಗ್ರಹಿಸಿಕೊಂಡಿದ್ದರಿಂದ ಅದು ಮಾನಸ ಸರೋವರವೆಂದಾಯಿತೆಂದು ಪುರಾಣಗಳಲ್ಲಿ ಉಲ್ಲೇಖವಿದೆ. ಈ ಎರಡೂ ಸರೋವರಗಳನ್ನು ಇಂದಿಗೂ ಅದೇ ಹೆಸರಿನಲ್ಲಿ ಕರೆಯಲಾಗುತ್ತದೆ.

ರಾಮಾಯಣ ಕಾಲದಲ್ಲಿ ಹಂಪಿ ಪರಿಸರವು ಕಿಷ್ಕಿಂದಾ ರಾಜ್ಯವಾಗಿತ್ತೆಂದು ನಂಬಲಾಗಿದೆ. ಈ ನಂಬಿಕೆ ಹಿಂದಿನಿಂದಲೂ ಬೆಳೆದುಬಂದಿದೆ. ಇಲ್ಲಿರುವ ಪಂಪಾ ಸರೋವರ, ಅಂಜನಾದ್ರಿ, ಸುಗ್ರೀವ ಗುಹೆ, ವಾಲಿಖಿಲ್ಲಾ, ಚಿಂಚಲಕೋಟೆ, ವಾಲಿಕಾಷ್ಠ, ಮುಂತಾದ ರಾಮಾಯಣ ಉಲ್ಲೇಖಿತ ಸ್ಥಳಗಳಿವೆ. ಅಂತೆಯೇ ದೇವಘಾಟದ ಶಾಸನ, ಶಿರಸಂಗಿ, ಗೌರಿಬಿದನೂರು, ಬೆಂಗಳೂರು ಶಾಸನಗಳ ಕಿಷ್ಕಿಂದಾ ಪರ್ವತ, ಕಿಷ್ಕಿಂದಾದ್ರಿ, ಕಿಷ್ಕಿಂದಾ ನಗರ, ಕಿಷ್ಕಿಂದಾ ಎಂಬ ಉಲ್ಲೇಖಗಳು ಹಂಪಿ ಆನೆಗೊಂದಿ ಪರಿಸರದ ಅಧಿಕ ಆಂಜನೇಯ ದೇವಾಲಯಗಳು ದೇವಾಲಯದ ಕಂಬ ಗೋಡೆಗಳಲ್ಲಿ ಕೆತ್ತಲಾಗಿರುವ ಹನುಮಂತ ವಾನರರ ವಿವಿಧ ಶಿಲ್ಪಗಳು ಇವೆಲ್ಲವುಗಳನ್ನು ಮತ್ತು ಐತಿಹ್ಯಗಳು, ಸ್ಥಳನಾಮಗಳನ್ನು ಅನುಲಕ್ಷಿಸಿ ಹಂಪಿ ಪರಿಸರ ಕಿಷ್ಕಿಂದೆ ಎಂದು ಸದ್ಯದ ಮಟ್ಟಿಗೆ ಹೇಳಬಹುದಾಗಿದೆ. ಅಂದರೆ ರಾಮಯಣದ ಮಹಾಕವಿಗೆ ದಕ್ಷಿಣ ಭಾರತದ ಪರಿಚಯವು ಚೆನ್ನಾಗಿಯೇ ಇತ್ತೆಂದು ತೋರುತ್ತದೆ. ಕಿಷ್ಕಿಂದೆ, ಪಂಪಾ ಮತ್ತು ಲಂಕಾ ಮೊದಲಾದ ಸ್ಥಳಗಳು ಅದರ ನೆರೆಹೊರೆಯ ದೀಪಸ್ತೋಮಗಳಲ್ಲಿದ್ದವೆಂದು ಹೆಚ್ಚು ಖಚಿತವಾಗಿ ಕಾಣುತ್ತದೆ. ಹಾಗಾಗಿ ಹಂಪಿ, ಆನೆಗೊಂದಿ ಪ್ರದೇಶವೇ ರಾಮಾಯಣದ ಕಿಷ್ಕಿಂದೆ ಎಂದು ಹಾಗೂ ಪಂಪಾ ಕಿಷ್ಕಿಂದೆ ಒಂದು ಭಾಗವಾಗಿತ್ತೆಂದು ಇವೆರಡೂ ಹೆಸರುಗಳು ಕನಿಷ್ಟ ರಾಮಾಯಣ ಮಹಾಕಾವ್ಯದ ಕಾಲಕ್ಕಿಂತಲೂ ಪ್ರಾಚೀನವೆಂದು ತೀರ್ಮಾನಿಸಬಹುದು.

ಹಂಪಿ ಪರಿಸರದ ಚಾರಿತ್ರಿಕ ಕಾಲಘಟ್ಟದ ಹಿನ್ನೆಲೆಯಾಗಿ ಅವಲೋಕನ ಮಾಡಲಾಗಿದೆ. ಈ ಪ್ರದೇಶ ಕ್ರಿ.ಪೂ.೩ನೇ ಶತಮಾನದಲ್ಲಿ ಮೌರ್ಯ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ತದನಂತರ ಅವರ ಮಾಂಡಲೀಕರಾದ ಶಾತವಾಹನ ಅಳ್ವಿಕೆಗೂ ಒಳಪಡುತ್ತದೆ. ಶಾತವಾಹನ ಕಾಲದ ಜೇಡಿಮಣ್ಣಿನ ಪ್ರತಿಮೆಗಳು ಹಂಪಿಯಲ್ಲಿ ದೊರೆತಿರುವುದು ಗಮನಾರ್ಹವೆನಿಸಿದೆ. ಶಾತವಾಹನರ ನಂತರ ಬಂದ ಕನ್ನಡ ನಾಡನ್ನು ಆಳಿದ ಕದಂಬ, ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಸೇವುಣ, ಕುಮ್ಮಟ ಮತ್ತು ವಿಜಯನಗರದ ಆಳ್ವಿಕೆಯನ್ನು ಈ ಪ್ರದೇಶ ಕಾಣುತ್ತದೆ. ವಿಶೇಷವಾಗಿ ಬಾದಾಮಿ ಚಾಲುಕ್ಯರ ಕಾಲದಲ್ಲಿ ಹಂಪಿಯಲ್ಲಿ ಕೆಲವು ದೇವಾಲಯಗಳು ನಿರ್ಮಾಣಗೊಳ್ಳುತ್ತವೆ. ಅಂದರೆ ಆ ಕಾಲದಲ್ಲಿ ಪಂಪಾ ಕ್ಷೇತ್ರದ ಬಗೆಗಿನ ಮೌಖಿಕ ಹೇಳಿಕೆಗಳು, ನಂಬಿಕೆಗಳು ಮತ್ತು ಐತಿಹ್ಯಗಳು ಒಂದು ಭೌತಿಕ ಸ್ವರೂಪವನ್ನು ಪಡೆದುಕೊಂಡಂತೆ ತೋರುತ್ತದೆ. ಮೊದಲ ಬಾರಿಗೆ ದೇವಿಯ ದೇವಾಲಯಗಳು ನಿರ್ಮಾಣಗೊಳ್ಳುವುದರ ಮೂಲಕ ಪಂಪಾ ಕ್ಷೇತ್ರ ಒಂದು ನಿರ್ದಿಷ್ಟ ರೂಪವನ್ನು ಪಡೆದುಕೊಂಡಿತೆಂದು ಹೇಳಬಹುದು. ಮುಂದೆ ಆಳಿದ ಅರಸರು ದಾನದತ್ತಿಗಳನ್ನು ನೀಡುವುದರ ಮೂಲಕ ಈ ದೇವಾಲಯವನ್ನು ಬೆಳೆಸುತ್ತಾರೆ. ವಿಶೇಷವಾಗಿ ಪಂಪಾಕ್ಷೇತ್ರ ಲೋಕಪ್ರೀಯವಾದದ್ದು ವಿಜಯನಗರ

ಕಾಲದಲ್ಲಿ. ಈ ಹೊತ್ತಿಗಾಗಲೇ ಇಲ್ಲಿ ವಿರೂಪಾಕ್ಷನ ಸ್ಥಾಪನೆಯಾಗಿ ಆತನ ಆರಾಧನೆ ಪ್ರಾಮುಖ್ಯತೆ ಪಡೆದುಕೊಂಡು ವಿರೂಪಾಕ್ಷನೇ ಪಂಪಾ ಕ್ಷೇತ್ರದ ಪ್ರಮುಖ ಅಧಿದೈವವಾದದ್ದು. ಹಾಗಾಗಿ ವಿಜಯನಗರ ಅರಸರು ವಿರೂಪಾಕ್ಷನೇ ತಮ್ಮ ರಾಜ್ಯದ ನಿಜವಾದ ರಾಜ, ತಾವು ಆತನ ಪ್ರತಿನಿಧಿಗಳು ಮಾತ್ರ ಎಂದು ನಂಬಿದ್ದರು. ಸಂಗಮ ವಂಶದ ಹರಿಹರ, ಬುಕ್ಕ, ದೇವರಾಯರಿಂದ ಹಿಡಿದು ತುಳುವ ವಂಶದ ಕೃಷ್ಣ ದೇವರಾಯ, ಅಚ್ಯುತ ದೇವರಾಯ, ಸದಾಶಿವ ದೇವರಾಯನವರೆಗೆ ಎಲ್ಲರೂ ವಿರೂಪಾಕ್ಷನ ಭಕ್ತರಾಗಿ ದಾನ-ಧರ್ಮಗಳ ಮೂಲಕ ದೇವಾಲಯವನ್ನು ಬೆಳೆಸಿದರು. ೨ನೇ ದೇವರಾಯನು ಪ್ರಧಾನ ದ್ವಾರಗೋಪುರವನ್ನು ನಿರ್ಮಿಸಿದರೆ, ಕೃಷ್ಣ ದೇವರಾಯನು ೨ನೇ ದ್ವಾರಗೋಪುರವನ್ನು ಮತ್ತು ಮಹಾ ರಂಗಮಂಟಪವನ್ನು ನಿರ್ಮಿಸುತ್ತಾನೆ.ಈ ಅರಸರು ಹಂಪಿಯಲ್ಲಿ ಅಷ್ಟೇ ಅಲ್ಲ ಹಿರೇಜಂತಕಲ್‌ನಲ್ಲೂ ಪಂಪಾಪತಿ ದೇವಾಲಯವನ್ನು ನಿರ್ಮಿಸಿದರು. ಅಂತೆಯೇ ಈ ದೇವಾಲಯಗಳಲ್ಲಿ ಧಾರ್ಮಿಕ ಕಾರ್ಯಗಳನ್ನು, ಜಾತ್ರೆ-ಉತ್ಸವಗಳನ್ನು ವಿಜೃಂಭಣೆಯಿಂದ ನಡೆಸಿ, ವಿರೂಪಾಕ್ಷ ಆರಾಧನೆಯನ್ನು ಜನಪ್ರೀಯಗೊಳಿಸಿದ ಸಂಗತಿ ವೇದ್ಯವಾಗುತ್ತದೆ.

೩) ವಿರೂಪಾಕ್ಷ ದೇವರ ಪರಿಕಲ್ಪನೆ, ಪರಂಪರೆ ಮತ್ತು ವಿರೂಪಾಕ್ಷ ದೇವಾಲಯಗಳಲ್ಲಿ ಆಚರಣೆಯಲ್ಲಿರುವ ಧಾರ್ಮಿಕ ಕಾರ್ಯಗಳು, ಪೂಜಾ ಪದ್ಧತಿಗಳು, ಮತ್ತಿತರ ಆಚರಣೆಗಳನ್ನು ಸಂಗ್ರಹಿಸಿ ನಿರೂಪಿಸಲಾಗಿದೆ. ಸಾಮಾನ್ಯವಾಗಿ ಮೂರು ಕಣ್ಣುಳ್ಳ ಶಿವನನ್ನು ವಿರೂಪಾಕ್ಷನೆಂದು ಕರೆಯಲಾಗಿದೆ. ವೇದ ಕಾಲದ ರುದ್ರನೇ ಮುಂದೆ ಶಿವನಾಗಿ ವಿರೂಪಾಕ್ಷನಾದ ಸಂಗತಿಯು ವೇದ್ಯವಾಗುತ್ತದೆ. ಋಗ್ವೇದ ಸಂಹಿತದಲ್ಲಿ ಅಗ್ನಿಗೆ ವಿರೂಪಾಕ್ಷ ರುದ್ರನೆಂದು ಕರೆಯಲಾಗಿದೆ. ಅಂತೆಯೇ ತಂತ್ರಾರಾಧನೆಯಲ್ಲಿ ಶಿವನು ಭೈರವ ರೂಪನಾಗಿದ್ದು, ಅವನ ಹಲವು ರೂಪಗಳಲ್ಲಿ ವಿರುಪಾಕ್ಷ ರೂಪವು ಒಂದಾಗಿದೆ. ಹೀಗೆ ವಿರೂಪಾಕ್ಷ ಪರಿಕಲ್ಪನೆ ವೇದ ಕಾಲದ ಅಗ್ನಿದೇವನಿಗಿದ್ದು, ಅವನನ್ನು ಕ್ರಮೇಣ ರುದ್ರನೆಂದು ಕರೆಯಲಾಗಿದ್ದು, ಮುಂದೆ ಶಿವನ ಹಲವು ರೂಪದ ಹಲವು ನಾಮದ ಆರಾಧನೆಯಲ್ಲಿ ವಿರೂಪಾಕ್ಷ ನಾಮದಿಂದ ಆರಾಧನೆ ಪ್ರಚಲಿತಗೊಂಡಿರುವುದನ್ನು ತಿಳಿಯುತ್ತದೆ.

ಹಂಪಿಯಲ್ಲಿ ವಿರೂಪಾಕ್ಷನನ್ನು ವೇದದ ಉಲ್ಲೇಖದಂತೆ ಮೂಲತಃ ಭೈರವ ರೂಪದಲ್ಲಿ ಪ್ರತಿಷ್ಠಾಪಿಸಿ ಆರಾಧಿಸಿದಂತೆ ತೋರುತ್ತದೆ. ಭೈರವನನ್ನು ಕಾಲಭೈರವನೆಂತಲೂ ಕರೆಯಲಾಗುವುದರಿಂದ, ಈ ದೇವರನ್ನು ಕೆಲಕಾಲ ಮಹಾಕಾಲ, ಮಹಾಬಲ ದೇವರೆಂದು ಕರೆಯಲಾಗಿರುವುದು ಚಾಲುಕ್ಯ ಕಾಲದ ಕೆಲವು ಶಾಸನಗಳಿಂದ ತಿಳಿಯುತ್ತದೆ. ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಂತೆ ಭೈರವ, ಮಹಾಕಾಲ, ವಿರೂಪಾಕ್ಷ ಬೇರೆಯಲ್ಲ. ಅವೆಲ್ಲ ವಿರೂಪಾಕ್ಷನ ಹೆಸರುಗಳೆಂದೇ ಹೇಳಬಹುದು. ಹಂಪಿಯಲ್ಲಿ ಕಾಳಾಮುಖದ ಪ್ರಭಾವ ಕಡಿಮೆಯಾದಾಗ ಶಿವನನ್ನು ಲಿಂಗರೂಪದಲ್ಲಿ ಪ್ರತಿಷ್ಠಾಪಿಸರಬೇಕು ಎಂಬುದನ್ನು ಕಂಡುಕೊಳ್ಳಲಾಗಿದೆ. ಅಲ್ಲದೆ ವಿರೂಪಾಕ್ಷನ ಆರಾಧನೆ ಬಾದಾಮಿ ಚಾಲುಕ್ಯರ ಕಾಲದಿಂದ ವಿಜಯನಗರೋತ್ತರದ ವರೆಗೆ ಹೇಗೆ ಬೆಳೆದುಬಂತು ಎನ್ನುವುದನ್ನು ಶಾಸನ, ಸಾಹಿತ್ಯ, ವಾಸ್ತುಶಿಲ್ಪಗಳಿಂದ ನಿರೂಪಿಸಲಾಗಿದೆ.

ಹೀಗೆ ಚರಿತ್ರೆ ಕಾಲದಲ್ಲಿ ಪ್ರತ್ಯೇಕ ವಿರೂಪಾಕ್ಷ ದೇವಾಲಯಗಳು ಸ್ಥಾಪನೆಯಾದ ನಂತರ ಆ ದೇವಾಲಯಗಳಲ್ಲಿ ನಡೆದುಕೊಂಡು ಬಂದಿರುವ ಪೂಜಾ ಕಾರ್ಯಕ್ರಮಗಳ ಸ್ವರೂಪಗಳನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಂಪಿ ಪರಿಸರದ ವಿರೂಪಾಕ್ಷ ದೇವಾಲಯಗಳಲ್ಲಿ ಹಂಪಿಯು ಮತ್ತು ಹಿರೇ ಜಂತಕಲ್‌ನ ದೇವಾಲಯಗಳು ಮಾತ್ರ ಪ್ರಧಾನವಾಗಿದ್ದು, ಉಳಿದವು ಸಾಮಾನ್ಯವಾಗಿರುವುದರಿಂದ ಮತ್ತು ಆ ದೇವಾಲಯಗಳಲ್ಲಿ ವಿಸ್ತೃತ ಪೂಜಾ ಕಾರ್ಯಕ್ರಮಗಳು ನಡೆಯುತ್ತಿರುವುದು ತಿಳಿಯುತ್ತದೆ. ಹಂಪಿ ವಿರೂಪಾಕ್ಷ ದೇವಾಲಯದ ಧಾರ್ಮಿಕ ಆಚರಣೆಗಳನ್ನು ಇಲ್ಲಿ ಪ್ರಧಾನವಾಗಿ ವಿವೇಚಿಸಲಾಗಿದೆ. ಸಾಮಾನ್ಯವಾಗಿ ಪ್ರಾತಃ ಕಾಲದಿಂದ ಪ್ರಾರಂಭವಾಗುವ ನಿತ್ಯದ ಆಚರಣೆಗಳಲ್ಲಿ ದೈವ ಜಾಗೃತಿ, ಕುಂಬಾಭಿಷೇಕ, ನಂದಾದೀಪ, ಪಂಚಾಮೃತ ಅಭಿಷೇಕ, ನೈವೇದ್ಯ, ಬಲಿಪೂಜಾ, ಪಾದುಕಾ ಸೇವೆಗಳು ವೈಶಿಷ್ಟಪೂರ್ಣವಾಗಿ ನೆರವೇರುವುದನ್ನು ಗಮನಿಸಬಹುದು. ವಿಶೇಷವಾಗಿ ಪಾದುಕಾ ಸೇವೆ ವಿಜಯನಗರ ಸ್ಥಾಪನೆಗೆ ಆಶೀರ್ವದಿಸಿದ ವಿದ್ಯಾರಣ್ಯರಿಗೆ ಗೌರವ ಸಲ್ಲಿಸುವುದಕ್ಕಾಗಿ ಸಾಂಕೇತಿಕವಾಗಿ ಅವರ ಬೆಳ್ಳಿ ಪಾದುಕೆಗಳ ಪೂಜೆ ಇದಾಗಿದೆ. ವಿಜಯನಗರ ಸ್ಥಾಪನೆಯಲ್ಲಿ ವಿದ್ಯಾರಣ್ಯರ ಪಾತ್ರದ ಕುರಿತಾದ ಚರ್ಚೆಗಳಿರುವ ಸಂದರ್ಭದಲ್ಲಿ ಇಂತಹ ಆಚರಣೆಗಳು ಚಾರಿತ್ರಿಕ ಮಹತ್ವವನ್ನು ಪಡೆದುಕೊಳ್ಳುತ್ತವೆ. ಆ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಇಂತಹ ಆಚರಣೆಗಳು ಪೂರಕವಾಗಿ ನಿಲ್ಲುತ್ತವೆ ಎಂಬುದನ್ನು ಕಂಡುಕೊಳ್ಳಬಹುದು.

ಪಂಪಾಪತಿ ಮತ್ತು ಪಂಪಾಂಬಿಕೆಯರ ವಿಗ್ರಹಗಳನ್ನು ಮೆರವಣಿಗೆಯಾದ ಏಕಾಂತ ಸೇವೆ ಮತ್ತು ಗಿರಿ ಪ್ರದಕ್ಷಿಣೆ ಉತ್ಸವಗಳು ಸಮಾಜದ ಸಾಮಾನ್ಯ ಭಕ್ತಾದಿಗಳಿಗೆ ದೇವಾಲಯದಲ್ಲಿ ಪ್ರವೇಶ ಸಾಧ್ಯವಿಲ್ಲದ್ದರಿಂದ ಅವರಿಗೆ ದರ್ಶನಕ್ಕಾಗಿ ವಿಗ್ರಹಗಳನ್ನು ಕೊಂಡೊಯ್ಯುವ ಉದ್ದೇಶ ಹೊಂದಿದವೆಂದು ಹೇಳಬಹುದು. ಫಲಪೂಜೆ ಹಂಪಿಯ ವಿಶಿಷ್ಟ ಧಾರ್ಮಿಕ ಕಾರ್ಯಕ್ರಮ. ಪಾಪಿಗೆ ಹಂಪಿ ಜಾತ್ರೆ, ಪುಣ್ಯವಂತರಿಗೆ ಫಲಪೂಜೆ ಎಂಬ ಜಾಣ್ನುಡಿ ಪೂಜೆಯ ಮಹತ್ವವನ್ನು ಬಿಂಬಿಸುತ್ತದೆ. ವಾಸ್ತವಿಕವಾಗಿ ಇದು ಪಂಪಾಪತಿ ಮತ್ತು ಪಂಪಾಂಬಿಕೆಯರ ಕಲ್ಯಾಣ ಮಹೋತ್ಸವ ಆಚರಣೆಯಾಗಿದೆ. ಸ್ಕಂದ ಪುರಾಣ, ಹರಿಹರನ ಗಿರಿಜಾ ಕಲ್ಯಾಣ, ಆನೆಗೊಂದಿ ತಾಮ್ರ ಶಾಸನದ ವಿವಾಹ ಪುರಾಣದ ವಿವರಗಳಂತೆ ಇಲ್ಲಿ ಮದುವೆ ಕಾರ್ಯಕ್ರಮಗಳನ್ನು ಬಹು ವಿಶಿಷ್ಟವಾಗಿ ಆಚರಿಸಲಾಗುತ್ತದೆ. ಒಂದೊಂದು ಗ್ರಾಮದವರು ಗಂಡಿನ (ವಿರೂಪಾಕ್ಷ) ಕಡೆಯವರಾಗಿ ಮತ್ತೊಂದು ಗ್ರಾಮದವರು ಹೆಣ್ಣಿನ (ಪಂಪಾಂಬಿಕೆ) ಕಡೆಯವರಾಗಿ ಮದುವೆಯಲ್ಲಿ ಪಾಲ್ಗೊಂಡು ವಿವಾಹ ಶಾಸ್ತ್ರವನ್ನು ನಡೆಸಿಕೊಡುವುದು ಕುತೂಹಲದಾಯಕವಾಗಿದ್ದು, ಒಟ್ಟಿನಲ್ಲಿ ಈ ಆಚರಣೆ ಹಿಂದೆ ಪಂಪಾ ಕ್ಷೇತ್ರ ವಿರೂಪಾಕ್ಷ ಕ್ಷೇತ್ರವಾಗಿ ಪರಿವರ್ತನೆಯಾದ ಸಂದರ್ಭವನ್ನು ಸೂಚ್ಯವಾಗಿ ತಿಳಿಸುತ್ತದೆ. ಉಳಿದಂತೆ ದೋಲೋತ್ಸವ, ಕಲ್ಯಾಣೋತ್ಸವ, ಬ್ರಹ್ಮೋತ್ಸವ, ಮುಂತಾದ ಪೂಜಾ ಕಾರ್ಯಕ್ರಮಗಳು, ಜನಸಮುದಾಯ ನಂಬಿಕೆ ಮತ್ತು ಆರಾಧನೆಯ ವೈಶಿಷ್ಟವನ್ನು ಬಿಂಬಿಸುತ್ತವೆ. ಹೀಗೆ ಒಂದು ಸಣ್ಣ ದೇವಾಲಯ ಬೃಹತ್ ದೇವಾಲಯವಾಗಿ ಮಾರ್ಪಟ್ಟು, ವಿಸ್ತೃತವಾದ ಪೂಜಾ ಆಚರಣೆಗಳನ್ನು ಅಳವಡಿಸಿಕೊಂಡಿರುವಲ್ಲಿ ಆ ದೇವರು ಮತ್ತು

ಪ್ರಭುತ್ವ, ದೇವಾಲಯ ಮತ್ತು ಸಮುದಾಯದ ಗಾಢ ಸಂಬಂಧವನ್ನು ಅಭಿವ್ಯಕ್ತಗೊಳಿಸುತ್ತದೆ. ದೇವರ ಮೇಲೆ ನಂಬಿಕೆ ಗಾಢವಾದಂತೆ ದೇವಾಲಯ ಬೆಳವಣಿಗೆಯನ್ನು ಸಾಧಿಸುವ ಮತ್ತು ದೇವಾಲಯ ಬೆಳೆದಂತೆ ನಂಬಿಕೆ ಗಾಢವಾಗುವ ಈ ಕ್ರಿಯೆ-ಪ್ರಕ್ರಿಯೆಯ ಸಂದರ್ಭವನ್ನು ಈ ಒಟ್ಟು ವಿವೇಚನೆಯಿಂದ ಗ್ರಹಿಸಬಹುದಾಗಿದೆ.

೪) ಹಂಪಿ ಪರಿಸರದ ವಿರೂಪಾಕ್ಷ ದೇವಾಲಯಗಳ ವಾಸ್ತು ಪರಂಪರೆಯನ್ನು ಪರಿಶೀಲಿಸಲಾಗಿದೆ. ಮುಖ್ಯವಾಗಿ ವಾಸ್ತುಶಿಲ್ಪ ದೇವಾಲಯಗಳಲ್ಲಿರುವ ಮೂರ್ತಿ ಶಿಲ್ಪಗಳು ಮತ್ತು ವರ್ಣ ಚಿತ್ರಕಲೆಯ ಕುರಿತಾದ ಮಾಹಿತಿಯನ್ನು ಸಂಗ್ರಹಿಸಿ ವಿವೇಚಿಸಲಾಗಿದೆ. ಹಂಪಿ ಪರಿಸರದಲ್ಲಿ ಒಟ್ಟು ೧೩ ವಿರೂಪಾಕ್ಷ / ಪಂಪಾಪತಿ ದೇವಾಲಯಗಳಿರುವುದು ಸರ್ವೇಕ್ಷಣೆಯಿಂದ ತಿಳಿದು ಬಂತು. ಅವುಗಳೆಂದರೆ,- ಹಂಪಿಯಲ್ಲಿ ಮೂರು, ಗಂಗಾವತಿ ಹಿರೇಜಂತಕಲ್, ಹಳೇ ಅಯೋಧ್ಯ, ಚಿಕ್ಕಜಂತಕಲ್, ಕಂಪ್ಲಿಕೋಟೆ, ಅಂಜನಹಳ್ಳಿ, ಕನಕಗಿರಿ, ಪಂಪಾಸರೋವರ, ಕುರಿಕುಪ್ಪಿ, ಇಟಗಿ, ಬೆಣ್ಣಿಹಳ್ಳಿಯಲ್ಲಿರುವ ಪಂಪಾಪತಿ/ವಿರೂಪಾಕ್ಷ ದೇವಾಲಯಗಳು. ಈ ಎಲ್ಲಾ ದೇವಾಲಯಗಳಲ್ಲಿ ಮಹತ್ವದ ಮತ್ತು ವಿಸ್ತೃತವಾದ ದೇವಾಲಯಗಳೆಂದರೆ, ಹಂಪಿಯ ವಿರೂಪಾಕ್ಷ ಮತ್ತು ಹಿರೇಜಂತಕಲ್ಲಿನ ಪಂಪಾಪತಿ ದೇವಾಲಯ. ಇವೆರಡೂ ವಿಜಯನಗರ ಕಾಲದವು. ವಾಸ್ತು ದೃಷ್ಟಿಯಿಂದ ವೈವಿಧ್ಯತೆಯ ದೇವಾಲಯಗಳು. ಈ ಎಲ್ಲಾ ವಿರೂಪಾಕ್ಷ ದೇವಾಲಯಗಳನ್ನು ಕಾಲಮಾನದ ದೃಷ್ಟಿಯಿಂದ ಮೂರು ಹಂತಗಳಲ್ಲಿ ಗುರುತಿಸಬಹುದು.

ವಿಜಯನಗರ ಪೂರ್ವ : ಉದಾ- ಇಟಗಿ, ಬೆಣ್ಣಿಹಳ್ಳಿ, ಅಂಜನಹಳ್ಳಿ, ಹೇಮಕೂಟ

ವಿಜಯನಗರ : ಹಂಪಿ, ಹಿರೇಜಂತಕಲ್, ಕನಕಗಿರಿ, ಕುರೆಕುಪ್ಪ, ಕಂಪ್ಲಿಕೋಟೆ

ವಿಜಯನಗರೋತ್ತರ : ಚಿಕ್ಕ ಜಂತಕಲ್, ಹಳೇ ಅಯೋಧ್ಯ

ಎಂದು ವಿಂಗಡಿಸಬಹುದು. ಈ ದೇವಾಲಯಗಳಲ್ಲಿ ವಿಜಯನಗರ ಕಾಲ ಪೂರ್ವದ ದೇವಾಲಯಗಳು ಗರ್ಭಗೃಹ, ಅಂತರಾಳ ಮತ್ತು ನವರಂಗಗಳನ್ನು ಹೊಂದಿ ಮಧ್ಯಮ ತಲವಿನ್ಯಾಸದಲ್ಲಿದೆ. ವಾಸ್ತು ದೃಷ್ಟಿಯಿಂದ ಅಂತಹ ಮಹತ್ವದ ನಿರ್ಮಿತಿಗಳು ಏನಲ್ಲ. ಆದರೆ ಈ ಹಂತದ ಕೊನೆಯ ಭಾಗದಲ್ಲಿ ನಿರ್ಮಾಣವಾದ ಅಂಜನಹಳ್ಳಿಯ ಪಂಪಾಪತಿ ದೇವಾಲಯವು ಕದಂಬ ನಾಗರಶೈಲಿ ಶಿಖರವನ್ನು ಹೊಂದಿದ್ದು, ಆ ಶೈಲಿಯ ಪೂರ್ವಭಾವಿ ಹಂತಕ್ಕೆ ಉತ್ತಮ ನಿದರ್ಶನವಾಗಿದೆ. ಪಿರಾಮಿಡ್ ಆಕಾರದಲ್ಲಿ ಮೇಲೆರುವ ಈ ಶಿಖರದ ಅಡ್ಡ ಪಟ್ಟಿಕೆಗಳು ಅತ್ಯಂತ ಸರಳವಾಗಿ ಅಸಮವಾದ ಅಳತೆಯಲ್ಲಿವೆ. ಹಂಪಿಯು ಹೇಮಕೂಟದ ಮೇಲಿನ ದೇವಾಲಯಗಳ ಕದಂಬ ನಾಗರಶೈಲಿಯ ಪರಿಪೂರ್ಣ ಹಂತ ಮುಟ್ಟಿರುವುದನ್ನು ಶಿಖರಗಳಲ್ಲಿ ಕಾಣಬಹುದು. ವಿಜಯನಗರ ಕಾಲದ ದೇವಾಲಯಗಳಲ್ಲಿ ೨ ರೀತಿಯ ರಚನೆಗಳನ್ನು ಗುರುತಿಸಬಹುದು. ನೇರವಾಗಿ ವಿಜಯನಗರ ಸಾಮ್ರಾಟರಿಂದ ನಿರ್ಮಿಸಲ್ಪಟ್ಟ ದೇವಾಲಯಗಳು. ಉದಾ- ಕುರೆಕುಪ್ಪಿ, ಕನಕಗಿರಿ, ಕಂಪ್ಲಿ. ಅರಸರಿಂದ ನಿರ್ಮಿಸಿದ ದೇವಾಲಯಗಳು ಗಾತ್ರ ಮತ್ತು ಪ್ರಮಾಣದಲ್ಲಿ ಅತ್ಯಂತ ವಿಸ್ತೃತವಾಗಿವೆ. ಹಂಪಿಯ ವಿರೂಪಾಕ್ಷ ದೇವಾಲಯವು

ವಿಜಯನಗರದ ವಾಸ್ತು ಶೈಲಿಯ ಎಲ್ಲ ಲಕ್ಷಣಗಳನ್ನು ಹೊಂದಿದೆ. ಗರ್ಭಗೃಹ, ಅಂತರಾಳ, ನವರಂಗ, ಮಹಾರಂಗಮಂಟಪಗಳನ್ನು ಒಳಗೊಂಡ ಮುಖ್ಯಗುಡಿ, ಸುತ್ತಲೂ ಪರಿವಾರ ದೇವತೆಗಳ ಗುಡಿಗಳು, ಅವುಗಳನ್ನು ಒಳಗೊಂಡಂತೆ ನಾಲ್ಕು ದಿಕ್ಕಿಗೆ ಪ್ರಾಕಾರ, ಅದಕ್ಕೆ ಒಳಗೆ ಸ್ತಂಭ ಮಂಟಪ, ಬಲಿಪೀಠ, ದೀಪಸ್ತಂಭ, ಪ್ರಾಕಾರಕ್ಕೆ ಮಹಾದ್ವಾರ ಮಂಟಪಗಳು, ಮುಂದೆ ವಿಶಾಲವಾದ ಬಜಾರ, ಅದರ ಇಕ್ಕೆಲಗಳಲ್ಲಿ ಸಾಲುಸಾಲಾಗಿರುವ ಮಂಟಪಗಳು, ಬಜಾರದ ತುದಿಗೆ ಮಂಟಪದೊಳಗೆ ಮಹಾನಂದಿ, ಹೀಗೆ ವಿರೂಪಾಕ್ಷ ದೇವಾಲಯವು ಒಂದು ಪರಿಪೂರ್ಣ ದೇವಾಲಯ ಸಂಕೀರ್ಣವಾಗಿದೆ.

ಕಾಲಮಾನ ದೃಷ್ಟಿಯಿಂದ ಇದು ಪ್ರಾಯಶಃ ೭ನೇ ಶತಮಾನದಿಂದ ವಿಜಯನಗರದ ಕೊನೆಯ ಕಾಲಘಟ್ಟದವರೆಗೆ ನಿರ್ಮಾಣವಾಗಿರುವುದು. ಅದರ ವಿಭಿನ್ನವಾದ ವಾಸ್ತುಭಾಗಗಳನ್ನು ಅನುಲಕ್ಷಿಸಿ ಗುರುತಿಸಬಹುದು. ೨ನೇ ದೇವರಾಯನ ಕಾಲದಲ್ಲಿ ನಿರ್ಮಿಸಲ್ಪಟ್ಟು ಇದರ ಮಹಾದ್ವಾರವು ವಿಜಯನಗರ ವಾಸ್ತು ಸ್ಮಾರಕಗಳಲ್ಲಿ ಅತ್ಯಂತ ಬೃಹತ್ತಾದ ಭವ್ಯವಾದ ಸ್ಮಾರಕವಾಗಿದೆ. ಅಂತೆಯೇ ಕೃಷ್ಣದೇವರಾಯನ ಕಾಲದಲ್ಲಿ ೨ನೇ ಗೋಪುರ ಉತ್ತರದ ಗೋಪುರ ಮತ್ತು ಮಹಾರಂಗಮಂಟಪಗಳು ದೇವಾಲಯದ ಭವ್ಯತೆಯನ್ನು ಹೆಚ್ಚಿಸಿದವು. ಹೀಗೆ ಈ ದೇವಾಲಯ ವಿಜಯನಗರ ಪೂರ್ವದಿಂದ ವಿಜಯನಗರೋತ್ತರದವರೆಗಿನ ವಾಸ್ತುಶಿಲ್ಪದ ಬೆಳವಣಿಗೆಯ ವಿವಿಧ ಪ್ರಾದೇಶಿಕ ಆಯಾಮಗಳನ್ನು ವ್ಯಕ್ತಪಡಿಸುತ್ತದೆ ಎನ್ನಬಹುದು.

ಅಂತೆಯೇ ೨ನೇ ದೇವರಾಯನಿಂದ ನಿರ್ಮಿಸಲ್ಪಟ್ಟ ಹಿರೇಜಂತಕಲ್ಲಿನ ದೇವಾಲಯವು ಕೂಡ ತಕ್ಕಮಟ್ಟಿಗೆ ವಿಸ್ತಾರವಾಗಿದ್ದು. ಗರ್ಭಗೃಹದಲ್ಲಿ ಬಲಭಾಗದಲ್ಲಿ ಪಾಣಿಬಟ್ಟಲನ್ನು ಹೊಂದಿರುವ ಶಿವಲಿಂಗ ಮತ್ತು ಪಂಪಾಂಬಿಕೆಯ ಗರ್ಭಗೃಹದ ಮೇಲೆ ಶಾಲ ಮಾದರಿಯ ಶಿಖರವನ್ನು ಧರಿಸಿರುವುದು ಇಲ್ಲಿಯ ವೈಶಿಷ್ಟಗಳಾಗಿವೆ. ಮಾಂಡಲೀಕರಿಂದ ನಿರ್ಮಿಸಲ್ಪಟ್ಟ ಕುರೆಕುಪ್ಪ, ಕಂಪ್ಲಿ ಕನಕಗಿರಿ ದೇವಾಲಯಗಳು ಗರ್ಭಗೃಹ, ಅಂತರಾಳ, ನಮರಂಗಳನ್ನು ಹೊಂದಿ ಮಧ್ಯಮ ಪ್ರಮಾಣದಲ್ಲಿವೆ. ಇವುಗಳಲ್ಲಿ ಅಂತಹ ವಿಶೇಷ ರಚನೆಗಳೇನು ಇಲ್ಲ.

ವಿಜಯನಗರೋತ್ತರ ಕಾಲದ ದೇವಾಲಯಗಳು ಚಿಕ್ಕಜಂತಕಲ್ ಅಯೋಧ್ಯಗಳಲ್ಲಿದ್ದು, ಪ್ರಾಯಶಃ ೧೮ನೇ ಶತಮಾನದ ರಚನೆಗಳಾಗಿವೆ. ಇವು ಕೂಡ ಸರಳವಾದ ಪ್ರಾದೇಶಿಕ ಶೈಲಿಯಲ್ಲಿ ರಚನೆಯಾಗಿರುವಂಥವು. ಒಟ್ಟಾರೆ ಹೇಳುವುದೆಂದರೆ ಪಂಪಾವಿರೂಪಾಕ್ಷನ ಆರಾಧನೆ ಪ್ರಾಚೀನವಾಗಿದ್ದರೂ ಕೂಡ ವಿಜಯನಗರದ ಕಾಲಘಟ್ಟ ಆರಾಧನೆಯ ಉತ್ತುಂಗ ಅವಧಿಯೆಂದು ಹೇಳಬಹುದು. ವಾಸ್ತುಶಿಲ್ಪದಲ್ಲೂ ಕೂಡ ಅದು ಬಿಂಬಿತವಾಗಿದೆ. ಎಲ್ಲ ವಿರೂಪಾಕ್ಷ ದೇವಾಲಯಗಳಲ್ಲಿ ಕೆಲವು ಮೂರ್ತಿಶಿಲ್ಪಗಳು ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯವಾಗಿ ಪಾರ್ವತಿ, ಪಂಪಾಂಬಿಕೆ, ಗಣೇಶ, ವೀರಭದ್ರ, ಭೈರವ ಕಾರ್ತಿಕೇಯ, ಸಾಮಾನ್ಯವಾಗಿದ್ದರೆ, ಅಪರೂಪವಾಗಿ ವಿಷ್ಣು, ಸೂರ್ಯ, ಮುಂತಾದ ಶಿಲ್ಪಗಳು ಕಂಡುಬರುತ್ತವೆ. ಇವುಗಳನ್ನು ಅವಲೋಕಿಸಿದಾಗ ಹೆಚ್ಚಾಗಿ ಶೈವಶಿಲ್ಪಗಳೇ ಅಧಿಕವಾಗಿರುವುವು. ಹಂಪಿ ಮತ್ತು ಹಿರೇಜಂತಕಲ್ಲಿನ ದೇವಾಲಯಗಳಲ್ಲಿ ಶಿಷ್ಠ ಶೈಲಿಯ ಮೂರ್ತಿಗಳು ಹೆಚ್ಚಾಗಿವೆ. ಉಳಿದಂತೆ

ಸ್ಥಳೀಯ ಮತ್ತು ಜನಪದೀಯ ಶಿಲ್ಪಗಳು ಕೂಡ ಕಂಡುಬರುತ್ತವೆ. ಬೆಣ್ಣಿಹಳ್ಳಿಯಲ್ಲಿ ಮಹಿಷಾಸುರಮರ್ದಿನಿ, ವೀರಭದ್ರ ಗಜಾನನ ಶಿಲ್ಪಗಳಿದ್ದು, ಚಾಲುಕ್ಯ ಶೈಲಿಯ ಉತ್ತಮ ರಚನೆಗಳಾಗಿವೆ. ಅದರಂತೆ ಹಂಪಿ, ಜಂತಕಲ್, ಕುರೆಕುಪ್ಪಗಳಲ್ಲಿ ಗಾರೆ ಶಿಲ್ಪಗಳು ಕಂಡುಬರುತ್ತವೆ. ಮುಖ್ಯವಾಗಿ ಷಣ್ಮುಖ, ಗಣೇಶ ಸಹಿತ ಶಿವ-ಪಾರ್ವತಿಯರು ವೃಷಭ ರೂಢವಾಗಿರುವ ಶಿಲ್ಪಗಳು ಪ್ರಧಾನವಾಗಿ ಕಂಡು ಬರುತ್ತವೆ.

ಗಾರೆಶಿಲ್ಪದಲ್ಲಿ ಕುರೆಕುಪ್ಪದ ಶಿಲ್ಪಗಳು ವೈಶಿಷ್ಟವಾಗಿದ್ದು. ವಿಜಯನಗರ ಶೈಲಿಯನ್ನು ಬಿಂಬಿಸಿದರೆ, ಹಂಪಿ, ಹಿರೇಜಂತಕಲ್ ಶಿಲ್ಪಗಳು ಸ್ಥಳೀಯ ಶೈಲಿಯನ್ನು ಬಿಂಬಿಸುತ್ತವೆ. ಪ್ರಾಯಶ: ಮೂರ್ತಿಶಿಲ್ಪಗಳು ಭಗ್ನವಾದ ನಂತರ ನಂತರದ ಕಾಲಾವಧಿಯಲ್ಲಿ ಈ ಶಿಲ್ಪಗಳನ್ನು ರಚಿಸಲಾಗಿರುವುದು ಇದಕ್ಕೆ ಕಾರಣ. ಒಟ್ಟಿನಲ್ಲಿ ವಿರೂಪಾಕ್ಷ ಆರಾಧನೆಗೆ ಸಂಬಂಧಿಸಿದಂತೆ ಮೂಲ ದೇವತೆಗಳಲ್ಲಾಗಲಿ, ಪರಿವಾರ ದೇವತೆಗಳಲ್ಲಾಗಲೀ, ವೈಶಿಷ್ಟತೆಯೇನೂ ಇರಲಿಲ್ಲ. ಹಂಪಿಯ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದಲ್ಲಿ ಮಾತ್ರ ವರ್ಣಚಿತ್ರಗಳು ಕಂಡುಬರುತ್ತವೆ. ಉಳಿದಂತೆ ಯಾವ ದೇವಾಲಯಗಳಲ್ಲು ಇಂತ ಚಿತ್ರಗಳು ಇಲ್ಲ. ವಿರೂಪಾಕ್ಷ ದೇವಾಲಯದ ವರ್ಣ ಚಿತ್ರಗಳು ವಿಜಯನಗರ ಕಾಲದ ಅಪರೂಪದ ಚಿತ್ರಗಳಾಗಿದ್ದು. ವಿಜಯನಗರದ ಚಿತ್ರಕಲೆಯನ್ನು ಅಧ್ಯಯನ ಮಾಡಲು ಮಹತ್ವದ ಆಕರಗಳಗಾಗಿ ಉಳಿದುಬಂದಿವೆ. ಇಲ್ಲಿ ಗಿರಿಜಾಕಲ್ಯಾಣ, ತ್ರಿಪುರದಹನ, ಮನ್ಮಥವಿಜಯ, ದಶಾವತಾರದ ಚಿತ್ರಗಳು ಪ್ರಮುಖವಾಗಿದೆ. ಈ ಚಿತ್ರಗಳು ವಿಜಯನಗರದ ಭಿತ್ತಿಕಲೆಯ ಜೊತೆಗೆ ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಅಂಶಗಳನ್ನು ವ್ಯಕ್ತಗೊಳಿಸುತ್ತವೆ.

೫) ವಿರೂಪಾಕ್ಷ ಆರಾಧನೆ ಮತ್ತು ದೇವಾಲಯಗಳ ಸುತ್ತ ಬೆಳೆದು ಬಂದಿರುವ ನಂಬಿಕೆ, ಸಂಪ್ರದಾಯಗಳು ಮತ್ತು ಅಲ್ಲಿಯ ಸ್ಥಳಗಳು ಕಟ್ಟಡಗಳ ಕುರಿತಾದ ಐತಿಹ್ಯಗಳನ್ನು ಸಂಗ್ರಹಿಸಿ ವಿವೇಚಿಸಲಾಗಿದೆ. ಭಾರತೀಯ ಪರಂಪರೆಯಲ್ಲಿ ವ್ಯಕ್ತಿಯ ಬದುಕಿನಲ್ಲಿ ದೈವದ ಪಾತ್ರ ಪ್ರಮುಖವಾಗಿರುವುದನ್ನು ಗಮನಿಸಬಹುದು. ವ್ಯಕ್ತಿಯ ಹುಟ್ಟಿನಿಂದ ಸಾಯುವರೆಗೆ ಅನೇಕ ಸಂಸ್ಕಾರಗಳು ನೆಡೆದು ಅವನನ್ನು ಬೇರೆ-ಬೇರೆ ಹಂತಕ್ಕೆ ಮಾನಸಿಕವಾಗಿ ಸಿದ್ಧಗೊಳಿಸುವ ಉದ್ದೇಶವನ್ನು ಅವುಹೊಂದಿವೆ. ಈ ಪ್ರತಿ ಸಂಸ್ಕಾರಗಳು ದೇವತೆಯ ಆರಾಧನೆಯೊಂದಿಗೆ ನೆಡೆಯಬೇಕು. ಅಂವಾಗಲೇ ಅವನಲ್ಲಿ ಸಾರ್ಥಕ್ಯ ಭಾವ ಇರುವುವು. ಅಂತೆಯೇ ವಿರೂಪಾಕ್ಷನನ್ನು ಮನೆದೇವರಾಗಿ ಹೊಂದಿರುವ ಸಾವಿರಾರು ಕುಟುಂಬಗಳನ್ನು ಹಂಪಿ ಪರಿಸರದಲ್ಲಿ ಕಾಣಬಹುದು. ಅಂತಹ ಮನೆಗಳಲ್ಲಿ ನೆಡೆಯುವ ಬಹುಮಟ್ಟಿನ ಕಾರ್ಯಗಳು ವಿರೂಪಾಕ್ಷನ ಸನ್ನಿಧಿಯಲ್ಲಿ ನೆಡೆಸುವುವು. ಮತ್ತು ಪಂಪಾಪತಿ ವಿರೂಪಾಕ್ಷ ಎಂಬ ಹೆಸರುಗಳನ್ನು ತಮ್ಮ ಮಕ್ಕಳಿಗೆ ನಾಮಕರಣ ಮಾಡುವುದು. ಹೀಗೆ ಹಂಪಿ ಸಹಿತ ಎಲ್ಲ ವಿರೂಪಾಕ್ಷ ದೈವವು ನೆರೆಹೊರೆಯ ಭಕ್ತ ಸಮುದಾಯದ ಮೇಲೆ ವಿಶಿಷ್ಠ ಪ್ರಭಾವ ಬೀರಿರುವುದನ್ನು ಇಂತಹ ಹತ್ತು ಹಲವು ನಂಬಿಕೆ ಆಚರಣೆಗಳಿಂದ ಗ್ರಹಿಸಬಹುದಾಗಿದೆ.

ತನ್ನ ಇಷ್ಟ ದೇವತೆಯನ್ನು ಉಳಿದೆಲ್ಲ ದೈವಗಳಿಗಿಂತ ಶ್ರೇಷ್ಠವೆಂದು ಬಿಂಬಿಸುವ ಹಿನ್ನೆಲೆಯಲ್ಲಿ ದೇವಾಲಯದ ಮೂಲದಿಂದ ಹಿಡಿದು, ಅದರ ಮಂಟಪ, ಕಂಬ, ಗೋಪುರ ದೇವತೆಗಳು ಮುಂತಾದವುಗಳ ನಿರ್ಮಾಣದ ಕುರಿತಾದ ರೋಚಕ ಕತೆಗಳನ್ನು ಹುಟ್ಟು ಹಾಕುವುದುಂಟು. ಇದರನ್ವಯ ವಿರೂಪಾಕ್ಷ ದೇವಾಲಯದ ಮೂಲಲಿಂಗ, ಉದ್ಭವಲಿಂಗದ ಐತಿಹ್ಯ, ಕನಕಗಿರಿ ಗೋಪುರ ೩ ತಲೆಯ ನಂದಿ, ಮೂಲ ವಿರೂಪಾಕ್ಷ, ಬಿಷ್ಟಪ್ಪಯ್ಯ ಗೋಪುರ, ಮನ್ಮಥ ಕೊಂಡ, ತಳವಾರಪ್ಪನ ಕಲ್ಲು, ಉಗುಳದಮ್ಮಲ ಮಾರಿ, ಮುಂತಾದವುಗಳ ಸುತ್ತ ವಿಚಿತ್ರವಾದ ಐತಿಹ್ಯಗಳು ರೂಢಿಯಲ್ಲಿವೆ.

ಸಾಮಾನ್ಯವಾಗಿ ಈ ಐತಿಹ್ಯಗಳು ಕಾಲ್ಪನಿಕವಾಗಿದ್ದು, ದಂತಕತೆಯಂತಿರುತ್ತವೆ. ಅತಾರ್ಕಿಕವಾಗಿದ್ದು, ಆ ಸ್ಥಳ ಘಟನೆಗೆ ಸಂಬಂಧಿಸಿದ ಒಂದು ವಿಶಿಷ್ಟ ಸಂಗತಿಯನ್ನು ಒಳಗೊಂಡಿರುತ್ತವೆ. ಆ ಸಂಗತಿಯನ್ನು ದೈವ ಮತ್ತು ಆ ದೇವಾಲಯದ ನಿರ್ಮಾಣದ ಕುರಿತಾಗಿ ಜನಮಾನಸದಲ್ಲಿ ಹೆಚ್ಚಿನ ಭಕ್ತಿ ಭಾವವನ್ನು ಮೂಡಿಸುವ ಉದ್ದೇಶವನ್ನು ಇಂತಹ ಐತಿಹ್ಯಗಳಲ್ಲಿ ಇರುವುದನ್ನು ಗುರುತಿಸಬಹುದು.

೬) ಹಂಪಿ ಪರಿಸರದ ವಿರೂಪಾಕ್ಷ ದೇವಾಲಯಗಳಲ್ಲಿ ಜಾತ್ರೆ ಉತ್ಸವಗಳ ಆಚರಣೆಯ ವೈಶಿಷ್ಟಗಳನ್ನು ಇಲ್ಲಿ ಗುರುತಿಸಲಾಗಿದೆ. ಈ ಎಲ್ಲ ದೇವಾಲಯಗಳಲ್ಲಿ ಕನಕಗಿರಿ ಮತ್ತು ಅಂಜನಹಳ್ಳಿ ಅಯೋಧ್ಯ, ಚಿಕ್ಕಜಂತಕಲ್ ದೇವಾಲಯಗಳನ್ನು ಹೊರತುಪಡಿಸಿದರೆ, ಉಳಿದಂತೆ ಎಲ್ಲ ದೇವಾಲಯಗಳಲ್ಲಿ ಜಾತ್ರೆಗಳು ನೆರವೇರುತ್ತವೆ. ಇವುಗಳಲ್ಲಿ ಹಂಪಿ ಮತ್ತು ಹಿರೇಜಂತಕಲ್‌ನ ಜಾತ್ರೆಗಳು ಅತ್ಯಂತ ವಿಜೃಂಭಣೆಯಿಂದ ಜರುಗುತ್ತವೆ. ಹಂಪಿಯ ರಥೋತ್ಸವದಂದೇ ಉಳಿದ ಎಲ್ಲ ದೇವಾಲಯಗಳ ರಥೋತ್ಸವಗಳು ನೆರವೇರುವುದು. ಒಂದು ವೈಶಿಷ್ಟ. ಕಂಪ್ಲಿಯ ದೇವಾಲಯಕ್ಕೆ ಸ್ವಂತ ರಥ ಇಲ್ಲದಿದ್ದರೂ ಬೇರೆ ದೇವಾಲಯದ ರಥವನ್ನು ಪಡೆದು, ಜಾತ್ರೆಯನ್ನು ನೆರವೇರಿಸುವುದು ಕುತೂಹಲದಾಯಕವಾಗಿದೆ. ಹಂಪಿಯ ಜಾತ್ರೆ ಕರ್ನಾಟಕದ ಪ್ರಮುಖ ಜಾತ್ರೆಗಳಲ್ಲಿ ಒಂದಾಗಿದೆ. ವಿಜಯನಗರ ಕಾಲದಿಂದಲೂ ಇಂದಿನವರೆಗೂ ನಿರಂತರವಾಗಿ ನಡೆದುಕೊಂಡು ಬಂದಿದ್ದು, ಜಾತ್ರೆಯ ಬಗೆಗಿನ ಜನಸಮುದಾಯದ ದೃಢವಾದ ನಂಬಿಕೆಯನ್ನು ವ್ಯಕ್ತಗೊಳಿಸುತ್ತದೆ. ಜಾತ್ರೆ ಕೇವಲ ಸಾಮಾಜಿಕವಾಗಿ ಸಾಮರಸ್ಯದ ಪರಸ್ಪರ ಭ್ರಾತೃತ್ವ ಭಾವನೆ ಬೆಳೆಸುವ ಉತ್ಸವಗಾಗಿರುವುದು. ಸಮಾಜದ ಎಲ್ಲ ಜಾತಿ–ಜನವರ್ಗದ ಆಸಕ್ತಿದಾಯಕ ಪಾಲ್ಗೊಳ್ಳುವಿಕೆಯಿಂದ ಗುರುತಿಸಲ್ಪಡುವುದು. ಅಂತೆಯೇ ಅದು ಆರ್ಥಿಕ ವಹಿವಾಟಿನ ಚಟುವಟಿಕೆಗಳಲ್ಲಿ ವಿವಿಧ ರೀತಿಯ ಕಲಾಪ್ರಕಾರಗಳ ಪ್ರದರ್ಶನ ಮತ್ತು ಪೋಷಣೆಗೆ ಕಾರಣವಾಗುವ ಸಾಂಸ್ಕೃತಿಕ ಉತ್ಸವವಾಗಿಯೂ ಬೆಳೆದು ಬಂದಿರುವವನ್ನು ಗುರುತಿಸಬಹುದು. ಹಂಪಿಯ ಜಾತ್ರೆಯಲ್ಲಿ ಸೇರುವ ಭಕ್ತಾದಿಗಳಿಗೆ ನೀರಿನ ಮತ್ತು ಊಟದ ಸೇವೆಯನ್ನು ಮಾಡುವ ಒಂದು ವಿಶೇಷ ಪರಂಪರೆಯನ್ನು ಗಮನಿಸಬಹುದು. ಸಮಾಜದ ವಿವಿಧ ಮಠ ಮಾನ್ಯಗಳು, ವರ್ತಕ ಸಮುದಾಯಗಳು, ಗಣ್ಯಮಾನ್ಯರು, ಸಂಘ–ಸಂಸ್ಥೆಗಳವರು, ಇಂದಿಗೂ ಕೂಡ ಇಂಥ ವಿಶೇಷ ಸೇವೆಯನ್ನು ನೆರವೇರಿಸುತ್ತಾರೆ. ಹಾಗಾಗಿ ಹಂಪಿಯ ಜಾತ್ರೆ ಈ ಪರಿಸರದ ಸಮಸ್ತ ಜನ ಸಮುದಾಯದ ಒಂದು ವಿಶಿಷ್ಟಗಳಿಗೆಯೆಂದೇ

ಹೇಳಬಹುದು. ಅಂತೆಯೇ ಇಲ್ಲಿ ನಡೆಯುವ ಫಲಪೂಜ ಸಹಿತ ಅನೇಕ ಉತ್ಸವಗಳು ಸಮುದಾಯ ಮತ್ತು ದೈವದ ಮಧ್ಯದ ಆತ್ಮೀಯ ಸಂಬಂಧವನ್ನು ಅನಾವರಣಗೊಳಿಸುತ್ತವೆ. ಹಂಪಿಯಲ್ಲದೇ ಹಿರೇಜಂತಕಲ್, ಕುರೆಕುಪ್ಪ, ಬೆಣ್ಣೆಹಳ್ಳಿ ಮುಂತಾದ ದೇವಾಲಯಗಳಲ್ಲಿ ನಡೆಯುವ ಜಾತ್ರೆ, ಉತ್ಸವಗಳು ಆಯಾ ಪ್ರದೇಶ ವ್ಯಾಪ್ತಿಯಲ್ಲಿದ್ದರೂ, ವಿರೂಪಾಕ್ಷ ದೇವಾಲಯದ ಆಚರಣೆಗಳ ಪ್ರಭಾವಕ್ಕೆ ಒಳಗಾಗಿದ್ದು, ಸ್ಥಳೀಯ ಸಮುದಾಯದ ಮೇಲೆ ತನ್ನದೇ ಆದ ಪ್ರಭಾವ ಬೀರಿರುವದನ್ನು ಗುರುತಿಸಬಹುದು.

ಒಟ್ಟಿನಲ್ಲಿ ವಿರೂಪಾಕ್ಷ ದೈವದ ಮೂಲ ಪರಿಕಲ್ಪನೆ, ಆರಾಧನಾ ಪರಂಪರೆ ಮತ್ತು ವಿಸ್ತರಣೆ ಸಮುದಾಯದ ಮೇಲಿನ ಪ್ರಭಾವ ಇತ್ಯಾದಿ ಅಂಶಗಳನ್ನು ಗುರುತಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಆ ಮೂಲಕ ಕನ್ನಡನಾಡಿನ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಹಂಪಿ ಪರಿಸರದ ವಿರೂಪಾಕ್ಷ ದೈವದ ಪಾತ್ರ ಹೇಗೆ ವೈಶಿಷ್ಟ್ಯ ಪೂರ್ಣವಾಗಿದೆ ಎಂಬುದನ್ನು ಇಲ್ಲಿ ನಿರೂಪಿಸಲಾಗಿದೆ. ಕನ್ನಡ ನಾಡಿನ ಅಷ್ಟೆ ಏಕೆ ದಕ್ಷಿಣ ಭಾರತದ ಒಂದು ಪ್ರಮುಖ ದೈವವಾಗಿ ವಿರೂಪಾಕ್ಷ ಇಲ್ಲಿಯ ಮಾನವ ಜೀವನ ಸಂಸ್ಕೃತಿಗೆ ಬಹುದೊಡ್ಡ ಕೊಡುಗೆ ನೀಡಿರುವುದನ್ನು ಗುರುತಿಸಬಹುದು.

# ಗ್ರಂಥಋಣ


೧. ಅಪರ್ಣ, ಕೂ.ಸ., ೧೯೯೯, **ದೇವಾಲಯ ವಾಸ್ತುಶಿಲ್ಪ ಪರಿಚಯ**, ಕ.ವಿ.ವಿ., ಹಂಪಿ.

೨. ಕಲ್ಬುರ್ಗಿ ಎಂ.ಎಂ., ೧೯೯೯, **ಹರಿಹರನ ರಗಳೆಗಳು**, ಕ.ವಿ.ವಿ., ಹಂಪಿ.

೩. ಕಣ್ಣನ್ ಕೆ.ಎಸ್., ೨೦೦೧, **ಅಹೋಬಲನ ವಿರೂಪಾಕ್ಷ ವಸಂತೋತ್ಸವ ಚಂಪೂ**, ಕ.ವಿ.ವಿ., ಹಂಪಿ.

೪. ಕುಂಬಾಸ, ೧೯೯೦, **ಬಳ್ಳಾರಿ ಜಿಲ್ಲಾ ಸಂಸ್ಕೃತಿಕ ದರ್ಶನ**, ಹರಪನಹಳ್ಳಿ : ಶ್ರೀ ಮಾಲತೇಶ ಪ್ರಕಾಶನ, ಕುಂಚೂರು.

೫. ಕೃಷ್ಣರಾವ್ ಕಪಟರಾಳ, ೧೯೭೦, **ಕರ್ನಾಟಕ ಸಂಸ್ಕೃತಿಯ ಸಂಶೋಧನ**, ಉಷಾ ಸಾಹಿತ್ಯಮಾಲೆ, ಮೈಸೂರು.

೬. ಕೃಷ್ಣ ಎಂ.ಎಚ್., ೧೯೮೧, **ಕನ್ನಡ ನಾಡಿನ ಚರಿತ್ರೆ** (ಕರ್ನಾಟಕ ಕಲೆಗಳು ಭಾಗ-೩), ಕ.ಸಾ.ಪ., ಬೆಂಗಳೂರು.

೭. ಗವಿಶೆಟ್ಟಿ ಕೆ., ೧೯೯೫, **ಕರ್ನಾಟಕದ ಖನಿಜ ಸಂಪತ್ತು**, ಬೆಂಗಳೂರು.

೮. ಗೋಪಾಲ್ ಬಾ.ರ., ೧೯೮೭, **ಕರ್ನಾಟಕದಲ್ಲಿ ನವಶಿಲಾಯುಗ**, ಕ.ವಿ.ವಿ., ಧಾರವಾಡ.

೯. ಗೋಪಾಲ್ ಬಾ.ರ., ೧೯೯೩, **ಕರ್ನಾಟಕದ ಕಲೆಗಳು, ಸಂಪುಟ ೪, ವಾಸ್ತು**, ಕ.ಸಾ.ಪ., ಬೆಂಗಳೂರು.

೧೦. ಗೋಪಾಲ್‌ರಾವ್ ಎಚ್.ಎಸ್., ೨೦೦೮, **ವಿಜಯನಗರ ಶಿಲ್ಪಕಲೆ**, ಕರ್ನಾಟಕ ಶಿಲ್ಪಕಲಾ ಅಕಾಡೆಮಿ.

೧೧. ಚಂದ್ರಶೇಖರ .ಟಿ.ಆರ್., **ಬಳ್ಳಾರಿ ಜಿಲ್ಲೆ ನಿಸರ್ಗ ಸಂಪತ್ತು.**

೧೨. ಚಿದಾನಂದಮೂರ್ತಿ ಎಂ., ೧೯೬೬, **ಹೊಸತು-ಹೊಸತು** ಕ.ವಿ.ವಿ., ಹಂಪಿ.

೧೩. ದೀಕ್ಷಿತ್ ಜಿ.ಎಸ್., ೧೯೯೧, **ಸಂಗಮರ ಕಾಲದ ವಿಜಯನಗರ**, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

೧೪. ಚಿದಾನಂದಮೂರ್ತಿ ಎಂ., ೧೯೬೭, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸಪ್ನ ಬುಕ್‌ಹೌಸ್, ಬೆಂಗಳೂರು.

೧೫. ಚಲುವರಾಜು, ೨೦೦೦, **ಹಂಪಿಯ ಸ್ಮಾರಕಗಳಲ್ಲಿ ಜಾನಪದೀಯ ಅಂಶಗಳು**, ಕ.ವಿ.ವಿ., ಹಂಪಿ.

೧೬. ತಿಪ್ಪೇರುದ್ರಸ್ವಾಮಿ ಎಚ್., ೧೯೬೮, **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೭. ದೇವರಕೊಂಡಾರೆಡ್ಡಿ, ೨೦೦೬, **ಹಂಪಿ ಸಂಪುಟ**, ಕ.ವಿ.ವಿ., ಹಂಪಿ.

೧೮. ದ್ರುವರಾಜ ನಾ. ಗದಗಕರ್, ೧೯೯೯, **ದೇಗುಲ ರಥಶಿಲ್ಪ**, ಕ.ವಿ.ವಿ., ಹಂಪಿ.

೧೯. ನಾಗೇಗೌಡ ಎಚ್.ಎಲ್., ೧೯೬೬, **ಪ್ರವಾಸಿ ಕಂಡ ಇಂಡಿಯಾ**, ಮೈಸೂರು ವಿ.ವಿ., ಮೈಸೂರು.

೨೦. ನಾಯಕ್ ಹಾ.ಮಾ, **ಕನ್ನಡ ವಿಷಯ ವಿಶ್ವಕೋಶ**, ಮೈಸೂರು.

೨೧. ಪರಮೇಶ್ವರಪ್ಪ ಟಿ., ೧೯೯೬, **ಹಂಪಿ ಪರಂಪರೆ**, ಹೊಸಪೇಟೆ.

೨೨. ಪಾಟೀಲ್ .ಬಿ.ಸಿ., ೧೯೯೮, **ಕೊಪ್ಪಳ ಸಾಂಸ್ಕೃತಿಕ ಅಧ್ಯಯನ**, ಹರಿಹರ ಪ್ರಕಾಶನ, ಕೊಪ್ಪಳ.

೨೩. ಪಾಂಡುರಂಗರಾವ್ ದೇಸಾಯಿ, ೧೯೮೯, **ಹಂಪೆ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೪. ಪುರುಷೋತ್ತಮ ಬಿಳಿಮಲೆ, ಚಲುವರಾಜು, **ಹಂಪಿ ಜಾನಪದ**, ಕ.ವಿ.ವಿ., ಹಂಪಿ.

೨೫. ಪ್ರಕಾಶ್ ಹುಣಸಗಿ, ೧೯೮೭, **ಗಂಗಾವತಿ ತಾಲೂಕು ದರ್ಶನ**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೨೬. ರಾಮಚಂದ್ರರಾವ್ ಎಸ್.ಕೆ., ೧೯೭೫, **ಮೂರ್ತಿಶಿಲ್ಪ ನೆಲೆ-ಹಿನ್ನೆಲೆ**, ಬೆಂಗಳೂರು ವಿ.ವಿ., ಬೆಂಗಳೂರು.

೨೭. ಬಸಂತಪ್ಪ .ಬಿ., ೧೯೯೧, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ**, ಬಳ್ಳಾರಿ ಜಿಲ್ಲೆ, ೫ ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಸೊಂಡೂರು.

೨೮. ಬಸವರಾಜ ಮಲಶೆಟ್ಟಿ, ೧೯೮೮, **ಹಂಪಿ ಒಂದು ಪರಿಚಯ**, ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹಂಪಿ.

೨೯. ಬಸವರಾಜಪ್ಪ ಎಚ್.ಈ., ೨೦೦೬, **ಬಳ್ಳಾರಿ ಜಿಲ್ಲೆಯ ಚಿತ್ರಕಲೆ**, ಕ.ವಿ.ವಿ., ಹಂಪಿ.

೩೦. ಮಹದೇವ.ಸಿ., ಚೆನ್ನಸ್ವಾಮಿ ಸೋಸಲೆ, ೨೦೦೬, **ಹಂಪಿ ಅಂದು-ಇಂದು**, ಕ.ವಿ.ವಿ., ಹಂಪಿ.

೩೧. ಮಹದೇವ.ಸಿ., ೨೦೦೦, **ವಿಜಯನಗರದ ಗಾರೆ ಶಿಲ್ಪ**, ಕ.ವಿ.ವಿ., ಹಂಪಿ.

೩೨. ಮಹದೇವ.ಸಿ., ಸುಬ್ಬಣ್ಣರೈ, ಮಾಧವ ಪೆರಾಜೆ, ೨೦೦೨, **ಹೊಸಪೇಟೆ ತಾಲೂಕ ದರ್ಶನ**, ಕ.ವಿ.ವಿ., ಹಂಪಿ.

೩೩. ಮಹಾಬಳೇಶ್ವರರಾವ್, ೧೯೯೦; **ಇತಿಹಾಸ ಕಣ್ಣಲ್ಲಿ ರಾಮಾಯಣ**, ಬೆಂಗಳೂರು.

೩೪. ಮಹದೇವ.ಸಿ., ೨೦೦೧, **ಕರ್ನಾಟಕದ ಪುರಾತತ್ವ ಶೋಧ**, ಶ್ರೀ ಲಕ್ಷ್ಮಿಪ್ರಕಾಶನ, ಶ್ರೀರಂಗಪಟ್ಟಣ.

೩೫. ಮೂರ್ತಿ ಕೆ.ಎಲ್.ಎನ್., ೧೯೯೮, **ಕರ್ನಾಟಕ ಕಲೆ ಮತ್ತು ವಾಸ್ತುಶಿಲ್ಪ**, ರಂಜಿತ ಪ್ರಕಾಶನ ತುಮಕೂರು.

೩೬. ರಂಗನಾಥ ಶರ್ಮ .ಎನ್. (ಸಂ.), **ಕಿಷ್ಕಿಂದಾ ಕಾಂಡ.**

೩೭. ರಂಗಸ್ವಾಮಿ .ಡಿ.ಟಿ., ೧೯೮೮೪, **ಭಾರತದ ಹಬ್ಬ ಹರಿದಿನಗಳು**, ಸಮಾಜ ಪುಸ್ತಕಾಲಯ, ಧಾರವಾಡ.

೩೮. ರಮೇಶ ಬೆ.ಗು., ಕೋಟೇಶ್ ಎನ್.ಜಿ. (ಸಂ), ೧೯೯೩, **ಭಾರತ ದರ್ಶಿನ** (ಒಂದು ಪ್ರವಾಸಿಗರ ಕೈಪಿಡಿ), ವಾಸನ್ ಬುಕ್ ಡಿಪೋ, ಬೆಂಗಳೂರು.

೩೯. ರಾಜಶೇಖರ ಎಸ್., ೧೯೮೮, **ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ**, ಸುಜಾತ ಪ್ರಕಾಶನ, ಧಾರವಾಡ.

೪೦. ರುದ್ರಪ್ಪ .ರ.ಹ. ಮತ್ತು ಬಂಗಿದೊಡ್ಡಮಂಜುನಾಥ, ೨೦೦೫, **ಕಂಪ್ಲಿ** ಶ್ರೀ ಭುವನೇಶ್ವರಿ ಪ್ರಕಾಶನ, ಕನ್ನಡ ಹಿತರಕ್ಷಕ ಸಂಘ, ಕಂಪ್ಲಿ.

೪೧. ಬಸಪ್ಪ ಎಸ್. (ಸಂ), ೧೯೭೦; ಲಕ್ಕಣ್ಣ ದಂಡೇಶ ವಿರಚಿತ **ಶಿವತತ್ವ ಚಿಂತಾಮಣಿ**, ಮೈಸೂರು.

೪೨. ಬೆನಕಲ್ ರಾಮರಾವ್, **ಪುರಾಣನಾಮ ಚೂಡಾಮಣಿ** (ಮೂರನೇ ಮುದ್ರಣ).

೪೩. ವರದರಾಜರಾವ್, ೧೯೮೫, **ಕುಮ್ಮಟದುರ್ಗ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

೪೪. ವರದರಾಜರಾವ್ .ಜಿ., ೧೯೬೩, **ಕುಮ್ಮಟ ಕೇಸರಿ**, ಉಷಾ ಸಾಹಿತ್ಯಮಾಲೆ, ಮೈಸೂರು.

೪೫. ವಸುಂಧರಾ ಫಿಲಿಯೋಜಾ, ೧೯೮೦, ವಿಜಯನಗರ **ಸಾಮ್ರಾಜ್ಯ ಸ್ಥಾಪನೆ**, ಕ.ಸಾ.ಪ., ಬೆಂಗಳೂರು.

೪೬. ವಸುಂಧರಾ ಫಿಲಿಯೋಜಾ, ೧೯೮೩, **ಅಳಿದುಳಿದ ಹಂಪೆ**, ಬೆಂಗಳೂರು.

೪೭. ವಾಸುದೇವ ಬಡಿಗೇರ, ೧೯೯೭, **ಸಂಡೂರು ಪರಿಸರದ ಕಾರ್ತಿಕೇಯ ತಪೋವನ**, ಕಮಲಾಪುರ.

೪೮. ವಿಷ್ಣುತೀರ್ಥ .ಪಿ., ೧೯೬೩, **ಪಂಪಾಮಹಾತ್ಮ್ಯಂ**, ಆನೆಗುಂದಿ ; ನವಬೃಂದಾವನ.

೪೯. ಷೇಖ್ ಅಲಿ ಬಿ., ೧೯೯೭, **ಕರ್ನಾಟಕ ಚರಿತ್ರೆ** ಸಂ.೨, ಕ.ವಿ.ವಿ., ಹಂಪಿ.

೫೦. ಸದಾನಂದ ಕನವಳ್ಳಿ (ಅನು), ೧೯೯೨, **ಮರೆತುಹೋಗಿರುವ ಸಾಮ್ರಾಜ್ಯ**, ಕ.ವಿ.ವಿ., ಹಂಪಿ.

೫೧. ಸಿದ್ದಲಿಂಗೇಶ್ವರ ಸ್ವಾಮಿ, ೧೯೮೩, **ಶ್ರೀ ಪಂಪಾಮಹಾತ್ಮೆ**, ವೃಷಭಾಶ್ರಮ, ಹೊಳಗುಂದಿ, ಹಡಗಲಿ ತಾಲೂಕು.

೫೨. ಸುಂದರ .ಅ., ೧೯೯೪, **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ**, ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು.ಸ

೫೩. ಸುಂದರ ಅ., ೧೯೯೭, **ಕರ್ನಾಟಕ ಚರಿತ್ರೆ** ಸಂ.೧, ಕ.ವಿ.ವಿ., ಹಂಪಿ.

೫೪. ಸುಂದರ ಅ., ೧೯೯೯, **ಆನೆಗುಂದಿ ತುಂಗಭದ್ರಾ ತಡಿಯ ಹಂಪೆಯ ಶ್ರೀಮದ್ರಾಮಾಯಣದ ಕಿಷ್ಕಿಂದೆ?**, ಶರಣರ ಸುವಾಸಿನಿ ಬಳಗ, ಹೊಸಪೇಟೆ.

೫೫. ಸೂರ್ಯನಾಥ ಕಾಮತ್, ೧೯೮೪, **ವಿಜಯನಗರದ ಕಥೆಗಳು**, ಹಂಸಧ್ವನಿ ಪ್ರಕಾಶನ, ಬೆಂಗಳೂರು.

೫೬. ಸೂರ್ಯನಾಥ ಕಾಮತ್ (ಸಂ), ೧೯೮೪, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಭಾಗ–೧, ಕರ್ನಾಟಕ ಸರ್ಕಾರ, ಬೆಂಗಳೂರು.

೫೭. ಸುರೇಶ್. ಕೆ.ಎಂ., ವಾಸುದೇವ ಬಡಿಗೇರ ಇತರರು, ೧೯೯೯, **ಕರ್ನಾಟಕ ದೇವಾಲಯ ಕೋಶ**, ಬಳ್ಳಾರಿ ಜಿಲ್ಲೆ, ಕ.ವಿ.ವಿ., ಹಂಪಿ.

೫೮. ಸುರೇಶ್. ಕೆ.ಎಂ., ವಾಸುದೇವ ಬಡಿಗೇರ ಇತರರು, **ಕರ್ನಾಟಕ ದೇವಾಲಯ ಕೋಶ**. ಕೊಪ್ಪಳ ಜಿಲ್ಲೆ, ಕ.ವಿ.ವಿ., ಹಂಪಿ.

೫೯. ಶರಣಬಸಪ್ಪ ಕೋಲ್ಕಾರ, ೨೦೦೨; **ಅಕ್ಷಯ ಸ್ಮರಣ ಸಂಚಿಕೆ**, ಗಂಗಾವತಿ.

**ಲೇಖನಗಳು :**

೧. ಅಭಿಶಂಕರ ಕೆ., ೧೯೯೦, "ಕಂಪಿಲಿ ಕುಮ್ಮಟ", ಇತಿಹಾಸ ದರ್ಶನ ಸಂ.೫, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨. ಆಳ್ಲ ಚಿರಂಜೀವಿ, ೧೯೯೬, "ಸಾಯಣ ಭಾಷ್ಯಾ ಮತ್ತು ತಂತ್ರದಲ್ಲಿ ವಿರೂಪಾಕ್ಷ ಕಲ್ಪನೆ". ಹಂಪಿ ಪರಂಪರೆ, ಹೊಸಪೇಟೆ.

೩. ಕಲಬುರ್ಗಿ ಎಂ.ಎಂ., "ವಿರೂಪಾಕ್ಷ", ಮಾರ್ಗ ಸಂ.೩, ಕ.ವಿ.ವಿ., ಹಂಪಿ.

೪. ಕುಲಕರ್ಣಿ ಆರ್.ಹೆಚ್., ೨೦೦೧, "ಹಂಪಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಭಿತ್ತಿಚಿತ್ರ, ವಿದ್ಯಾರಣ್ಯರದೇ? ವ್ಯಾಸರಾಯರದೇ?" ಇತಿಹಾಸ ದರ್ಶನ ಸಂ.೧೬, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೫. ಕುಲಕರ್ಣಿ ಆರ.ಹೆಚ್., ೨೦೦೩, "ಹಂಪಿ ವಿರೂಪಾಕ್ಷ ದೇವಾಲಯದ ಮಹಾರಂಗಮಂಟಪದ ಒಳಮಾಳಿಗೆಯ ಭಿತ್ತಿ ಚಿತ್ರಗಳು", ವಿಜಯನಗರ ಅಧ್ಯಯನ ಸಂ.೮.

೬. ಕೆಳದಿ ವೆಂಕಟೇಶ ಜೋಯಿಸ್, ೨೦೦೩, "ಹಂಪಿ ಜಾತ್ರೆಗೆ ಕೆಳದಿ ಅರಸರು ಹಾಕಿಸಿದ ದಾನಶಾಸನ", ವಿಜಯನಗರ ಅಧ್ಯಯನ. ಸಂ.೮.

೭. ಕೊಟ್ರಯ್ಯ ಸಿ.ಟಿ.ಯಂ, ೨೦೦೩, "ಹಂಪಿಯಲ್ಲಿ ಶ್ರೀಶೈಲ ಮಲ್ಲಿಕಾರ್ಜುನ ದೇವತಾರಾಧನೆ", ವಿಜಯನಗರ ಅಧ್ಯಯನ ಸಂ.೭.

೮. ಚಂದ್ರಶೇಖರ ವಿ. ದಾವಣಗೇರಿ, ೨೦೦೪, "ಹಂಪಿ ಶ್ರೀ ವಿರೂಪಾಕ್ಷ ದೇವಾಲಯ, ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆ", ವಿಜಯನಗರ ಅಧ್ಯಯನ, ಸಂ.೯.

೯. ಚಂದ್ರಶೇಖರ ವಿ. ದಾವಣಗೇರಿ, ೨೦೦೫, "ಹಂಪಿ ಶ್ರೀ ವಿರೂಪಾಕ್ಷೇಶ್ವರ ದೇವಾಲಯದಲ್ಲಿನ ಶಿಷ್ಟಾಚಾರದ ಮಾರ್ಗಸೂಚಿ ಸಂಜ್ಞೆಗಳು", ವಿಜಯನಗರ ಅಧ್ಯಯನ, ಸಂ.೧೦.

೧೦. ಚನ್ನಬಸಪ್ಪ ಎಸ್.ಪಾಟೀಲ್, "ಶ್ರೀ ವಿರೂಪಾಕ್ಷ", ವಿಜಯನಗರ ಅಧ್ಯಯನ, ಸಂ.೭.

೧೧. ಚಿದಾನಂದಮೂರ್ತಿ.ಎಂ., ೧೯೯೩, "ಪಂಪಾಪುರ (ಹಂಪಿ), ಕೆಲವು ಅಭಿಜ್ಞೆಗಳು ಪ್ರಮೇಯಗಳು ಮತ್ತು ಪ್ರಶ್ನೆಗಳು". ಹೊಸತು-ಹೊಸತು, ಕ.ವಿ.ವಿ., ಹಂಪಿ.

೧೨. ಚನ್ನಕ್ಕ ಪಾವಟೆ, ೨೦೦೫, "ಶ್ರೀಕೃಷ್ಣದೇವರಾಯನ ಧಾರ್ಮಿಕ ವಿಶ್ಲೇಷಣೆ", ವಿಜಯನಗರ ಅಧ್ಯಯನ, ಸಂ.೧೦, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೧೩. ದೇವರಕೊಂಡಾರೆಡ್ಡಿ, ೧೯೯೮, "ಪಂಪಾತೀರ್ಥ", ವಿಜಯನಗರ ಅಧ್ಯಯನ, ಸಂ.೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೧೪. ದೇವರಕೊಂಡಾರೆಡ್ಡಿ, ೧೯೯೮, "ತುಂಗಭದ್ರಾ ಪ್ರದೇಶದ ವಿರೂಪಾಕ್ಷ ದೇವಾಲಯಗಳು", ಇತಿಹಾಸ ದರ್ಶನ, ಸಂ.೧೩, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೧೫. ನಾಗರಾಜ ಎಂ.ಜಿ., ೨೦೦೧, "ವಿಜಯನಗರ ಕಾಲದ ವೀರಭದ್ರ ಪರಂಪರೆ", ವಿಜಯನಗರ ಅಧ್ಯಯನ, ಸಂ.೬.

೧೬. ಬಂಗಾರಿ .ವಿ.ಎಸ್., ೧೯೭೬, "ಕೊಪ್ಪಳ ನಾಡಿನ ಭೌಗೋಳಿಕ ದರ್ಶನ", ಗವಿದೀಪ್ತಿ.

೧೭. ಬಸವರಾಜ ಮಲಶೆಟ್ಟಿ, ೧೯೯೬, "ಹಂಪಿಯ ಚಂದ್ರಶೇಖರ ಕವಿಯ ಪಂಪಾವಿರೂಪಾಕ್ಷ ಸ್ಥಾನಾವರ್ಣನಂ", ಹಂಪಿ ಪರಂಪರೆ, ಹೊಸಪೇಟೆ.

೧೮. ಭೂಸನೂರಮಠ, ಸಂ.ಶಿ., ೧೯೮೮, "ವಿಜಯನಗರ ಕಾಲದ ಮುಖ್ಯ ದೇವಾಲಯಗಳು"., ವಿಜಯಕಲ್ಯಾಣ, ಮಹಾಕವಿ ಹರಿಹರ ಸ್ಮಾರಕ ಸಂಶೋಧನಾ ಕೇಂದ್ರ, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹಂಪಿ.

೧೯. ಮಂಜುನಾಥಯ್ಯ ಟಿ.ಎಂ., ೨೦೦೧, "ಹಂಪಿ ಪರಿಸರದಲ್ಲಿ ನವಶೋಧಿತ ಶಾಸನಗಳು", ವಿಜಯನಗರ ಅಧ್ಯಯನ, ಸಂ.೬, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

೨೦. ಮೃತ್ಯುಂಜಯ ರುಮಾಲೆ, ೨೦೦೦, "ಮೂರು ಅಪರೂಪದ ಕೃತಿಗಳಲ್ಲಿ ಹಂಪಿಯ ಚಿತ್ರ : ಒಂದು ವಿಶ್ಲೇಷಣೆ", ವಿಜಯನಗರ ಅಧ್ಯಯನ ಸಂ.೫.

೨೧. ಮಹದೇವ ಸಿ., ೨೦೦೫, "ಕಂಪ್ಲಿ : ವಾಸ್ತುಶಿಲ್ಪ", ಕಂಪ್ಲಿ., ಶ್ರೀ ಭುವನೇಶ್ವರಿ ಪ್ರಕಾಶನ, ಕನ್ನಡ ಹಿತರಕ್ಷಕ ಸಂಘ, ಕಂಪ್ಲಿ.

೨೨. ರಾಜಶೇಖರ ಎಸ್., ೧೯೮೯, "ಹಂಪಿಯ ವಿರೂಪಾಕ್ಷ ದೇವಾಲಯ ಸಮೂಹ ಕಾಲಾನುಕ್ರಮದ ಅಧ್ಯಯನ", ಇತಿಹಾಸ ದರ್ಶನ, ಸಂ.೪., ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨೩. ರಾಜಗೋಪಾಲ ಕ.ವೆಂ., ೧೯೯೪, "ಹಂಪಿ-ಒಂದು ಟಿಪ್ಪಣಿ", ಇತಿಹಾಸ ದರ್ಶನ, ಸಂ.೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨೪. ವಾಸುದೇವ ಬಡಿಗೇರ, "ಹಂಪಿ ಪರಿಸರದ ಪಂಪಾಪತಿ (ವಿರೂಪಾಕ್ಷ ದೇವಾಲಯಗಳು)", ವಿಜಯನಗರ ಅಧ್ಯಯನ ಸಂ.೧೨.

೨೫. ಶಿವರುದ್ರಸ್ವಾಮಿ ಎಸ್.ಎನ್., ೨೦೦೨, "ಹಂಪಿ ವಿರೂಪಾಕ್ಷ ದೇಗುಲದ ರಾಯಗೋಪುರ ಮತ್ತು ರಥವೀಧಿ", ಇತಿಹಾಸ ದರ್ಶನ ಸಂ.೧೭. ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨೬. ಸದಾನಂದ ಪಾಟೀಲ್, "ಹರಿಹರನ ಪಂಪಾಕ್ಷೇತ್ರದ ರಗಳೆ", ಹರಿಹರ ಕಥಾಕೋಶ, ಬಸವಸಮಿತಿ, ಬಸವಭವನ, ಬೆಂಗಳೂರು.

೨೭. ಸುರೇಶ್ ಕೆ.ಎಂ., ೧೯೯೬, "ಹಂಪಿಯ ರಾಯಗೋಪುರಗಳು", ಹಂಪಿ ಪರಂಪರೆ, ಹೊಸಪೇಟೆ.

೨೮. ಸೋಮಶೇಖರ ಎಸ್.ವೈ., ೨೦೦೬, "ಹಂಪಿಯ ಬಜಾರುಗಳು", ಹಂಪಿ ಸಂಪುಟ, ಕ.ವಿ.ವಿ., ಹಂಪಿ.

೨೯. ಹಳ್ಳಿಕೇರಿ .ಎಫ್.ಟಿ., ೨೦೦೩, "ಹಂಪಿ ಕುರಿತ ೩ ಅಷ್ಟಕಗಳು", ವಿಜಯನಗರ ಅಧ್ಯಯನ ಸಂ.೮.

೩೦. ಹರಿಹರ ಕವಿಯ ಗಿರಿಜಾ ಕಲ್ಯಾಣ ಮಹಾಪ್ರಬಂಧಂ.

**ಸಂಶೋಧನಾ ಪ್ರಬಂಧಗಳು :**

೧. ಶರಣಬಸಪ್ಪ ಕೋಲ್ಕಾರ, ೧೯೯೪; **ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪ**, ಎಂ.ಫಿಲ್. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಶರಣಬಸಪ್ಪ ಕೋಲ್ಕಾರ, ೨೦೦೨; **ಕೊಪ್ಪಳ ಹಂಪಿ ಪ್ರದೇಶದ ಪ್ರಾಗಿತಿಹಾಸ ಕಾಲದ ಕಲೆ**, ಪಿ.ಎಚ್‌ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೩. ವಾಸುದೇವ ಬಡಿಗೇರ, ೨೦೦೨; **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಪಿ.ಎಚ್‌ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೪. Balasubramanya, 2004; **Virupaksha Temple at Hampi - A Study**, P.hd., Thesis, Mysore University, Mysore.

## Books / Articles

1. Acharya P.K., 1934;**Indian Architecture according to Manasara Shilpashastra**, oriental book Reprint Corporation, Delhi.
2. Acharya P.K., 1927; **Dictionery of Hindu Architecture**, Oxford University Press, Madras.
3. Basavaraj Malashetty (Ed), 1995; **Vijayakalyana**, Hospet.
4. Channabasappa .S. Patil, 1990; **Temples of Raichur & Bellary Dist.**, Mysore ; K.S.A.D
5. Channabasappa .S. Patil, 1991; **Pre-Vijayanagar Temples at Hampi,** [In Vijay progress of research 1987-88 (Ed) D.V. Devaraj, C.S.Patil, Mysore] Directorate of Archaeology and Museums.
6. Devakunjari, 1983; **Hampi**, A.S.I., New Delhi.
7. Devaraj and Patil, 1991; **Vijayanagar Progress of Research Vol**, 1984-87, 1987-88. Directorate of Archaeology and Museums, Mysore.
8. P.B.Desai, Srinivas Ritti & B.R.Gopal, 1981; **A History of Karnataka**, Dharwad.
9. Filliozat Vasundhara (Ed), 1977; **The Vijayanagar Empire,** N.B.T., New Delhi.
10. George Michell, 1985; **Vijayanagar : The Architectural Record**, South Asian studies I.

11. Foot R.B., 1916, **The Foot Collection of the Indian Pre-Historic and Proto-Historic Antiquities,** Madras.
12. George Michell, **Architectural Documentation at Vijayanagar in 1987 & 1988, Hemakuta Hill and The Virupaksha Temple Complex at Hampi** [In Vijayanagar : Progress research in 1987-88 (Ed), Devaraj & C.S.Patil], Mysore. Directorate of Archaeology and Museums.
13. George Michell, 1992; **Living wood : Sculptural Traditions of Sothern India** Bombay : Marg Publication
14. Gopal .B.R., 1985; **Vijayanagar Inscriptions,** Mysore. Directorate of Archaeology and Museums.
15. Gopal .B.R., 1982; **Minor Dynasties of South India,** Karnataka I, New Era Publication, Madras.
16. John .M. Fritz, 1985; **Research at Vijayanagar : 1980-84 [In Vijayanagar : Progress of research 1983-84** (Ed)**],** M.S. Nagaraj Rao, Mysore. Directorate of Archaeology and Museums.
17. John .M. Fritz and George Michell, 1986; **Hampi : Spelndours of Vijayanagar Empire**, Bombay Lavanaya Publishers for the Dept. of Tourism, Govt. of Karnataka.
18. Kotecha Dipak, 1982; **Hindu Ritual movement,** Study of Sri Virupaksha Tempe, Hampi (Thesis for Dip in Arch.), Ahamadabad.
19. Longhurst .A.H., 1917; **Hampi Ruins**, Calcutta.
20. Neelakanta Shastri .K.A., 1958; **A History of South India**, London.
21. Neelakanta Shastri .K.A., 1955; **History of South India from Pre-Hisotorio Times to The fall of Vijayanagar**, Oxford : Oxford University Press.
22. Phillip .B. Wagoner, 1991; **Architecture and Mythio space** at the **Hemakuta Hill**, A priliminary report [In Vijay progress of research 1987-88 (Ed) D.V. Devaraj, C.S.Patil, Mysore] Directorate of Archaeology and Museums.

23. Rajashekhar .S., 1983; **Ceiling Paintings**, Master Pices of Vijayanagar Art., D.B. Taraporevala sons and Co. Pvt. Ltd., Poona.

24. Rajashekhar .S., 1985; **A Map approach to Viajayanagar History**, Sujatha Publication, Dharwad.

25. Shivarama Murthy, 1986; **Vijayanagar Paintings**, Delhi : Govt. of India Publication Division.

26. Sharma .I.K., 1982; **The Development of early Shaiva Art & Architecture**, Sandeep Publication, Delhi.

27. Soudarajan .K.V., 1972; **Indian Temples styles,** Munshiram Manoharlal, Delhi

28. Soudarajan .K.V., 1981; **Glimpses of Indian Culture, Architecture, Art and Religious,** Sandeep Publication, Delhi.

29. Srinivasan .P.R., **The Indian Temple Art & Architecture**

30. Srinivas .K.R., 1993; **Temples of South India**, N.B.T., Green Park, New Delhi.

31. Suresh .K.M., 2003; **Temples of Karnataka**, Bharatiya Shilpakala Prakashana, New Delhi.

32. Venkataramanayya .N, **An Essay on the Origin of the South Indian Temples.**

## ಶಾಸನ ಸಂಪುಟಗಳು

೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ

೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ

೩. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು.

೪. ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್ ಸಂಪುಟಗಳು

೫. ಎಪಿಗ್ರಾಫಿಯಾ ಕರ್ನಾಟಿಕ ಸಂಪುಟಗಳು

೬. ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು

೭. ಇನ್ಸ್‌ಕ್ರಿಪ್ಷನ್ಸ್ ಆಫ್ ಕರ್ನಾಟಕ, ಬಳ್ಳಾರಿ ಜಿಲ್ಲೆ ಸಂಪುಟ, ಮೈಸೂರು

೮. ಇನ್ಸ್‌ಕ್ರಿಪ್ಷನ್ಸ್ ಆಫ್ ಕರ್ನಾಟಕ, ಕೊಪ್ಪಳ ಜಿಲ್ಲೆ ಸಂಪುಟ, ಮೈಸೂರು

## ಹಂಪಿ ಪರಸರದ ವಿರೂಪಾಕ್ಷ/ ಪಂಪಾಪತಿ ದೇವಾಲಯಗಳು











ಶ್ರೀ ವಿರೂಪಾಕ್ಷ ಮುಖ್ಯ ದೇವಾಲಯದ ತಲನಕ್ಷೆ-ಹಂಪಿ

ಕೃಪೆ : ಬಾಲಸುಬ್ರಮಣ್ಯ, ವಿರೂಪಾಕ್ಷ ಟೆಂಪಲ್ ಎಟ್ ಹಂಪಿ – ಎ ಸ್ಟಡಿ, ೨೦೦೪, ಪಿ.ಎಚ್‌ಡಿ. ಮಹಾಪ್ರಬಂಧ. ಮೈಸೂರು ವಿಶ್ವವಿದ್ಯಾಲಯ, ಮೈಸೂರು.




ಶ್ರೀ ವಿರೂಪಾಕ್ಷ ದೇವಾಲಯ ಸಂಕೀರ್ಣದ ತಲನಕ್ಷೆ–ಹಂಪಿ.

ಕೃಪೆ : ಬಾಲಸುಬ್ರಮಣ್ಯ, ವಿರೂಪಾಕ್ಷ ಟೆಂಪಲ್ ಎಟ್ ಹಂಪಿ – ಎ ಸ್ಟಡಿ, ೨೦೦೪, ಪಿ.ಎಚ್‌ಡಿ. ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.



ಪ್ರಸನ್ನ ಶ್ರೀ ಪಂಪಾ ವಿರೂಪಾಕ್ಷೇಶ್ವರ ದೇವಾಲಯದ ಅಂದಾಜು ತಲವಿನ್ಯಾಸ - ಹಿರೇಜಂತಗಲ್




ಅಳತೆ : 1 ಸೆಂ.ಮೀ. = 1 ಮೀ.

(3)





ಪಂಪಾಪತಿ ದೇವಾಲಯದ ತಲನಕ್ಷೆ
ಕನಕಗಿರಿ

ಕೃಪೆ : ಶರಣಬಸಪ್ಪ ಕೋಲ್ಕಾರ, ಗರ್ಕಳ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಎಂ.ಫಿಲ್. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.



ಹೇಮಕೂಟದಿಂದ ಕಾಣುವ ವಿರೂಪಾಕ್ಷ ದೇಗುಲದ ವಿಹಂಗಮ ನೋಟ.



ವಿರೂಪಾಕ್ಷ ದೇವಾಲಯದ ಗಾರೇಶಿಲ್ಪ, ಹಂಪಿ.



ಪಂಪಾಪತಿ ದೇವಾಲಯದ ದ್ವಾರಬಂಧ, ಕನಕಗಿರಿ.



ಮೂಲ ವಿರೂಪಾಕ್ಷ ದೇವಾಲಯ ಹೇಮಕೂಟ ಪರ್ವತ, ಹಂಪಿ.



ಶ್ರೀ ಪ್ರಸನ್ನ ವಿರೂಪಾಕ್ಷ ದೇವಾಲಯ ಪ್ರಧಾನ ಮಹಾಮಂಟಪ, ಹಂಪಿ.



ಶ್ರೀ ಪ್ರಸನ್ನ ವಿರೂಪಾಕ್ಷ ದೇವಾಲಯ ಹಾಗೂ ಸನಿಹದ ಕಾಲುವೆ ಸಂಪರ್ಕ, ಹಂಪಿ.



ಶ್ರೀ ಭುವನೇಶ್ವರಿ ದೇವಾಲಯದ ದ್ವಾರಬಂಧ, ಹಂಪಿ.



ಶ್ರೀ ಪಂಪಾಂಬಿಕಾದೇವಿ ದೇವಾಲಯದ ದ್ವಾರಬಂಧ, ಹಂಪಿ.



ಶ್ರೀ ವಿರೂಪಾಕ್ಷೇಶ್ವರ ದೇವಾಲಯದ ಆವರಣ, ಹಂಪಿ.



ಶ್ರೀ ಪ್ರಸನ್ನ ಪಂಪಾವಿರುಪಾಕ್ಷ ದೇವಸ್ಥಾನದ ಸಭಾಮಂಟಪ, ಹಿರೇಜಂತಗಲ್.



ಶ್ರೀ ಪ್ರಸನ್ನ ಪಂಪಾವಿರುಪಾಕ್ಷ ದೇವಸ್ಥಾನದ ಪ್ರಧಾನ ದ್ವಾರಮಂಟಪ, ಹಿರೇಜಂತಗಲ್.



ಪಂಪಾಪತಿ ದೇವಸ್ಥಾನದ ಪ್ರಧಾನ ದ್ವಾರಮಂಟಪ, ಕಂಪ್ಲಿ ಕೋಟೆ.



ಪಂಪಾಪತಿ ದೇವಾಲಯದ ಹೊರಭಾಗ, ಅಂಜನಹಳ್ಳಿ.



ಶ್ರೀ ಪಂಪಾಪತಿ ಶಿವಲಿಂಗ, ಕಂಪ್ಲಿಕೋಟೆ.



ಶ್ರೀ ಪಂಪಾಪತಿ ದೇವಾಲಯದ ಸಭಾಮಂಟಪ, ಚಿಕ್ಕಜಂತಗಲ್.



ಶ್ರೀ ಮಹಿಷಾಸುರ ಮರ್ದಿನಿ ಪಾರ್ವತಿ ದೇವಿಯರ ಮೂರ್ತಿ ಶಿಲ್ಪಗಳು, ಪಂಪಾಸರೋವರ.



ಶ್ರೀ ಪಂಪಾಪತಿ ದೇವಾಲಯದ
ಸಭಾ ಮಂಟಪದ ಕಂಬ, ಬೆಣ್ಣಿಹಳ್ಳಿ.



ಪಂಪಾಪತಿ ದೇವಾಲಯದ ಮುಖ್ಯದ್ವಾರ ದ್ವಾರ ಪಟ್ಟಿಕೆ, ಬೆಣ್ಣಿಹಳ್ಳಿ.



ಮನ್ಮಥ ಕೊಂಡ, ಹಂಪಿ.



ಪಂಪಾಪತಿ ಫಲಪೂಜಾ ಉತ್ಸವ, ಹಂಪಿ.



ರಥೋತ್ಸವ ಸಂದರ್ಭದ ಭಕ್ತ ಸಮೂಹ



ಶ್ರೀ ವಿರೂಪಾಕ್ಷೇಶ್ವರ ರಥೋತ್ಸವ, ಹಂಪಿ.



ಶ್ರೀ ಪ್ರಸನ್ನ ಪಂಪಾ ವಿರೂಪಾಕ್ಷೇಶ್ವರ ರಥೋತ್ಸವ, ಹಿರೇಜಂತಗಲ್.



ಜಾತ್ರೆ ಸಂದರ್ಭದ ಸಿಹಿತಿಂಡಿ ಅಂಗಡಿಗಳು.

## ಮೂರ್ತಿ ಶಿಲ್ಪಗಳು



ಮುಕ್ತಿ ನರಸಿಂಹಸ್ವಾಮಿ, ಹಂಪಿ.



ಸುಬ್ರಮಣ್ಯ/ಕಾರ್ತಿಕೇಯ ಶಿಲ್ಪ, ಹಂಪಿ.



ಶಾರದಾದೇವಿ ಶಿಲ್ಪ, ಹಂಪಿ.



ವೀರಭದ್ರೇಶ್ವರ ಶಿಲ್ಪ, ಹಿರೇಜಂತಗಲ್.



ಮಹಿಷಾಸುರ ಮರ್ದಿನಿ ಶಿಲ್ಪ, ಬೆಣ್ಣಹಳ್ಳಿ.



ಕಾಲಭೈರವ ಶಿಲ್ಪ, ಪಂಪಾಸರೋವರ.